ಶ್ರೀ

॥ ಶ್ರೀ ವರಾಹಮಿಹಿರಾಚಾರ್ಯ ಕೃತ ಹೋರಾಶಾಸ್ತ್ರಂ ॥

# ಬೃಹಜ್ಜಾತಕ

## ಕರ್ನಾಟಕ ಭಾಷಾ ಟೀಕಾ ಸಹಿತ


ಅನುವಾದಕರು ಮತ್ತು ಪ್ರಕಾಶಕರು
ಕಡ್ತಿ ಶ್ರೀನಿವಾಸ ಶರ್ಮಾ
ಸಿದ್ಧಾಪುರ, ದ.ಕ.

# ಪ್ರಸ್ತಾವನೆ

ಶ್ಲೋಕಃ ॥ ಧನ್ವಂತರಿ ಕ್ಷಪಣಕಾಮರಸಿಂಹ ಶಂಕು ।
ವೇತಾಲ ಭಟ್ಟ ಘಟಕರ್ಪರ ಕಾಲಿದಾಸಾಃ ॥
ಖ್ಯಾತೋವರಾಹಮಿಹಿರೋ ನೃಪತೇಃ ಸಭಾಯಾಂ ।
ರತ್ನಾನಿವೈವರರುಚಿರ್ನವ ವಿಕ್ರಮಸ್ಯ ॥೧॥

ಶ್ರೀ ಅವಂತಿಕಾ (ಉಜ್ಜಯಿನಿ) ನಗರದ ವಿಕ್ರಮಾರ್ಕ ಮಹಾರಾಜನ ಆಸ್ಥಾನ ಪಂಡಿತರಾದ ಶ್ರೀ ವರಾಹಮಿಹಿರಾಚಾರ್ಯರು ಸೂರ್ಯೋಪಾಸನೆಯಿಂದುಂಟಾದ ವರಪ್ರಸಾದದಿಂದ ಶಕ ೪೨೭ರಲ್ಲಿ "ಪಂಚಸಿದ್ಧಾಂತಿಕಾ" ಗ್ರಂಥವನ್ನು ರಚಿಸಿದರು. ನಂತರ "ಸೂರ್ಯಃ ಪಿತಾ ಮಹೋವ್ಯಾಸೋ ವಸಿಷ್ಠೋತ್ರಿ ಪರಾಶರಃ" ಇತಿ ಮುಂತಾದವರಿಂದ ರಚಿಸಲ್ಪಟ್ಟ ಹದಿನೆಂಟು ಹೋರೆಗಳನ್ನು ಮಥನ ಮಾಡಿ ನಾಲ್ಕುನೂರ ಒಂಬತ್ತು (೪೦೯) ಶ್ಲೋಕಗಳನ್ನು ವೇದಗಳ ಸಾರ ಬರುವಂತೆಯೂ, ಸೃಷ್ಟಿ ಸ್ಥಿತಿ ಸಂಹಾರ ಕ್ರಮಗಳೂ ಮತ್ತು ಮನುಷ್ಯಾದಿ ಎಲ್ಲಾ ಜೀವರಿಗೂ ಅಹೋರಾತ್ರಿ ನಡೆಯತಕ್ಕ ಫಲಗಳನ್ನು ಹೇಳುವಂತೆಯೂ "ಹೋರಾ" ಶಾಸ್ತ್ರವನ್ನು ಅಂದರೆ ಬೃಹಜ್ಜಾತಕವನ್ನು ರಚಿಸಿದರು. ಇದರಲ್ಲಿಯ ಶ್ಲೋಕಗಳಿಗೆ "ಅರ್ಥಬಹುಲಂ" ಎಂತ ಇದ್ದುದರಿಂದ ಪ್ರತಿಪದಾರ್ಥ ಅಂತರ್ಯಾರ್ಥ ಪರಂಪರಾಗತವಾಗಿ ಒಬ್ಬರಿಂದೊಬ್ಬರಿಗೆ ಹೇಳಿ ಬಂದ ಅರ್ಥ ಹೀಗೆ ಅನೇಕಾರ್ಥಗಳು ಇದ್ದು ಕಬ್ಬಿಣದ ಕಡಲೆ ತಿಂದಂತೆ ಆಗುವುದು. ಇದರ ಮೇಲೆ ಶಕ ೮೮೮ರಲ್ಲಿ ಉತ್ಪಲ ಭಟ್ಟರು ಚಿಂತಾಮಣಿ ನಾಮಕ ೭೫೦೦ ಟೀಕಾ ಭಟ್ಟೋತ್ಪಲ ವ್ಯಾಖ್ಯಾನವೆಂತ ಬರೆದಿರುತ್ತಾರೆ. ಅದರ ಆಧಾರದ ಮೇಲೆ ಕನ್ನಡ, ತೆಲುಗು, ಮಲೆಯಾಳ, ಮರಾಠಿ, ಗುಜರಾಥಿ, ಹಿಂದಿ, ಬಂಗಾಲಿ ಇತ್ಯಾದಿ ಎಷ್ಟೋ ಭಾಷೆಗಳಲ್ಲಿ ಬರೆದಿರುತ್ತಾರೆ ಇಲ್ಲಿ ಶ್ರೀ ವರಾಹಮಿಹಿರಾಚಾರ್ಯರು ವಿವರಿಸಿದ ಭಾವಫಲಾದಿ ಶುಭಾಶುಭ ಫಲಗಳು ಅನುಭವಕ್ಕೆ ಬರಬೇಕಾದರೆ ಪ್ರತ್ಯಕ್ಷ ದೃಕ್‌ಸಿದ್ಧಾಂತ ಪ್ರಕಾರ ಗ್ರಹರ ಗಣಿತಗಳನ್ನು ಮಾಡಿ, ಭಾವಸ್ಫುಟ, ಸಂಧಿಸ್ಫುಟ, ಷಡ್ವರ್ಗ, ಷಡ್ಬಲ, ಗ್ರಹರ ಬಲಾಬಲ, ದೃಷ್ಟಿಗಣಿತ, ಇಷ್ಟಕಷ್ಟ ಸಾಧನ, ಸ್ಪಷ್ಟ ಶುಭ, ಸ್ಪಷ್ಟ ಅಶುಭ, ಆಯುಷ್ಕಲಾ ಗಣಿತದಿಂದ ಆಯುರ್ದಾಯಾಂತ್ಯದ ವರೆಗೆ ಗುಣಿಸಿಕೊಂಡು ಹೋರಾ ಫಲವನ್ನು ಹೇಳುವಂತೆ ಬರೆದಿರುತ್ತಾರೆ ಆದರೆ ಅಲ್ಲಲ್ಲಿ ಆಯಾಯ ಗಣಿತಗಳನ್ನು ಮಾಡುವುದು ಬಹಳ ಕ್ಲಿಷ್ಟವಾದುದರಿಂದ ಇಲ್ಲಿ ಬರೆಯಲಿಲ್ಲ. ಶಕ ೬೬೧ರಲ್ಲಿ ಶ್ರೀಪತಿ ಆಚಾರ್ಯರು ಆಯುರ್ದಾಯ ಗಣಿತವನ್ನು "ಶ್ರೀಪತಿ ಪದ್ಧತಿ" ಎಂತಲೂ ಶಕ ೧೮೦೦ಕ್ಕೆ ಸರಿಯಾಗಿ ಶ್ರೀ ವೆಂಕಟೇಶ ಕೇತಕರ ಬಾಪೂ ಶಾಸ್ತ್ರಿಗಳು ಆಯಾಯ ಕಾಲದಲ್ಲಿ ಪ್ರತ್ಯಕ್ಷಕ್ಕೆ ಸರಿಯಾಗಿ ಗ್ರಹರು ಬರುವಂತೆ ಬೀಜಸಂಸ್ಕಾರಾದಿಗಳನ್ನು ಕೊಟ್ಟು "ಕೇತಕಿ ಗ್ರಹ ಗಣಿತಂ" ಎಂತಲೂ ಬರೆದಿರುತ್ತಾರೆ. ಇದನ್ನು ವ್ಯಾಖ್ಯಾನದ ಒಟ್ಟಿಗೆ ಸೇರಿಸಿದರೆ ಗ್ರಂಥಬಾಹುಲ್ಯವಾಗುವುದರಿಂದ ನವೀನ ದೃಕ್‌ಸಿದ್ಧಾಂತ ಪ್ರಕಾರ ಗ್ರಹಸ್ಫುಟಾದಿ ಎಲ್ಲಾ ಗಣಿತಗಳನ್ನು ಶ್ರೀಪತಿ ಆಚಾರ್ಯರ ಆಯುರ್ದಾಯಾಂತ್ಯ, ಗಣಿತವನ್ನು ಶ್ಲೋಕ ಕನ್ನಡ ಟೀಕಾ ಉದಾಹರಣೆ ಸಹಿತ ಬೇರೆ ಪುಸ್ತಕಗಳನ್ನು ಬರೆದಿರುತ್ತೇನೆ. ಇದರಲ್ಲಿ ಮೂಲ ಶ್ಲೋಕಗಳಿಗೆ ಟೀಕೆ ಬರೆಯುವಷ್ಟು ಬುದ್ಧಿ ಯೋಗ್ಯತೆ ನನಗಿಲ್ಲವಾದರೂ ಈ ಪುಸ್ತಕವು ಜ್ಯೋತಿಷದಲ್ಲಿ ಅತೀ ಅಗತ್ಯವಿದ್ದು ಈಗ ಹತ್ತೆಂಟು ವರ್ಷಗಳಿಂದ ಕನ್ನಡ ಭಾಷೆಯಲ್ಲಿ ಸಿಕ್ಕುವುದಿಲ್ಲ. ಮತ್ತು ಪ್ರಕೃತ ಕಾಲದಲ್ಲಿ ಗಣಿತಾದಿಯಾಗಿ ಜ್ಯೋತಿಶ್ಶಾಸ್ತ್ರ ಗ್ರಂಥಗಳು ಲೋಪವಾಗುತ್ತಾ ಬಂದಿದೆಯಾದ್ರಿಂದ ನನಗೆ ೨೨ ವರ್ಷ ಅನುಗ್ರಹಪೂರ್ವಕವಾಗಿ ಗಣಿತಾದಿ ವಿದ್ಯೆಯನ್ನು ಕಲಿಸಿದ ಶ್ರೀ ಗುರುಗಳ ದೇವರ

ಪ್ರೀತಿ ಅನುಗ್ರಹಕ್ಕಾಗಿ ಅಲ್ಲದೆ ಲೋಕಹಿತವನ್ನು ಬಯಸಿ ಈ ಗ್ರಂಥದ ಮೂಲ ಶ್ಲೋಕ ಆದರಲ್ಲಿರುವ ಯಥಾರ್ಥವಾದ ಟೀಕೆ ಶುದ್ಧವಾಗಿ ಮುಂದೆ ಜನರಿಗೆ ಸಿಕ್ಕಿ ನನ್ನಿಂದ ವಿದ್ಯೆಗೆ ಸೇವೆಯಾಗಲೆಂದು ಇದರಲ್ಲಿ ಶ್ಲೋಕಗಳನ್ನು ತಪ್ಪಿಲ್ಲದಂತೆ ಬರೆದು ಭಟ್ಟೋತ್ಪಲ ವ್ಯಾಖ್ಯಾನಕ್ಕನು ಸಾರವಾಗಿ ಸುಲಭದಲ್ಲಿ ಎಲ್ಲಾ ವಿಷಯಗಳು ತಿಳಿಯುವಂತೆ ಉದಾಹರಣೆ ಸಹಿತ ಕನ್ನಡ ಭಾಷೆಯಲ್ಲಿ ಟೀಕೆ ಬರೆದಿರುತ್ತೇನೆ. ಇದರಲ್ಲಿ ಲೋಪದೋಷಗಳೇನಾದರೂ ತೋರಿದಲ್ಲಿ ಕ್ಷಮಿಸಿ, ಮುಂದೆ ಸುಧಾರಿಸಿ ಮುದ್ರಣ ಮಾಡಲು ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಇತಿ

ಶ್ರೀ ಶಕ ೧೯೦೪ ದುಂದುಭಿ ಸಂ। — ಕಡ್ರಿ ಶ್ರೀನಿವಾಸ ಶರ್ಮಾ
ಶ್ರಾವಣ ಶುಕ್ಲ ೫ಯು ರವಿವಾರ — ಸಿದ್ದಾಪುರ ದ.ಕ.

# ॥ ವಿಷಯಾನುಕ್ರಮಣಿಕಾ ॥



*ವಿ ಸೂ  ಶ್ಲೋಕದಲ್ಲಿ ರಾಶಿಶೀಲಾಧ್ಯಾಯ ಎಂತ ಇದ್ದು ಇದಕ್ಕೆ ಕೆಲವರು ಋಕ್ಷಶೀಲಾ, ಚಂದ್ರ ರಾಶಿಶೀಲಾ, ಸೂರ್ಯಾದಿರಾಶಿಶೀಲವೆಂತ ೩ ಅಧ್ಯಾಯಗಳನ್ನು ಮತ್ತುದ್ರೇಕ್ಕಾಣಾಧ್ಯಾಯದಲ್ಲಿ ಉಪಸಂಹಾರವೆಂದು ೧ ಅಧ್ಯಾಯವನ್ನು ಹೆಚ್ಚಿಸಿ ೨೮ ಅಧ್ಯಾಯಗಳನ್ನಾಗಿ ವಿಭಾಗಿಸಿದ್ದಾರೆ

॥ ಓಂ ॥

## ॥ ಶ್ರೀ ಗುರುಭ್ಯೋ ನಮಃ ॥

## ॥ ಟೀಕಾಕರ್ತೃ ಮಂಗಲಾಚರಣ ॥

॥ ಲಕ್ಷ್ಮೀ ನಾರಾಯಣಂ ಭಕ್ತ್ಯಾ ವಂದೇ ಸೂರ್ಯಾದಿಕಾನ್ ಗ್ರಹಾನ್ ।
ಪಿತರೌ ಗುರೂನ್ ಋಷೀಂಶ್ಚೈವ ನತಕಲ್ಪದ್ರುಮಾನ್ ಮುದಾ ॥
ಕರ್ನಾಟ ಭಾಷಯಾ ಹೋರಾಶಾಸ್ತ್ರ ಟೀಕಾಂ ಯಥಾಮತಿ ।
ಚಿಕೀರ್ಷಾಮಿ ಬಾಲಕೋಹಂ ಕೃಪಯೈವ ಹರೇರ್ಗುರೋಃ ॥
ಶ್ರೀನಿವಾಸಾಭಿಧೋಃ ಸಿದ್ಧಾಪುರೀಯೋ ಕೇವಲಂ ಹರೇಃ ।
ಪ್ರೀತ್ಯೈ ಕರೋತಿ ಯತ್ನೋಯಂ ವೆಂಕಟೇಶ ತನೂಭವಃ ॥
ಯತ್ನೋಯಂ ಸಫಲೋ ಭೂಯಾತ್ ಶ್ರೀನಿವಾಸಕೃಪಾದೃಶಾ ।
ಪ್ರಾರ್ಥಯೇ ನಮ್ರ ಶಿರಸಾ ಶ್ರೀ ಶಂ ಸೂರ್ಯಾದಿಕಾನ್ ಗ್ರಹಾನ್ ॥

॥ ಶ್ರೀ ವರಾಹಮಿಹಿರಾಚಾರ್ಯ ಕೃತ ಹೋರಾಶಾಸ್ತ್ರಂ ॥

# ಬೃಹಜ್ಜಾತಕ

## ॥ ಕರ್ನಾಟಕ ಭಾಷಾ ಟೀಕಾ ಸಹಿತ ॥

ಶ್ರೀ

॥ ರಾಶಿ ಭೇದಾಧ್ಯಾಯಃ ॥

### ಮಂಗಳಾಚರಣ

ಮೂರ್ತಿತ್ವೇ ಪರಿಕಲ್ಪಿತಃ ಶಶಭೃತೋ ವರ್ತ್ಮಾಪುನರ್ಜನ್ಮನಾ ।
ಮಾತ್ಮೇತ್ಯಾತ್ಮ ವಿದಾಂ ಕೃತುಶ್ಚ ಯಜತಾಂ ಭರ್ತಾಽಮರಜ್ಯೋತಿಷಾಂ ॥
ಲೋಕಾನಾಂ ಪ್ರಲಯೋದ್ಭವ ಸ್ಥಿತಿ ವಿಭುಶ್ಚಾನೇಕಧಾಯಃ ಶ್ರುತೌ ।
ವಾಚಂ ನಃ ಸದದಾತ್ವನೇಕ ಕಿರಣಸ್ತ್ರೈಲೋಕ್ಯ ದೀಪೋ ರವಿಃ ॥೧॥

ಯಾವನು ಶಶಕವನ್ನು ಧರಿಸಿದ ಚಂದ್ರನಿಗೆ ಪ್ರಕಾಶಮಯ ಮೂರ್ತಿಯನ್ನಾಗಿ ಮಾಡುವನೋ ಮತ್ತು ಪುನರ್ಜನ್ಮ ಹೊಂದದೆ ಇರುವ ಮುಕ್ತ ಜೀವರುಗಳಿಗೆ ಹಾದಿಯಾಗಿರುವ ಆತ್ಮತತ್ವವನ್ನು ತಿಳಿಯುವವರಿಗೆ ಸಚ್ಚಿದಾನಂದ ಸ್ವರೂಪನಾದ ಯಜ್ಞಾದಿಗಳಿಂದ ಪೂಜಿಸುವವರಿಗೂ ದೇವತೆಗಳಿಗೂ ಗ್ರಹ ನಕ್ಷತ್ರಗಳಿಗೂ ಅಧಿಪತಿಯಾಗಿರುವ ಲೋಕಕ್ಕೆ ನಾಶ, ಸೃಷ್ಟಿ, ಸ್ಥಿತಿಗಳಿಗೆ ಪ್ರಭುವಾಗಿರುವ ವೇದಗಳಲ್ಲಿ ಅನೇಕ ಪ್ರಕಾರದಿಂದ ಸ್ತುತಿಸಲ್ಪಡುವ ಅಸಂಖ್ಯಾತ ಕಿರಣಗಳಿಂದ ಮೂರು ಲೋಕಕ್ಕೂ ಪ್ರಕಾಶನಾದ "ಶ್ರೀ ಸೂರ್ಯನಾರಾಯಣ"ನು ನಮಗೆ ವಾಕ್ಸಿದ್ಧಿಯನ್ನು ಅನುಗ್ರಹಿಸಲಿ.

ಭೂಯೋಭಿಃ ಪಟುಬುದ್ಧಿಭಿಃ ಪಟುಧಿಯಾಂ ಹೋರಾಫಲಜ್ಞಪ್ತಯೇ ।
ಶಬ್ದನ್ಯಾಯ ಸಮನ್ವಿತೇಷು ಬಹುಶಃ ಶಾಸ್ತ್ರೇಷು ದೃಷ್ಟೇಷ್ವಪಿ ॥
ಹೋರಾತಂತ್ರ ಮಹಾರ್ಣವ ಪ್ರತರಣೇ ಭಗ್ನೋದ್ಯ ಮಾನಾಮಹಂ ।
ಸ್ವಲ್ಪಂ ವೃತ್ತ ವಿಚಿತ್ರ ಮರ್ಥಬಹುಲಂ ಶಾಸ್ತ್ರ ಪ್ಲವಂ ಪ್ರಾರಭೇ ॥೨॥

ಜ್ಯೋತಿಷ ಶಾಸ್ತ್ರವು ಸೂಕ್ಷ್ಮಬುದ್ಧಿಯುಳ್ಳ ಪಂಡಿತರಿಗೆ ಜನ್ಮಕಾಲದ ಶುಭಾಶುಭ ಫಲ ತಿಳುವಳಿಕೆಗಾಗಿ ವಸಿಷ್ಠ, ಅತ್ರಿ, ಪರಾಶರ, ನಾರದ, ಕಶ್ಯಪ ಮುಂತಾಗಿ ಬಹು ಸೂಕ್ಷ್ಮಬುದ್ಧಿಯುಳ್ಳ ಅನೇಕರು ವ್ಯಾಕರಣ, ನ್ಯಾಯ, ಅರ್ಥಶಾಸ್ತ್ರಗಳನ್ನು ಯುಕ್ತಿಪೂರ್ವಕವಾಗಿ ತಿಳಿದವರಿಂದ ರಚಿಸಲ್ಪಟ್ಟ ಅನೇಕ ಗ್ರಂಥಗಳನ್ನು ಎಷ್ಟು ನೋಡಿದರೂ ಶುಭಾಶುಭ ಸೂಚಕವಾದ ಫಲಗಳು ತಿಳಿಯದೆ ಜ್ಯೋತಿಶ್ಶಾಸ್ತ್ರ ಮಹಾಸಮುದ್ರವು ದಾಟಲಸಾಧ್ಯವಾಗಿ ನಿರಾಶೆ ಹೊಂದಿದ ಜಿಜ್ಞಾಸುಗಳ ಮನೋರಥವು ಪೂರ್ಣವಾಗುವುದಕೋಸ್ಕರ ನಾನು ಸಣ್ಣಸಣ್ಣ ವೃತ್ತಗಳಿಂದಲೂ ವಿಚಿತ್ರ ಮತ್ತು ಅಮೋಘವಾದ ಅರ್ಥಬಾಹುಲ್ಯದಿಂದಲೂ ಕೂಡಿದ ಹೋರಾಶಾಸ್ತ್ರವೆಂಬ ನಾವೆಯ ರೂಪವಾದ ಗ್ರಂಥವನ್ನು ರಚಿಸುತ್ತೇನೆ.

**ಹೋರೇತ್ಯಹೋರಾತ್ರ ವಿಕಲ್ಪಮೇಕೇ ವಾಂಛಂತಿ ಪೂರ್ವಾಪರ ವರ್ಣಲೋಪಾತ್ ।**
**ಕರ್ಮಾರ್ಜಿತಂ ಪೂರ್ವಭವೇಸದಾದಿ ಯತ್ತಸ್ಯ ಪಕ್ತಿಂ ಸಮಭಿವ್ಯನಕ್ತಿ ॥೩॥**

ಕೆಲವರು ಅಹೋರಾತ್ರ ಎಂಬ ಪದದ ಆದಿಅಂತ್ಯಕ್ಷರಗಳನ್ನು ಬಿಟ್ಟು ಅರ್ಥವಿಶೇಷಣಕ್ಕಾಗಿ "ಹೋರಾ" ಎಂತ ಕರೆಯಲು ಇಚ್ಛಿಸುತ್ತಾರೆ ಈ ಹೋರಾಶಾಸ್ತ್ರವು ಅಹೋರಾತ್ರ ಫಲ ಸೂಚಕ ವಾಗುವುದರಿಂದ ಪೂರ್ವಜನ್ಮದಲ್ಲಿಯ ಕರ್ಮಕ್ಕನುಗುಣವಾಗಿ ಶುಭಾಶುಭ ಮಿಶ್ರಿತ ಫಲಗಳನ್ನು ಆದರ ಅನುಭವಕಾಲವನ್ನು ಸರಿಯಾಗಿ ತಿಳಿಯಪಡಿಸುತ್ತದೆ

**ಕಾಲಾಂಗಾನಿ ವರಾಂಗಮಾನನಮುರೋ ಹೃತ್ಕ್ರೋಡ ವಾಸೋಭೃತೋ ।**
**ವಸ್ತಿರ್ವ್ಯಂ ಜನಮೂರು ಜಾನುಯುಗಲೇ ಜಂಘೇ ತತೋಽಂಘ್ರಿದ್ವಯಮ್ ॥**
**ಮೇಷಾಶ್ವಿ ಪ್ರಥಮಾ ನವರ್ಕ್ಷ ಚರಣಾಶ್ಚಕ್ರಸ್ಥಿತಾ ರಾಶಯೋ ।**
**ರಾಶಿಕ್ಷೇತ್ರ ಗೃಹರ್ಕ್ಷಭಾನಿ ಭವನಂ ಚೈಕಾರ್ಥಸಂ ಪ್ರತ್ಯಯಾಃ ॥೪॥**

ಮೇಷಾದಿ ರಾಶಿಯು ಅಶ್ವಿನೀ ನಕ್ಷತ್ರ ಮೊದಲಾಗಿ ಒಂಬತ್ತು ಚರಣಗಳಿಗೆ ಒಂದು ರಾಶಿಯಂತೆ ಹನ್ನೆರಡು ರಾಶಿಗಳಿಗೆ ಒಂದು ಚಕ್ರವಾಗುವುದು. ಈ ರಾಶಿಗಳು ಕಾಲರೂಪೀ ಮನುಷ್ಯನ ಅವಯವಗಳೆಂದು ಕಲ್ಪಿಸಿದೆ, ಹ್ಯಾಗೆಂದರೆ ಶಿರಸ್ಸು ಮೇಷ, ಮುಖ ವೃಷಭ, ಎದೆ ಮಿಥುನ, ಹೃದಯ ಕರ್ಕಾಟಕ, ಹೊಟ್ಟೆ ಸಿಂಹ, ಕಟಿಪ್ರದೇಶ ಕನ್ಯಾ, ನಾಭಿಯ ಕೆಳಭಾಗ ತುಲಾ, ಸ್ತ್ರೀ ಪುರುಷ ಚಿಹ್ನೆ (ಲಿಂಗ) ವೃಶ್ಚಿಕ, ಎರಡು ತೊಡೆಗಳು ಧನು, ಎರಡು ಮೊಣಕಾಲು ಮಕರ, ಎರಡು ಕಣಕಾಲು ಕುಂಭ, ಎರಡೂ ಪಾದಗಳು ಮೀನವೆಂದು ತಿಳಿಯುವುದು ರಾಶಿ, ಕ್ಷೇತ್ರ, ಗೃಹ, ಕ್ರ್ಷ, ಭಂ, ಭವನಂ ಎಂತ ಬಂದಲ್ಲಿ ರಾಶಿ ಅಂತ ಒಂದೇ ಅರ್ಥ ಶಬ್ದಗಳೆಂದು ತಿಳಿಯತಕ್ಕದ್ದು ಜನ್ಮಕಾಲದಲ್ಲಿ ಪಾಪಗ್ರಹರಿಂದ ಕೂಡಿದ ಅಥವಾ ದೃಷ್ಟಿ ಇರುವ ರಾಶಿಯು ಕಾಲಪುರುಷನ ಯಾವ ಅಂಗವಾಗುವುದೋ ಅದು ಹೃಸ್ವ ವ್ಯಂಗ ಅಥವಾ ಆ ಗ್ರಹ ದಶಾಕಾಲದಲ್ಲಿ ವ್ರಣ ಮುಂತಾದುವುಗಳನ್ನೂ, ಶುಭಗ್ರಹರಿಂದ ಕೂಡಿದ ಅಥವಾ ದೃಷ್ಟಿ ಇರುವ ಅಂಗಗಳಿಗೆ ಪುಷ್ಟಿ. ವ್ಯಂಗ ಹೃಸ್ವ ಇತ್ಯಾದಿ ದೋಷಗಳಿಲ್ಲವೆಂದು ತಿಳಿಯತಕ್ಕದ್ದು

**॥ ರಾಶಿಚಕ್ರ ಪೂರ್ವಾರ್ಧ ॥**

| ವರ್ಣ | ಚೂ ಚೇ<br>ಚೋ ಲಾ | ಲೀ ಲೂ<br>ಲೇ ಲೋ | ಆ ಈ<br>ಉ ಏ | ಓ ವಾ<br>ವಿ ವೂ | ವೇ ವೋ<br>ಕಾ ಕಿ | ಕೂ ಘ<br>ಙ ಛ | ಕೇ ಕೋ<br>ಹಾ ಹಿ |
|---|---|---|---|---|---|---|---|
| ನಕ್ಷತ್ರ | ಅಶ್ವಿನಿ | ಭರಣಿ | ಕೃತ್ತಿಕಾ | ರೋಹಿಣಿ | ಮೃಗಶಿರಾ | ಆರ್ದ್ರಾ | ಪುನರ್ವಸು |
| ರಾಶಿ | ಮೇಷ | ಮೇಷ | ಮೇಷ ೧<br>ವೃಷಭ ೩ | ವೃಷಭ | ವೃಷಭ ೨<br>ಮಿಥುನ ೨ | ಮಿಥುನ | ಮಿಥುನ ೩<br>ಕರ್ಕ ೧ |
| ವರ್ಣ | ಹೂ ಹೇ<br>ಹೋ ಡಾ | ಡೀ ಡೂ<br>ಡೇ ಡೋ | ಮಾ ಮಿ<br>ಮೂ ಮೇ | ಮೋ ಟಾ<br>ಟೀ ಟೂ | ಟೇ ಟೋ<br>ಪಾ ಪಿ | ಪೂ ಷ<br>ಣ ಠ | ಪೇ ಪೋ<br>ರಾ ರಿ |
| ನಕ್ಷತ್ರ | ಪುಷ್ಯಾ | ಆಶ್ಲೇಷಾ | ಮಘಾ | ಹುಬ್ಬಾ | ಉತ್ತರಾ | ಹಸ್ತಾ | ಚಿತ್ರಾ |
| ರಾಶಿ | ಕರ್ಕಾಟಕ | ಕರ್ಕಾಟಕ | ಸಿಂಹ | ಸಿಂಹ | ಸಿಂಹ ೧<br>ಕನ್ಯಾ ೩ | ಕನ್ಯಾ | ಕನ್ಯಾ ೨<br>ತುಲಾ ೨ |

॥ ರಾಶಿಚಕ್ರ ಉತ್ತರಾರ್ಧ ॥

| ವರ್ಣ | ರೂ ರೇ ರೋ ತಾ | ತೀ ತೂ ತೇ ತೋ | ನಾ ನೀ ನೂ ನೇ | ನೋ ಯಾ ಯಿ ಯೂ | ಯೇ ಯೋ ಭಾ ಭಿ | ಭೂ ಧ ಫ ಢ | ಭೇ ಭೋ ಜಾ ಜೀ |
|---|---|---|---|---|---|---|---|
| ನಕ್ಷತ್ರ | ಸ್ವಾತಿ | ವಿಶಾಖಾ | ಅನು ರಾಧಾ | ಜ್ಯೇಷ್ಠಾ | ಮೂಲಾ | ಪೂರ್ವಾ ಷಾಢಾ | ಉತ್ತರಾ ಷಾಢಾ |
| ರಾಶಿ | ತುಲಾ | ತುಲಾ ೩ ವೃಶ್ಚಿಕ ೧ | ವೃಶ್ಚಿಕ | ವೃಶ್ಚಿಕ | ಧನು | ಧನು | ಧನು ೧ ಮಕರ ೩ |
| ವರ್ಣ | ಜೂ ಜೆ ಜೋ ಖಾ | ಖಿ ಖೂ ಖೇ ಖೋ | ಗಾ ಗೀ ಗೂ ಗೇ | ಗೋ ಸಾ ಸೀ ಸೂ | ಸೇ ಸೋ ದಾ ದೀ | ದೂ ಝು ಞ ಥ | ದೇ ದೋ ಚಾ ಚೀ |
| ನಕ್ಷತ್ರ | ಅಭಿಜಿತ್ | ಶ್ರವಣ | ಧನಿಷ್ಠಾ | ಶತಭಿಷಾ | ಪೂರ್ವಾ ಭಾದ್ರಾ | ಉತ್ತರಾ ಭಾದ್ರಾ | ರೇವತಿ |
| ರಾಶಿ | ೦ | ಮಕರ | ಮಕರ ೨ ಕುಂಭ ೨ | ಕುಂಭ | ಕುಂಭ ೩ ಮೀನ ೧ | ಮೀನ | ಮೀನ |

ಮಾತ್ಸ್ಯೌಘಟೀ ನೃಮಿಥುನಂ ಸಗದಂ ಸವೀಣಂ ।
ಚಾಪೀನರೋಽಶ್ವಜಘನೋ ಮಕರೋ ಮೃಗಾಸ್ಯಃ ॥
ತೌಲೀಸಸಸ್ಯ ದಹನಾ ಪ್ಲವಗಾಚ ಕನ್ಯಾ ।
ಶೇಷಾಃಸ್ವನಾಮ ಸದೃಶಾಃ ಸ್ವಚರಾಶ್ಚ ಸರ್ವೇ ॥೫॥

ರಾಶಿಗಳ ಸ್ವರೂಪವು ಹ್ಯಾಗೆಂದರೆ ಅನ್ಯೋನ್ಯ ಬಾಲದ ಕಡೆ ಮುಖವಾಗಿರುವ ಎರಡು ಮೀನುಗಳೇ ಮೀನ ರಾಶಿಯು. ಕುಂಭವನ್ನು (ರಿಕ್ತಕುಂಭವೆಂತಲೂ ಹೇಳುತ್ತಾರೆ) ಭುಜದ ಮೇಲೆತ್ತಿಕೊಂಡಿರುವ ಪುರುಷ ಕುಂಭರಾಶಿಯು. ಗದೆಯನ್ನು ಹಿಡಿದ ಪುರುಷನೂ ವೀಣೆಯನ್ನು ಹಿಡಿದ ಸ್ತ್ರೀಯೂ ಅಂದರೆ ಸ್ತ್ರೀಪುರುಷ ದ್ವಂದ್ವರೂಪವಾಗಿರುವುದೇ ಮಿಥುನ ರಾಶಿಯು ಕುದುರೆಯ ಜಘನದಂತೆ ಕಟಿಯ ಕೆಳಭಾಗವಿದ್ದು ಕಟಿಯ ಮೇಲ್ಭಾಗ ಮನುಷ್ಯ ರೂಪವಾಗಿರುವುದೇ ಧನು ರಾಶಿ. ಮೃಗ ಮುಖವಿರುವ ಮೊಸಳೆಯ ರೂಪವಾಗಿರುವುದೇ ಮಕರ ರಾಶಿ. ತಕ್ಕಡಿಯನ್ನು ಕೈಯಲ್ಲಿ ಹಿಡಿದ ಮನುಷ್ಯ ರೂಪವೇ ತುಲಾ ರಾಶಿಯು ಒಂದು ಕೈಯಲ್ಲಿ ಸಸ್ಯವನ್ನು ಮತ್ತೊಂದು ಕೈಯಲ್ಲಿ ದೀಪವನ್ನು ಹಿಡಿದುಕೊಂಡು ಋತುಮತಿಯಾಗದಿರುವ ಕನ್ಯಾರೂಪವೇ ಕನ್ಯಾ ರಾಶಿಯು. ಬಾಕಿ ಉಳಿದ ರಾಶಿಗಳು ಆಯಾಯ ಹೆಸರಿಗೆ ತಕ್ಕಂತೆ ಅಂದರೆ ಮೇಷವು ಮೇಷಾಕಾರವಾಗಿಯೂ, ವೃಷಭವು ಎತ್ತಿನ ರೂಪ ಉಳ್ಳದ್ದಾಗಿಯೂ, ಕರ್ಕಾಟಕ ಏಡಿಯ ಆಕೃತಿಯಾಗಿಯೂ, ಸಿಂಹವು ಸಿಂಹಾಕಾರವಾಗಿಯೂ, ವೃಶ್ಚಿಕವು ಚೇಳಿನ ಆಕೃತಿಯಾಗಿಯೂ ಇದ್ದು ತಮ್ಮ ತಮ್ಮ ಹೆಸರಿಗೆ ತಕ್ಕ ಸ್ವಭಾವ, ಸ್ವರೂಪ, ವಿಹಾರ ಇತ್ಯಾದಿಗಳೆಂದು ತಿಳಿಯಬೇಕು

ಇಲ್ಲಿ ಹೇಳಿದ ರೂಪ, ಆಕೃತಿ, ವಿಹಾರ ಸ್ಥಾನಗಳು ಜನನಕಾಲ ಲಕ್ಷಣಕ್ಕೂ, ಚೋರಾದಿ ಪ್ರಶ್ನೆಗಳಿಗೂ ಉಪಯೋಗವಾಗುವುದು.

ಕ್ಷಿತಿಜಸಿತಜ್ಞ ಚಂದ್ರರವಿ ಸೌಮ್ಯ ಸಿತಾऽವನಿಜಾಃ ।
ಸುರಗುರು ಮಂದ ಸೌರಿ ಗುರವಶ್ಚ ಗೃಹಾಂಶಕ ಪಾಃ ॥
ಅಜಮೃಗ ತೌಲಿ ಚಂದ್ರ ಭವನಾದಿ ನವಾಂಶ ವಿಧಿ ।
ಭಗವನ ಸಮಾಂಶಕಾಧಿ ಪತಯಃ ಸ್ವಗೃಹಾತ್ ಕ್ರಮಶಃ ॥೬॥

ಮೇಷಾದಿ ೧೨ ರಾಶಿಗಳಿಗೆ ಕ್ರಮವಾಗಿ ಮೇಷಕ್ಕೆ ಕುಜನೂ, ವೃಷಭಕ್ಕೆ ಶುಕ್ರನೂ, ಮಿಥುನಕ್ಕೆ ಬುಧನೂ, ಕರ್ಕಾಟಕಕ್ಕೆ ಚಂದ್ರನೂ, ಸಿಂಹಕ್ಕೆ ರವಿಯೂ, ಕನ್ಯಾಕ್ಕೆ ಬುಧನೂ, ತುಲಾಕ್ಕೆ ಶುಕ್ರನೂ, ವೃಶ್ಚಿಕಕ್ಕೆ ಕುಜನೂ, ಧನುವಿಗೆ ಗುರುವೂ, ಮಕರಕ್ಕೆ ಶನಿಯೂ, ಕುಂಭಕ್ಕೆ ಶನಿಯೂ, ಮೀನಕ್ಕೆ ಗುರುವೂ ಅಧಿಪತಿಗಳಾಗಿರುವರು. ಇದೇ ಗ್ರಹಗಳು ನವಾಂಶಗಳಿಗೂ ಅಧಿಪತಿಗಳಾಗುವರು. ಒಂದು ರಾಶಿಯ ಒಂಭತ್ತನೆಯ ಒಂದಂಶಕ್ಕೆ ನವಾಂಶವೆಂತ ಹೇಳುತ್ತಾರೆ (ಒಂದು ರಾಶಿಗೆ ೩೦ ಭಾಗ ಒಂದಂಶಕ್ಕೆ ೩೦—೯=೩ ೨೦) ಇದನ್ನು ಮೇಷ, ಸಿಂಹ, ಧನು ರಾಶಿಗಳಲ್ಲಿ ಮೇಷಾದಿಯಾಗಿಯೂ; ವೃಷಭ, ಕನ್ಯಾ, ಮಕರಗಳಿಗೆ ಮಕರಾದಿಗಳಾಗಿಯೂ; ಮಿಥುನ, ತುಲಾ, ಕುಂಭಗಳಿಗೆ ತುಲಾದಿ ಯಾಗಿಯೂ; ಕರ್ಕಾಟಕ, ವೃಶ್ಚಿಕ, ಮೀನಗಳಿಗೆ ಕರ್ಕಾದಿಯಾಗಿಯೂ ನವಾಂಶಗಳು ಪ್ರಾರಂಭ ವಾಗುವುದು. ದ್ವಾದಶಾಂಶಗಳು (೧ರಾಶಿಗೆ ೩೦—೧೨=೨.೩೦) ಇದು ಗ್ರಹರಿರುವ ಆಯಾಯ ರಾಶಿಗಳಿಂದಲೇ ದ್ವಾದಶಾಂಶವು ಪ್ರಾರಂಭವಾಗುವುದು. ಇಲ್ಲಿ ಅಂಶಕಗಳಿಗೆ ಸಮಾನವಾಗಿರುವ ರಾಶಿಯ ಅಧಿಪತಿ ಯಾರೋ ಅವನೇ ಅಂಶಾಧಿಪತಿ ಎಂತ ತಿಳಿಯತಕ್ಕದ್ದು

| ಮೀನ<br>ಗುರು<br>೩೦ | ಮೇಷ<br>ಕುಜ<br>೩೦ | ವೃಷಭ<br>ಶುಕ್ರ<br>೩೦ | ಮಿಥುನ<br>ಬುಧ<br>೩೦ |
|---|---|---|---|
| ಕುಂಭ<br>ಶನಿ<br>೩೦ | | | ಕರ್ಕಾಟಕ<br>ಚಂದ್ರ<br>೩೦ |
| ಮಕರ<br>ಶನಿ<br>೩೦ | ೩೬೦ ಡಿಗ್ರಿ | | ಸಿಂಹ<br>ರವಿ<br>೩೦ |
| ಧನು<br>ಗುರು<br>೩೦ | ವೃಶ್ಚಿಕ<br>ಕುಜ<br>೩೦ | ತುಲಾ<br>ಶುಕ್ರ<br>೩೦ | ಕನ್ಯಾ<br>ಬುಧ<br>೩೦ |

ವಿ ಸೂ.: ಇಲ್ಲಿ ಪ್ರತಿಯೊಂದು ರಾಶಿಗೂ ೩೦ ಭಾಗ ೩೦ ವೆಂತ ತಿಳಿಯತಕ್ಕದ್ದು ಹನ್ನೆರಡು ರಾಶಿಗಳಿಗೆ ೩೬೦ ಭಾಗಗಳು ಅಥವಾ ೩೬೦° ೦'೦" ಇದಕ್ಕೆ ಭ ಚಕ್ರವೆಂತ ಹೇಳುತ್ತಾರೆ

## ॥ ಮೇಷಾದಿ ರಾಶಿಗಳ ನವಾಂಶಗಳು ॥

| ರಾಶಿ ಭಾಗ | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ೩-೨೦ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ |
| ೬-೪೦ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ |
| ೧೦-೦೦ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ |
| ೧೩-೨೦ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ |
| ೧೬-೪೦ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ |
| ೨೦-೦೦ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ |
| ೨೩-೨೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ | ಶುಕ್ರ ೭ | ಚಂದ್ರ ೪ | ಕುಜ ೧ | ಶನಿ ೧೦ |
| ೨೬-೪೦ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ | ಕುಜ ೮ | ರವಿ ೫ | ಶುಕ್ರ ೨ | ಶನಿ ೧೧ |
| ೩೦-೦೦ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ | ಗುರು ೯ | ಬುಧ ೬ | ಬುಧ ೩ | ಗುರು ೧೨ |

ವಿ.ಸೂ . ಇಲ್ಲಿ ಚರರಾಶಿಗಳಿಗೆ ೧ನೇ ನವಾಂಶವೂ, ಸ್ಥಿರರಾಶಿಗಳಿಗೆ ೫ನೇ ನವಾಂಶವೂ, ಉಭಯರಾಶಿಗಳಿಗೆ ೯ನೇ ನವಾಂಶವೂ ವರ್ಗೋತ್ತಮ ನವಾಂಶವಾಗುವುದು

## || ಮೇಷಾದಿ ರಾಶಿಗಳ ದ್ವಾದಶಾಂಶಗಳು ||

| ರಾಶಿ ಭಾಗ | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ೨-೩೦ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ |
| ೫-೦೦ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ |
| ೭-೩೦ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ |
| ೧೦-೦೦ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ |
| ೧೨-೩೦ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ |
| ೧೫-೦೦ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ |
| ೧೭-೩೦ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ |
| ೨೦-೦೦ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ |
| ೨೨-೩೦ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ |
| ೨೫-೦೦ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ |
| ೨೭-೩೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ |
| ೩೦-೦೦ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ |

**ಕುಜ ರವಿಜ ಗುರುಜ್ಞ ಶುಕ್ರಭಾಗಾಃ ।**
**ಪವನಸಮೀರಣ ಕೌರ್ಪಿಜೂಕಲೇಯಾಃ ॥**
**ಅಯುಜಿ ಯುಜಿ ತುಭೇ ವಿಪರ್ಯಯಸ್ಥಾಃ ।**
**ಶಶಿಭವನಾಳಿ ಝಷಾಂತ ಮೃಕ್ಷ ಸಂಧಿಃ ॥೭॥**

ರಾಶಿಯ ಮೂವತ್ತು ಭಾಗಗಳಿಗೆ ತ್ರಿಂಶಾಂಶವು ಈ ಕ್ರಮದಲ್ಲಿ ಆಗುವುದು ವಿಷಮ ರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭಗಳಲ್ಲಿ ಪ್ರಥಮ ೫ ಭಾಗಗಳಿಗೆ ಕುಜನೂ, ನಂತರ ೫ ಭಾಗಗಳಿಗೆ ಶನಿಯೂ, ಮುಂದಿನ ೮ ಭಾಗಗಳಿಗೆ ಗುರುವೂ, ಅದರ ನಂತರದ ೭ ಭಾಗಗಳಿಗೆ ಬುಧನೂ, ನಂತರ ೫ ಭಾಗಗಳಿಗೆ ಶುಕ್ರನೂ ಅಧಿಪತಿಗಳಾಗಿರುವರು ಹಾಗೆಯೇ ಸಮರಾಶಿಗಳಾದ ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ರಾಶಿಗಳಲ್ಲಿ ವ್ಯುತ್ಕ್ರಮವಾಗಿ ಅಂದರೆ ಪ್ರಥಮದ ೫ ಭಾಗ ಶುಕ್ರನಿಗೆ, ನಂತರ ೭ಕ್ಕೆ ಬುಧ, ೮ಕ್ಕೆ ಗುರು, ೫ಕ್ಕೆ ಶನಿ, ಮುಂದಿನ ೫ ಭಾಗಗಳಿಗೆ ಕುಜ ಹೀಗೆ ಅಧಿಪತಿಗಳಾಗುವರು. ಕರ್ಕಾಟಕ ವೃಶ್ಚಿಕ, ಮೀನ ರಾಶಿಗಳ ಅಂತ್ಯಭಾಗವೂ ಆಶ್ಲೇಷಾ, ಜ್ಯೇಷ್ಠಾ, ರೇವತೀ ನಕ್ಷತ್ರಗಳ ಅಂತ್ಯಕಾಲವೂ ಋಕ್ಷಸಂಧಿ ಎಂದು ಹೇಳಲ್ಪಟ್ಟಿದೆ. ಹಾಗೆಯೇ ಮೇಷ, ಸಿಂಹ, ಧನು ರಾಶಿಗಳ ಆದಿ ಭಾಗವೂ, ಅಶ್ವಿನೀ, ಮಘ, ಮೂಲಾ ನಕ್ಷತ್ರಗಳ ಆದಿಕಾಲವೂ ಗಂಡಾಂತವೆಂದು ತಿಳಿಯಬೇಕು. ಜನ್ಮಕಾಲದಲ್ಲಿ ರಾಶಿ, ನಕ್ಷತ್ರಗಳ ಗಂಡಾಂತಗಳೆರಡು ಒಂದೇ ಸಮಯದಲ್ಲಿ ಬಂದರೆ ಬಾಲಾರಿಷ್ಟಾದಿ ಅಶುಭಫಲ ಸೂಚಕವಾಗುವುದರಿಂದ ವಿಚಾರ ಮಾಡಿ ಫಲಗಳನ್ನು ಹೇಳತಕ್ಕದ್ದು.

**॥ ಓಜರಾಶಿ ತ್ರಿಂಶಾಂಶಗಳು ॥**

| ರಾಶಿ ಭಾಗ | ಮೇಷ | ಮಿಥುನ | ಸಿಂಹ | ತುಲಾ | ಧನು | ಕುಂಭ |
|---|---|---|---|---|---|---|
| ೫ | ಕುಜ | ಕುಜ | ಕುಜ | ಕುಜ | ಕುಜ | ಕುಜ |
| ೧೦ | ಶನಿ | ಶನಿ | ಶನಿ | ಶನಿ | ಶನಿ | ಶನಿ |
| ೧೮ | ಗುರು | ಗುರು | ಗುರು | ಗುರು | ಗುರು | ಗುರು |
| ೨೫ | ಬುಧ | ಬುಧ | ಬುಧ | ಬುಧ | ಬುಧ | ಬುಧ |
| ೩೦ | ಶುಕ್ರ | ಶುಕ್ರ | ಶುಕ್ರ | ಶುಕ್ರ | ಶುಕ್ರ | ಶುಕ್ರ |

**॥ ಯುಗ್ಮರಾಶಿ ತ್ರಿಂಶಾಂಶಗಳು ॥**

| ರಾಶಿ ಭಾಗ | ವೃಷಭ | ಕರ್ಕ | ಕನ್ಯಾ | ವೃಶ್ಚಿಕ | ಮಕರ | ಮೀನ |
|---|---|---|---|---|---|---|
| ೫ | ಶುಕ್ರ | ಶುಕ್ರ | ಶುಕ್ರ | ಶುಕ್ರ | ಶುಕ್ರ | ಶುಕ್ರ |
| ೧೨ | ಬುಧ | ಬುಧ | ಬುಧ | ಬುಧ | ಬುಧ | ಬುಧ |
| ೨೦ | ಗುರು | ಗುರು | ಗುರು | ಗುರು | ಗುರು | ಗುರು |
| ೨೫ | ಶನಿ | ಶನಿ | ಶನಿ | ಶನಿ | ಶನಿ | ಶನಿ |
| ೩೦ | ಕುಜ | ಕುಜ | ಕುಜ | ಕುಜ | ಕುಜ | ಕುಜ |

**ಕ್ರಿಯತಾವುರು ಜಿತುಮಕುಲೀರಲೇಯಪಾಥೋನ ಜೂಕಕೌರ್ಪ್ಯಾಖ್ಯಾಃ ।**
**ತೌಕ್ಷಿಕ ಆಕೋಕೇರೋ ಹೃದ್ರೋಗಶ್ಚಾಂತ್ಯಭಂ ಚೇತ್ಥಮ್ ॥೮॥**

ಮೇಷಾದಿ ಹನ್ನೆರಡು ರಾಶಿಗಳಿಗೆ ಕ್ರಮವಾಗಿ ಕ್ರಿಯ, ತಾವುರು, ಜಿತುಮು, ಕುಲೀರ, ಲೇಯ, ಪಾಥೋನ, ಜೂಕ, ಕೌರ್ಪಿ, ತೌಕ್ಷಿಕ, ಆಕೋಕೇರ, ಹೃದ್ರೋಗ, ಅಂತ್ಯಭಂ ಹೀಗೆ ಸಂಜ್ಞೆಗಳಿರುತ್ತವೆ

**ದ್ರೇಕ್ಕಾಣ ಹೋರಾ ನವಭಾಗ ಸಂಜ್ಞಾ**
**ತ್ರಿಂಶಾಂಶಕದ್ವಾದಶ ಸಂಜ್ಞಿತಾಶ್ಚ ॥**
**ಕ್ಷೇತ್ರಂ ಚ ಯದ್ಯಸ್ಯ ಸ ತಸ್ಯ ವರ್ಗೋ ।**
**ಹೋರೇತಿ ಲಗ್ನಂ ಭವನಸ್ಯ ಚಾರ್ಧಮ್ ॥೯॥**

ಮೂವತ್ತು ಭಾಗ (ಅಂಶ ಅಥವಾ ಡಿಗ್ರಿ)ಗಳುಳ್ಳ ಒಂದು ರಾಶಿಯ ಮೂರನೆ ಒಂದಂಶ ೩೦—೩=೧೦ ಅಂದರೆ ಹತ್ತು ಭಾಗಗಳಿಗೆ ದ್ರೇಕ್ಕಾಣವೆಂತಲೂ, ರಾಶಿಯ ಹದಿನೈದು ೩೦—೨=೧೫ ಭಾಗಗಳಿಗೆ ಹೋರಾ ಎಂತಲೂ, ಒಂಬತ್ತನೆಯ ಒಂದಂಶ ೩೦—೯=೩ ೨೦ಕ್ಕೆ ನವಾಂಶವೆಂತಲೂ, ರಾಶಿಯ ಮೂವತ್ತನೆಯ ಒಂದಂಶ ತ್ರಿಂಶಾಂಶವೆಂತಲೂ, ೩೦—೩೦=೧ (ಭಾಗಾಧಿಪತ್ಯಗಳನ್ನು ಹಿಂದೆ ಹೇಳಿದೆ), ಹನ್ನೆರಡನೆಯ ಒಂದಂಶ ೩೦—೧೨=೨ ೩೦ ದ್ವಾದಶಾಂಶವೆಂತಲೂ, ಮೂವತ್ತು ಭಾಗಗಳಿರುವ ರಾಶಿಗೆ ಕ್ಷೇತ್ರವೆಂತಲೂ ಷಡ್ವರ್ಗಗಳಾಗುವುದು ಇದು ಯಾವ ಗ್ರಹದ ವರ್ಗವಾಗುವುದೋ ಆ ಗ್ರಹವೇ ಆ ವರ್ಗದ ಅಧಿಪತಿ ಎಂತ ತಿಳಿಯುವುದು. ಚಕ್ರವೆಂದರೆ = ಹನ್ನೆರಡು ರಾಶಿಗಳು.

**ಗೋಜಾಶ್ವಿಕರ್ಕಿ ಮಿಥುನಾ ಸ್ಸಮೃಗಾ ನಿಶಾಖ್ಯಾಃ**
**ಪೃಷ್ಠೋದಯಾವಿ ಮಿಥುನಾಃ ಕಥಿತಾಸ್ತ ಏವ ॥**
**ಶೀರ್ಷೋದಯಾ ದಿನಬಲಾಶ್ಚ ಭವಂತಿಶೇಷಾ**
**ಲಗ್ನಂ ಸಮೆತ್ಯುಭಯತಃ ಪೃಥುರೋಮಯುಗ್ಮಮ್ ॥೧೦॥**

ವೃಷಭ, ಮೇಷ, ಧನು, ಕರ್ಕಾಟಕ, ಮಿಥುನ ಮತ್ತು ಮಕರ ಈ ಆರು ರಾಶಿಗಳು ರಾತ್ರಿ ಬಲವುಳ್ಳವುಗಳೆಂತಲೂ, ಮಿಥುನ ರಾಶಿಯನ್ನು ಬಿಟ್ಟು ಮೇಲೆ ಹೇಳಿದ ಎಲ್ಲಾ ರಾಶಿಗಳು ಪೃಷ್ಠೋದಯ ರಾಶಿಗಳೆಂತಲೂ, (ಮಿಥುನ ಶೀರ್ಷೋದಯ) ಹೇಳಲ್ಪಟ್ಟಿದೆ. ಮಿಕ್ಕಿ ಉಳಿದ ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ, ಮೀನ ಈ ರಾಶಿಗಳು ಹಗಲಿನಲ್ಲಿ ಬಲವುಳ್ಳವುಗಳೆಂತಲೂ, ಮಿಥುನ ಸಹಿತವಾಗಿ ಶೀರ್ಷೋದಯ ರಾಶಿಗಳೆಂತಲೂ, ಮೀನ ಉಭಯೋದಯ ಅಂದರೆ ಪೃಷ್ಠೋದಯ ಹಾಗೂ ಶೀರ್ಷೋದಯ ಆಗುವುದು.

|| ರಾಶಿ ಉದಯ ಮತ್ತು ದಿನರಾತ್ರಿ ಬಲಗಳು ||

| ರಾತ್ರಿ ಬಲ ಪೃಷ್ಠೋದಯ | ಮೇಷ | ವೃಷಭ | ಕರ್ಕಾಟಕ | ಧನು | ಮಕರ |
|---|---|---|---|---|---|
| ದಿವಾ ಬಲ ಶೀರ್ಷೋದಯ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಕುಂಭ |
| ರಾತ್ರಿ ಬಲ ಶೀರ್ಷೋದಯ | ೦ | ೦ | ಮಿಥುನ | ೦ | ೦ |
| ದಿವಾ ರಾತ್ರಿ ಬಲ ಉಭಯೋದಯ | ೦ | ೦ | ಮೀನ | ೦ | ೦ |

**ಕ್ರೂರಃ ಸೌಮ್ಯಃ ಪುರುಷವನಿತೇ ತೇ ಚರಾಗದ್ವಿದೇಹಾಃ |**
**ಪ್ರಾಗಾದೀಶಾಃ ಕ್ರಿಯ ವೃಷನೃಯುಕ್ಕರ್ಕಟಾಃ ಸತ್ರಿಕೋಣಾಃ ||**
**ಮಾರ್ತಾಂಡೇಂದ್ವೋರಯುಜಿ ಸಮಭೇಚಂದ್ರ ಭಾನ್ವೋಶ್ಚಹೋರೇ |**
**ದ್ರೇಷ್ಕಾಣಾಃ ಸ್ಯುಃ ಸ್ವಭವನಸುತ ತ್ರಿತ್ರಿಕೋಣಾಧಿಪಾನಾಮ್ ||೧೧||**

ಕ್ರೂರ, ಸೌಮ್ಯ, ಸ್ವಭಾವಗಳನ್ನು ಮತ್ತು ಪುರುಷ ಸ್ತ್ರೀ ಎಂಬಂತೆ ಮೇಷಾದಿ ಹನ್ನೆರಡು ರಾಶಿಗಳಿಗೂ ಕ್ರಮವಾಗಿ ತಿಳಿಯುವುದು ಅದೇ ೧೨ ರಾಶಿಗಳು ಚರ, ಸ್ಥಿರ, ದ್ವಿಸ್ವಭಾವವೆಂತಲೂ ತಿಳಿಯಬೇಕು. ಹಾಗೆಯೇ ಮೇಷ ಮತ್ತು ಅದರ ತ್ರಿಕೋಣಗಳಾದ ಸಿಂಹ, ಧನು ರಾಶಿಗಳು ಪೂರ್ವ ದಿಕ್ಕಿಗೂ; ವೃಷಭ, ಕನ್ಯಾ, ಮಕರ ದಕ್ಷಿಣ ದಿಕ್ಕಿಗೂ; ಮಿಥುನ, ತುಲಾ, ಕುಂಭ ಪಶ್ಚಿಮ ದಿಕ್ಕಿಗೂ; ಕರ್ಕಾಟಕ, ವೃಶ್ಚಿಕ, ಮೀನ ಉತ್ತರ ದಿಕ್ಕಿಗೂ ಅಧಿಪತಿಗಳಾಗುವರು. ಓಜ ರಾಶಿಗಳಾದ ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ ಈ ಆರು ರಾಶಿಗಳ ಪ್ರಥಮ ಹದಿನೈದು ಭಾಗಗಳವರೆಗೆ ಸೂರ್ಯ ಹೋರೆ ಎಂತಲೂ, ನಂತರ ಹದಿನೈದು ಭಾಗಗಳಿಗೆ ಚಂದ್ರ ಹೋರೆ ಎಂತಲೂ; ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ಈ ಆರು ಯುಗ್ಮರಾಶಿಗಳಿಗೆ ಪ್ರಥಮ ಹದಿನೈದು ಭಾಗಗಳಿಗೆ ಚಂದ್ರ ಹೋರೆ ಎಂತಲೂ, ಮುಂದಿನ ಹದಿನೈದಕ್ಕೆ ಸೂರ್ಯ ಹೋರೆ ಎಂತಲೂ ತಿಳಿಯತಕ್ಕದ್ದು ಯಾವ ರಾಶಿಯಲ್ಲಾದರೂ ಪ್ರಥಮ ಹತ್ತು ಭಾಗಗಳಿಗೆ ಆ ರಾಶ್ಯಾಧಿಪತಿಯೂ ಮುಂದಿನ ಹತ್ತು ಭಾಗಗಳಿಗೆ (ಹತ್ತರಿಂದ ಇಪ್ಪತ್ತರ ವರೆಗೆ) ಆ ರಾಶಿಯ ಪಂಚಮಾಧಿಪತಿಯೂ, ನಂತರ ಇಪ್ಪತ್ತರಿಂದ ಮೂವತ್ತರ ವರೆಗಿನ ಹತ್ತು ಭಾಗಗಳಿಗೆ ಆ ರಾಶಿಯ ಒಂಬತ್ತನೆ ಸ್ಥಾನಾಧಿಪತಿಯೂ ದ್ರೇಕ್ಕಾಣಾಧಿಪತಿಗಳೆಂದು ತಿಳಿಯಬೇಕು.

|| ಕ್ರೂರ, ಸೌಮ್ಯ, ಪುರುಷ, ಸ್ತ್ರೀ, ಚರ, ಸ್ಥಿರ, ದ್ವಿಸ್ವಭಾವರಾಶಿಗಳು ||

| ರಾಶಿಗಳು | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ |
|---|---|---|---|---|---|---|
| ಸಂಜ್ಞೆ | ಕ್ರೂರ | ಸೌಮ್ಯ | ಕ್ರೂರ | ಸೌಮ್ಯ | ಕ್ರೂರ | ಸೌಮ್ಯ |
| ಸಂಜ್ಞೆ | ಪುರುಷ | ಸ್ತ್ರೀ | ಪುರುಷ | ಸ್ತ್ರೀ | ಪುರುಷ | ಸ್ತ್ರೀ |
| ಸಂಜ್ಞೆ | ಚರ | ಸ್ಥಿರ | ದ್ವಿಸ್ವಭಾವ | ಚರ | ಸ್ಥಿರ | ದ್ವಿಸ್ವಭಾವ |

| ರಾಶಿಗಳು | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|
| ಸಂಜ್ಞೆ | ಕ್ರೂರ | ಸೌಮ್ಯ | ಕ್ರೂರ | ಸೌಮ್ಯ | ಕ್ರೂರ | ಸೌಮ್ಯ |
| ಸಂಜ್ಞೆ | ಪುರುಷ | ಸ್ತ್ರೀ | ಪುರುಷ | ಸ್ತ್ರೀ | ಪುರುಷ | ಸ್ತ್ರೀ |
| ಸಂಜ್ಞೆ | ಚರ | ಸ್ಥಿರ | ದ್ವಿಸ್ವಭಾವ | ಚರ | ಸ್ಥಿರ | ದ್ವಿಸ್ವಭಾವ |

**॥ ರಾಶಿಗಳ ದಿಕ್ಕು, ಸ್ವಾಮಿತ್ವಗಳು ॥**

| ಪೂರ್ವ ದಿಕ್ ರಾಶಿಗಳು | ಮೇಷ | ಸಿಂಹ | ಧನು |
|---|---|---|---|
| ದಕ್ಷಿಣ ದಿಕ್ ರಾಶಿಗಳು | ವೃಷಭ | ಕನ್ಯಾ | ಮಕರ |
| ಪಶ್ಚಿಮ ದಿಕ್ ರಾಶಿಗಳು | ಮಿಥುನ | ತುಲಾ | ಕುಂಭ |
| ಉತ್ತರ ದಿಕ್ ರಾಶಿಗಳು | ಕರ್ಕಾಟಕ | ವೃಶ್ಚಿಕ | ಮೀನ |

**॥ ರಾಶಿಗಳಲ್ಲಿ ಹೋರೆಗಳು ॥**

| ರಾಶಿ | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ಗ್ರಹ ಅಂಶ | ರವಿ ೧೫ | ಚಂದ್ರ ೧೫ | ರವಿ ೧೫ | ಚಂದ್ರ ೧೫ | ರವಿ ೧೫ | ಚಂದ್ರ ೧೫ | ರವಿ ೧೫ | ಚಂದ್ರ ೧೫ | ರವಿ ೧೫ | ಚಂದ್ರ ೧೫ | ರವಿ ೧೫ | ಚಂದ್ರ ೧೫ |
| ಗ್ರಹ ಅಂಶ | ಚಂದ್ರ ೩೦ | ರವಿ ೩೦ | ಚಂದ್ರ ೩೦ | ರವಿ ೩೦ | ಚಂದ್ರ ೩೦ | ರವಿ ೩೦ | ಚಂದ್ರ ೩೦ | ರವಿ ೩೦ | ಚಂದ್ರ ೩೦ | ರವಿ ೩೦ | ಚಂದ್ರ ೩೦ | ರವಿ ೩೦ |

**॥ ದ್ರೇಕ್ಕಾಣಗಳು ॥**

| ರಾಶಿ | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ಭಾಗ ೧೦ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ |
| ಭಾಗ ೨೦ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ |
| ಭಾಗ ೩೦ | ಗುರು ೯ | ಶನಿ ೧೦ | ಶನಿ ೧೧ | ಗುರು ೧೨ | ಕುಜ ೧ | ಶುಕ್ರ ೨ | ಬುಧ ೩ | ಚಂದ್ರ ೪ | ರವಿ ೫ | ಬುಧ ೬ | ಶುಕ್ರ ೭ | ಕುಜ ೮ |

**ಕೇಚಿತ್ತು ಹೋರಾಂ ಪ್ರಥಮಾಂ ಭಪಸ್ಯ**
**ವಾಂಛಂತಿ ಲಾಭಾಧಿಪತೇರ್ದ್ವಿತೀಯಾಮ್ ॥**
**ದ್ರೇಕಾಣ ಸಂಜ್ಞಾಮಪಿವರ್ಣಯಂತಿ**
**ಸ್ವದ್ವಾದಶೈಕಾದಶರಾಶಿಪಾನಾಮ್ ॥೧೨॥**

ಮೊದಲನೇ ಹೋರೆಗೆ ಆ ಸ್ಥಾನಾಧಿಪತಿ ಎಂತಲೂ, ಎರಡನೆ ಹೋರೆಗೆ ಹನ್ನೊಂದನೆ ಅಧಿಪತಿ ಎಂತಲೂ, ಹಾಗೆಯೇ ಪ್ರಥಮ ದ್ರೇಕ್ಕಾಣವು ಆ ರಾಶ್ಯಾಧಿಪತಿಯೆದ್ದೆಂತಲೂ, ಮಧ್ಯ ದ್ರೇಕ್ಕಾಣವು ಹನ್ನೆರಡನೆಯ ಅಧಿಪತಿಯೆದ್ದೆಂತಲೂ, ಅಂತ್ಯ ದ್ರೇಕ್ಕಾಣವು ಹನ್ನೊಂದನೇ ಅಧಿಪತಿಯದ್ದೆಂತಲೂ, ಕೆಲವು ಆಚಾರ್ಯರು ಹೇಳಿರುತ್ತಾರೆ.

**ಅಜವೃಷಭ ಮೃಗಾಂಗನಾಕುಲೀರಾ ।**
**ಝಷವಣಿಜೌ ಚ ದಿವಾಕರಾದಿ ತುಂಗಾಃ ॥**
**ದಶಶಿಖಿ ಮನುಯುಕ್ ತಿಥೀಂದ್ರಿಯಾಂಶೈ**
**ಸ್ತ್ರೀನವಕವಿಂಶತಿಭಿಶ್ಚತೇಽಸ್ತ ನೀಚಾಃ ॥೧೩॥**

ರವಿಗೆ ಮೇಷ ರಾಶಿಯಲ್ಲಿ ಹತ್ತು ಭಾಗವೂ, ಚಂದ್ರನಿಗೆ ವೃಷಭದಲ್ಲಿ ಮೂರು ಭಾಗವೂ, ಮಕರದಲ್ಲಿ ಕುಜನಿಗೆ ಇಪ್ಪತ್ತೆಂಟು ಭಾಗವೂ, ಕನ್ಯೆಯಲ್ಲಿ ಬುಧನಿಗೆ ಹದಿನೈದು ಭಾಗವೂ, ಕರ್ಕೆಯಲ್ಲಿ ಗುರುವಿಗೆ ಐದು ಭಾಗವೂ, ಮೀನದಲ್ಲಿ ಶುಕ್ರನಿಗೆ ಇಪ್ಪತ್ತೇಳು ಭಾಗವೂ, ತುಲೆಯಲ್ಲಿ ಶನಿಗೆ ಇಪ್ಪತ್ತು ಭಾಗವೂ ಉಚ್ಚವಾಗಿದ್ದು, ಆಯಾಯ ಗ್ರಹರಿಗೆ ಹೇಳಿದ ಭಾಗಗಳ ಅಂತ್ಯಭಾಗವೇ ಪರಮೋಚ್ಚವೆಂದು ತಿಳಿಯಬೇಕು. ಈ ಉಚ್ಚರಾಶಿಗಳಿಗೆ ಸಪ್ತಮ ರಾಶಿಗಳಲ್ಲಿ ಮೇಲೆ ಹೇಳಲ್ಪಟ್ಟ ಉಚ್ಚ, ಪರಮೋಚ್ಚ, ಭಾಗಗಳು ನೀಚ, ಪರಮ ನೀಚ ಭಾಗಗಳಾಗುವುದು ಅಂದರೆ ರವಿಗೆ ತುಲೆಯಲ್ಲಿ ಹತ್ತು, ಚಂದ್ರನಿಗೆ ವೃಶ್ಚಿಕದಲ್ಲಿ ಮೂರು, ಕುಜನಿಗೆ ಕರ್ಕಾಟಕದಲ್ಲಿ ಇಪ್ಪತ್ತೆಂಟು, ಬುಧನಿಗೆ ಮೀನದಲ್ಲಿ ಹದಿನೈದು, ಗುರುವಿಗೆ ಮಕರದಲ್ಲಿ ಐದು, ಶುಕ್ರನಿಗೆ ಕನ್ಯಾದಲ್ಲಿ ಇಪ್ಪತ್ತೇಳು, ಶನಿಗೆ ಮೇಷದಲ್ಲಿ ಇಪ್ಪತ್ತು, ಹೀಗೆ ನೀಚ ಭಾಗಗಳಾಗಿದ್ದು, ಆಯಾಯ ಭಾಗಗಳ ಕೊನೆಯ ಭಾಗಗಳು ಪರಮ ನೀಚವೆಂತಲೂ ತಿಳಿಯಬೇಕು.

**॥ ಗ್ರಹರ ಉಚ್ಚ ಮತ್ತು ನೀಚಗಳು ॥**

| ಗ್ರಹರು | | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|---|
| ಉಚ್ಚ | ರಾಶಿ<br>ಭಾಗ | ಮೇಷ<br>೧೦ | ವೃಷಭ<br>೩ | ಮಕರ<br>೨೮ | ಕನ್ಯಾ<br>೧೫ | ಕರ್ಕಾಟಕ<br>೫ | ಮೀನ<br>೨೭ | ತುಲಾ<br>೨೦ |
| ನೀಚ | ರಾಶಿ<br>ಭಾಗ | ತುಲಾ<br>೧೦ | ವೃಶ್ಚಿಕ<br>೩ | ಕರ್ಕಾಟಕ<br>೨೮ | ಮೀನ<br>೧೫ | ಮಕರ<br>೫ | ಕನ್ಯಾ<br>೨೭ | ಮೇಷ<br>೨೦ |

**ವರ್ಗೋತ್ತಮಾಶ್ಚರ ಗೃಹಾದಿಷು ಪೂರ್ವಮಧ್ಯ**
**ಪರ್ಯಂತಗಾಃ ಶುಭಫಲಾ ನವಭಾಗ ಸಂಜ್ಞಾಃ ॥**
**ಸಿಂಹೋವೃಷಃ ಪ್ರಥಮಷಷ್ಠ ಹಯಾಂಗ ತೌಲಿ**
**ಕುಂಭಾಸ್ತ್ರಿಕೋಣ ಭವನಾನಿ ಭವಂತಿ ಸೂರ್ಯಾತ್ ॥೧೪॥**

ಚರರಾಶಿಗಳಾದ ಮೇಷ, ಕರ್ಕ, ತುಲಾ, ಮಕರಗಳಲ್ಲಿ ಆದಿ ನವಾಂಶವೂ, ಸ್ಥಿರರಾಶಿಗಳಾದ ವೃಷಭ, ಸಿಂಹ, ವೃಶ್ಚಿಕ, ಕುಂಭಗಳಲ್ಲಿ ಮಧ್ಯ ನವಾಂಶವೂ, ದ್ವಿಸ್ವಭಾವ ರಾಶಿಗಳಾದ ಮಿಥುನ, ಕನ್ಯಾ, ಧನು, ಮೀನಗಳಲ್ಲಿ ಅಂತ್ಯ ನವಾಂಶವೂ, ವರ್ಗೋತ್ತಮಾಂಶಕಗಳಾಗುತ್ತವೆ ವರ್ಗೋತ್ತಮಾಂಶದಲ್ಲಿರುವ ಗ್ರಹಗಳು ಶುಭಫಲವನ್ನು ಕೊಡುವವರಾಗುತ್ತಾರೆ ಸಿಂಹದಲ್ಲಿ ಸೂರ್ಯನಿಗೂ, ವೃಷಭದಲ್ಲಿ (ಪರಮೋಚ್ಚ ಭಾಗದ ನಂತರ) ಚಂದ್ರನಿಗೂ, ಮೇಷದಲ್ಲಿ ಕುಜನಿಗೂ, ಕನ್ಯೆಯಲ್ಲಿ (ಪರಮೋಚ್ಚ ಭಾಗದ ನಂತರ) ಬುಧನಿಗೂ, ಧನುವಿನಲ್ಲಿ ಗುರುವಿಗೂ,

ತುಲೆಯಲ್ಲಿ ಶುಕ್ರನಿಗೂ, ಕುಂಭದಲ್ಲಿ ಶನಿಗೂ ಈ ಪ್ರಕಾರವಾಗಿ ಗ್ರಹರಿಗೆ ಮೂಲ ತ್ರಿಕೋಣ ಭವನಗಳಾಗುತ್ತವೆ

॥ ವರ್ಗೋತ್ತಮ ನವಾಂಶಗಳು ॥

| ರಾಶಿ<br>ವರ್ಗೋತ್ತಮ ನವಾಂಶ | ಮೇಷ<br>೧ | ಕರ್ಕಾಟಕ<br>೧ | ತುಲಾ<br>೧ | ಮಕರ<br>೧ |
|---|---|---|---|---|
| ರಾಶಿ<br>ವರ್ಗೋತ್ತಮ ನವಾಂಶ | ವೃಷಭ<br>೫ | ಸಿಂಹ<br>೫ | ವೃಶ್ಚಿಕ<br>೫ | ಕುಂಭ<br>೫ |
| ರಾಶಿ<br>ವರ್ಗೋತ್ತಮ ನವಾಂಶ | ಮಿಥುನ<br>೯ | ಕನ್ಯಾ<br>೯ | ಧನು<br>೯ | ಮೀನ<br>೯ |

॥ ರವ್ಯಾದಿ ಗ್ರಹರ ಮೂಲ ತ್ರಿಕೋಣಗಳು ॥

| ಗ್ರಹ<br>ಮೂಲತ್ರಿಕೋಣ | ರವಿ<br>ಸಿಂಹ | ಚಂದ್ರ<br>ವೃಷಭ | ಕುಜ<br>ಮೇಷ | ಬುಧ<br>ಕನ್ಯಾ | ಗುರು<br>ಧನು | ಶುಕ್ರ<br>ತುಲಾ | ಶನಿ<br>ಕುಂಭ |
|---|---|---|---|---|---|---|---|

**ಹೋರಾದಯಸ್ತನು ಕುಟುಂಬ ಸಹೋತ್ಥ ಬಂಧು**
**ಪುತ್ರಾರಿ ಪತ್ನಿಮರಣಾನಿ ಶುಭಾಸ್ಪದಾಯಾಃ ॥**
**ರಿಃಫಾಖ್ಯ ಮಿತ್ಯುಪಚಯಾನ್ಯರಿ ಕರ್ಮಲಾಭ**
**ದುಶ್ಚಿಕ್ಯ ಸಂಜ್ಞಿತ ಗೃಹಾಣಿ ನ ನಿತ್ಯಮೇಕೇ ॥೧೫॥**

ಲಗ್ನಾದಿ ಹನ್ನೆರಡು ಭಾವಗಳಿಗೆ ಕ್ರಮವಾಗಿ ತನು, ಕುಟುಂಬ, ಸಹೋತ್ಥ, ಬಂಧು, ಪುತ್ರ, ಅರಿ ಪತ್ನಿ, ಮರಣ, ಶುಭ, ಆಸ್ಪದ, ಆಯಾ, ರಿಃಫ, ಈ ಪ್ರಕಾರವಾಗಿ ಸಂಜ್ಞೆಗಳೆಂದು ತಿಳಿಯಬೇಕು ಆರು, ಹತ್ತು, ಹನ್ನೊಂದು, ಮೂರು ಲಗ್ನಾದಿ ಈ ಭಾವಗಳಿಗೆ ಉಪಚಯ ಸ್ಥಾನಗಳೆಂದೂ ಸಂಜ್ಞೆಗಳು ಕೆಲವರು ನಿತ್ಯವಲ್ಲವೆಂದೂ ಹೇಳುತ್ತಾರೆ.

॥ ಭಾವ ಸಂಜ್ಞೆಗಳು ॥

| ಭಾವ | ಲಗ್ನ | ದ್ವಿತೀಯ | ತೃತೀಯ | ಚತುರ್ಥ | ಪಂಚಮ | ಷಷ್ಠ |
|---|---|---|---|---|---|---|
| ಸಂಜ್ಞಾ | ತನು | ಕುಟುಂಬ | ಸಹೋತ್ಥ | ಬಂಧು | ಪುತ್ರ | ಅರಿ |
| ಭಾವ | ಸಪ್ತಮ | ಅಷ್ಟಮ | ನವಮ | ದಶಮ | ಏಕಾದಶ | ದ್ವಾದಶ |
| ಸಂಜ್ಞಾ | ಪತ್ನಿ | ಮರಣ | ಶುಭ | ಆಸ್ಪದ | ಆಯ | ರಿಃಫ |

॥ ಉಪಚಯಾಪಚಯಗಳು ॥

| ಉಪಚಯ ಸ್ಥಾನ | ೩ | ೬ | ೧೦ | ೧೧ | ೦ | ೦ | ೦ | ೦ |
|---|---|---|---|---|---|---|---|---|
| ಅಪಚಯ ಸ್ಥಾನ | ೧ | ೨ | ೪ | ೫ | ೭ | ೮ | ೯ | ೧೨ |

**ಕಲ್ಪಸ್ವ ವಿಕ್ರಮ ಗೃಹ ಪ್ರತಿಭಾಕ್ಷತಾನಿ**
**ಚಿತ್ತೋತ್ಥ ರಂಧ್ರಗುರು ಮಾನಭವ ವ್ಯಯಾನಿ ॥**
**ಲಗ್ನಾಚತುರ್ಥನಿಧನೇ ಚತುರಸ್ರ ಸಂಜ್ಞೇ**
**ದ್ಯೂನಂ ಚ ಸಪ್ತಮ ಗೃಹಂ ದಶಮರ್ಕ್ಷಮಾಜ್ಞಾ ॥೧೬॥**

ಲಗ್ನಾದಿ ದ್ವಾದಶ ಭಾವಗಳಿಗೆ ಕ್ರಮವಾಗಿ ಕಲ್ಪಾ, ಸ್ವ, ವಿಕ್ರಮ, ಗೃಹ, ಪ್ರತಿಭಾ, ಕ್ಷತ, ಚಿತ್ತೋತ್ಥ, ರಂಧ್ರ, ಗುರು, ಮಾನ, ಭವ, ವ್ಯಯ ಎಂಬ ಸಂಜ್ಞೆಗಳೂ ಹೇಳಲ್ಪಡುತ್ತವೆ ಲಗ್ನದಿಂದ ಚತುರ್ಥ, ಅಷ್ಟಮಕ್ಕೆ ಚತುರಸ್ರವೆಂತಲೂ, ಸಪ್ತಮಕ್ಕೆ ದ್ಯೂನವೆಂತಲೂ, ದಶಮಕ್ಕೆ ಆಜ್ಞಾ ಎಂತಲೂ ಸಂಜ್ಞೆಗಳಿವೆ ಈ ಸಂಜ್ಞೆಗಳನ್ನು ಆಯಾಯ ಸ್ಥಾನಗಳಿಗೆ ಉಪಯೋಗಿಸಿಕೊಳ್ಳುವುದು

**ಕಂಟಕ ಕೇಂದ್ರ ಚತುಷ್ಟಯ ಸಂಜ್ಞಾಃ**
**ಸಪ್ತಮ ಲಗ್ನ ಚತುರ್ಥ ಖಭಾನಾಮ್ ॥**
**ತೇಷು ಯಥಾಭಿಹಿತೇಷು ಬಲಾಢ್ಯಾಃ**
**ಕೀಟ ನರಾಂಬುಚರಾಃ ಪಶವಶ್ಚ ॥೧೭॥**

ಸಪ್ತಮ, ಲಗ್ನ, ಚತುರ್ಥ, ದಶಮ ಸ್ಥಾನಗಳಿಗೆ ಕಂಟಕ ಮತ್ತು ಕೇಂದ್ರ ಚತುಷ್ಟಯವೆಂಬ ಸಂಜ್ಞೆ ಹೇಳಲ್ಪಡುತ್ತದೆ. ಆ ರಾಶಿಗಳು ಸಪ್ತಮಭಾವಕ್ಕೆ ಕೀಟ ರಾಶಿಯೂ, ಲಗ್ನಭಾವಕ್ಕೆ ಮನುಷ್ಯ ರಾಶಿಗಳೂ, ಚತುರ್ಥ ಭಾವಕ್ಕೆ ಜಲರಾಶಿಗಳೂ ಹಾಗೂ ದಶಮಕ್ಕೆ ಪಶುರಾಶಿಗಳಾಗಿಯೂ ಆಗಿದ್ದರೆ ಬಲವುಳ್ಳದ್ದಾಗುವುದು

**ಕೇಂದ್ರಾತ್ಪರಂ ಪಣಪರಂ ಪರತಸ್ತು ಸರ್ವಮಾಪೋಕ್ಲಿಮಂ**
**ಹಿಬುಕಮಂಬು ಸುಖಂ ಚ ವೇಶ್ಮ ॥**
**ಜಾಮಿತ್ರ ಮಸ್ತ ಭವನಂ ಸುತಭಂ ತ್ರಿಕೋಣಂ**
**ಮೇಷೂರಣಂ ದಶಮ ಮತ್ರ ಚ ಕರ್ಮ ವಿದ್ಯಾತ್ ॥೧೮॥**

ಒಂದು, ನಾಲ್ಕು, ಏಳು, ಹತ್ತು ಈ ಸ್ಥಾನಗಳಿಗೆ ಕೇಂದ್ರವೆಂತಲೂ, ಮುಂದೆ ಎರಡು, ಐದು, ಎಂಟು, ಹನ್ನೊಂದು ಈ ಸ್ಥಾನಗಳಿಗೆ ಪಣಪರವೆಂತಲೂ, ಅದಕ್ಕೂ ಮುಂದೆ ಮೂರು, ಆರು, ಒಂಬತ್ತು, ಹನ್ನೆರಡು ಈ ಸ್ಥಾನಗಳಿಗೆ ಆಪೋಕ್ಲೀಮವೆಂತಲೂ ತಿಳಿಯತಕ್ಕದ್ದು ಹಾಗೆಯೇ ಹಿಬುಕ, ಅಂಬು, ಸುಖ, ವೇಶ್ಮ ಎಂತ ಚತುರ್ಥ ಭಾವಕ್ಕೂ, ಜಾಮಿತ್ರ, ಅಸ್ತಭವನಂ ಎಂತ ಸಪ್ತಮ ಭಾವಕ್ಕೂ, ಸುತಭಂ ಪಂಚಮ ಸ್ಥಾನಕ್ಕೂ, ತ್ರಿಕೋಣಂ ಐದು ಒಂಬತ್ತನೆಯ ಸ್ಥಾನಕ್ಕೂ, ಮೇಷೂರಣಂ ಮತ್ತು ಕರ್ಮವೆಂತ ದಶಮ ಸ್ಥಾನಕ್ಕೂ ಹೇಳುತ್ತಾರೆ

|| ಕೇಂದ್ರಪಣಪರಾದಿ ಸಂಜ್ಞೆಗಳು ||

| ಭಾವಗಳು | | | | ಸಂಜ್ಞೆಗಳು | | |
|---|---|---|---|---|---|---|
| ೧ | ೪ | ೭ | ೧೦ | ಕಂಟಕ | ಕೇಂದ್ರ | ಚತುಷ್ಟಯ |
| ೨ | ೫ | ೮ | ೧೧ | ಪಣಪರ | ೦ | ೦ |
| ೩ | ೬ | ೯ | ೧೨ | ಆಪೋಕ್ಲೀಮ | ೦ | ೦ |
| ೪ | ೦ | ೦ | ೦ | ಹಿಬುಕ | ಅಂಬು | ಸುಖ |
| ೭ | ೦ | ೦ | ೦ | ಜಾಮಿತ್ರ | ೦ | ೦ |
| ೫ | ೯ | ೦ | ೦ | ತ್ರಿಕೋಣ | ೦ | ೦ |
| ೧೦ | ೦ | ೦ | ೦ | ಮೇಷೂರಣ | ಕರ್ಮ | ೦ |

|| ರಾಶಿ ಬಲನಿರ್ಣಯ ||

| ರಾಶಿಗಳು | | | | | ಬಲವುಳ್ಳ ಸ್ಥಾನಗಳು | |
|---|---|---|---|---|---|---|
| ವೃಶ್ಚಿಕ | ೦ | ೦ | ೦ | ೦ | ಕೀಟ | ಸಪ್ತಮ |
| ಮಿಥುನ | ತುಲಾ | ಕನ್ಯಾ | ಕುಂಭ | ಧನು ಪೂರ್ವಾರ್ಧ | ನರ | ಲಗ್ನ |
| ಕರ್ಕಾಟಕ | ಮೀನ | ಮಕರ ಪರಾರ್ಧ | ೦ | ೦ | ಜಲ | ಚತುರ್ಥ |
| ಮೇಷ | ವೃಷಭ | ಸಿಂಹ | ಧನು ಪರಾರ್ಧ | ಮಕರ ಪೂರ್ವಾರ್ಧ | ಪಶು | ದಶಮ |

**ಹೋರಾಸ್ವಾಮಿ ಗುರುಜ್ಞ ವೀಕ್ಷಿತಯುತಾ ನಾನ್ಯೈಶ್ಚವೀರ್ಯೋತ್ಕಟಾ ।**
**ಕೇಂದ್ರಸ್ಥಾ ದ್ವಿಪದಾದಯೋಽಹ್ನಿ ನಿಶಿ ಚ ಪ್ರಾಪ್ತೇ ಚ ಸಂಧ್ಯಾದ್ವಯೇ ॥**
**ಪೂರ್ವಾರ್ಧೇ ವಿಷಯಾದಯಃ ಕೃತಗುಣಾ ಮಾನಂ ಪ್ರತೀಪಂ ಚತತ್ ।**
**ದುಶ್ಚಿಕ್ಯಂ ಸಹಜಂ ತಪಶ್ಚ ನವಮಂ ತ್ರ್ಯಾದ್ಯಂ ತ್ರಿಕೋಣಂ ಚ ತತ್ ॥೧೯॥**

ಲಗ್ನವು ಲಗ್ನಾಧಿಪತಿ ಅಥವಾ ಗುರು ಬುಧರಿಂದ ನೋಡಲ್ಪಟ್ಟರೂ ಯಾ ಕೂಡಲ್ಪಟ್ಟರೂ, ಅನ್ಯ ಗ್ರಹರಿಂದ ನೋಡಲ್ಪಡದೆ, ಕೂಡಲ್ಪಡದೆ ಇದ್ದರೆ ಪೂರ್ಣಬಲವುಳ್ಳದ್ದಾಗುವುದು ಇದೇ ಗ್ರಹರು ಸಮ್ಮಿಶ್ರವಾಗಿದ್ದರೆ ಮಧ್ಯಬಲವುಳ್ಳದ್ದೆಂದೂ ಲಗ್ನಾಧಿಪತಿ ಗುರು ಬುಧರ ಯೋಗವಿಲ್ಲದೆ ಅನ್ಯ ಗ್ರಹರೆ ಇದ್ದು ನೋಡಲ್ಪಟ್ಟರೆ ಹೀನಬಲವುಳ್ಳದ್ದೆಂದೂ ತಿಳಿಯುವುದು ಕೇಂದ್ರ ಸ್ಥಾನದಲ್ಲಿರುವ ಗ್ರಹರು ಪೂರ್ಣಬಲವುಳ್ಳವರಾಗಿರುತ್ತಾರೆಂದೂ, ಪಣಪರ ಸ್ಥಾನದಲ್ಲಿರುವ ಗ್ರಹರು ಮಧ್ಯಬಲ ವುಳ್ಳವರೆಂದೂ, ಆಪೋಕ್ಲೀಮದಲ್ಲಿರುವ ಗ್ರಹರು ಹೀನಬಲವುಳ್ಳವರೆಂದೂ ತಿಳಿಯುವುದು. ದ್ವಿಪದರಾಶಿಗಳು ಹಗಲಿನಲ್ಲಿಯೂ, ಚತುಷ್ಪದ ರಾಶಿಗಳು ರಾತ್ರಿಯಲ್ಲಿಯೂ, ಕೀಟ ರಾಶಿಗಳು ಪ್ರಾತಃಕಾಲ, ಸಾಯಂಕಾಲದ ಸಂಧಿಸಮಯದಲ್ಲಿಯೂ, ಬಲವುಳ್ಳದ್ದಾಗುವುವು ಚಕ್ರ ಪೂರ್ವಾರ್ಧ ವೆಂದರೆ ಮೇಷದಿಂದ ಕನ್ಯಾ ಪರ್ಯಂತರ ಆರು ರಾಶಿಗಳನ್ನು ಐದು ಮೊದಲಾಗಿ ಐದು, ಆರು, ಏಳು, ಎಂಟು, ಒಂಬತ್ತು, ಹತ್ತು ಈ ಸಂಖ್ಯೆಗಳನ್ನು ನಾಲ್ಕರಿಂದ ಗುಣಿಸಿದರೆ ಆರು ರಾಶಿಗಳ

ಪ್ರಮಾಣವಾಗುವುದು ಹಾಗೆಯೇ ಈ ಪ್ರಮಾಣಗಳನ್ನು ತುಲಾದಿ ಆರು ರಾಶಿಗಳಿಗೆ ವ್ಯುತ್ಕ್ರಮ ವಾಗಿ ಪ್ರಮಾಣವಾಗುವುದು ಇದರಂತೆ ಗುಣಿಸಿದರೆ ಕುಂಭ, ಮೀನ, ಮೇಷ, ವೃಷಭ, ಹ್ರಸ್ವ ಗಳಾಗಿಯೂ, ಮಿಥುನ, ಕರ್ಕಾಟಕ, ಧನು, ಮಕರ ಮಧ್ಯವಾಗಿಯೂ (ಸಮ), ಸಿಂಹ, ಕನ್ಯಾ, ತುಲಾ, ವೃಶ್ಚಿಕ ದೀರ್ಘವೆಂತಲೂ ತಿಳಿಯತಕ್ಕದ್ದು ಇದರಿಂದ ಜನ್ಮಕಾಲದಲ್ಲಿ ಮಗುವಿನ ಅಂಗಗಳನ್ನು, ಚೋರ ಪ್ರಶ್ನಾದಿಗಳಲ್ಲಿ ಕಳ್ಳನು ಎಷ್ಟು ದೂರ ಹೋಗಿರಬಹುದೆಂತ ತಿಳಿಯಲು ಉಪಯೋಗವಾಗುವುದು ಸಹಜ ದುಶ್ಚಿಕ್ಯ ಎಂತ ತೃತೀಯ ಸ್ಥಾನಕ್ಕೂ, ತಪವೆಂತ ನವಮ ಸ್ಥಾನಕ್ಕೂ, ತ್ರ್ಯಾದ್ಯಂ ಎಂದರೆ ನವಮಕ್ಕೆ ತ್ರಿಕೋಣವೆಂತಲೂ ಸಂಜ್ಞೆಯನ್ನು ಹೇಳಲ್ಪಡುತ್ತದೆ

|| ಕೇಂದ್ರಾದಿ ಬಲ, ಸ್ಥಾನಗಳು ||

| ಸ್ಥಾನಗಳು | | | | ಬಲ |
|---|---|---|---|---|
| ೧ | ೪ | ೭ | ೧೦ | ಪೂರ್ಣ ಬಲ |
| ೨ | ೫ | ೮ | ೧೧ | ಮಧ್ಯ ಬಲ |
| ೩ | ೬ | ೯ | ೧೨ | ಹೀನ ಬಲ |

|| ರಾಶಿ ಬಲಗಳು ||

| ಮಿಥುನ | ಕನ್ಯಾ | ತುಲಾ | ಕುಂಭ | ಧನು ಪೂರ್ವಾರ್ಧ | ದಿವಾಬಲರಾಶಿ |
|---|---|---|---|---|---|
| ಮೇಷ | ವೃಷಭ | ಸಿಂಹ | ಧನು ಪರಾರ್ಧ | ಮಕರ ಪೂರ್ವಾರ್ಧ | ರಾತ್ರಿಬಲರಾಶಿ |
| ವೃಶ್ಚಿಕ | ಮೀನ | ಕರ್ಕಾಟಕ | ಮಕರ ಪರಾರ್ಧ | ೦ | ಸಂಧ್ಯಾದ್ವಯಬಲ |

|| ರಾಶಿ ಮಾನಗಳು ||

| ರಾಶಿ ಮಾನ | ಮೇಷ ೨೦ | ವೃಷಭ ೨೪ | ಮಿಥುನ ೨೮ | ಕರ್ಕಾಟಕ ೩೨ | ಸಿಂಹ ೩೬ | ಕನ್ಯಾ ೪೦ |
|---|---|---|---|---|---|---|
| ರಾಶಿ ಮಾನ | ತುಲಾ ೪೦ | ವೃಶ್ಚಿಕ ೩೬ | ಧನು ೩೨ | ಮಕರ ೨೮ | ಕುಂಭ ೨೪ | ಮೀನ ೨೦ |

ರಕ್ತಃಶ್ವೇತಃ ಶುಕತನು ನಿಭಃ ಪಾಟಲೋಧೂಮ್ರಪಾಂಡು ।
ಶ್ಚಿತ್ರಃ ಕೃಷ್ಣಃ ಕನಕ ಸದೃಶಃ ಪಿಂಗಲಃ ಕರ್ಬುರಶ್ಚ ॥
ಬಭ್ರುಃ ಸ್ವಚ್ಛಃ ಪ್ರಥಮ ಭವನಾದ್ಯೇಷು ವರ್ಣಾಃ ಪ್ಲವತ್ವಂ ।
ಸ್ವೇಶಾ ಶಾಖ್ಯಂ ದಿನಕರಯುತಾದ್ಭಾದ್ವಿತೀಯಂಚ ವೇಶಿಃ ॥೨೦॥

|| ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ರಾಶಿಭೇದನಿರೂಪಣಂ ನಾಮ ಪ್ರಥಮೋಧ್ಯಾಯಃ ||

ಮೇಷಾದಿ ಹನ್ನೆರಡು ರಾಶಿಗಳಿಗೆ ಕ್ರಮವಾಗಿ ಮೇಷ ರಕ್ತವರ್ಣವೂ, ವೃಷಭ ಶ್ವೇತ ವರ್ಣವೂ, ಮಿಥುನ ಗಿಳಿಯ ವರ್ಣ ಎಂದರೆ ಹಸುರು ವರ್ಣವೂ, ಕರ್ಕಾಟಕ ಕೆಂಪು ಕೂಡಿದ ಶ್ವೇತವರ್ಣವೂ, ಸಿಂಹ ಹೊಗೆ ಕೂಡಿದ ಬಿಳಿ ವರ್ಣವೂ, ಕನ್ಯಾ ಚಿತ್ರವರ್ಣವೂ, ತುಲಾ ನೀಲ ವರ್ಣವೂ, ವೃಶ್ಚಿಕ ಬಂಗಾರ ಸಮಬಂದ ವರ್ಣವೂ, ಧನು ಕಪಿಲ ವರ್ಣವೂ, ಮಕರ ಬಿಳಿ ಮಿಶ್ರಿತ ಕಪಿಲ ವರ್ಣವೂ, ಕುಂಭ ಬಿಳಿಯ ಬೂದಿ ವರ್ಣವೂ, ಮೀನ ಸ್ವಚ್ಛ ಬಿಳಿ ವರ್ಣವೂ ಎಂದು ತಿಳಿಯುವುದು ಪ್ಲವತ್ವವು ರಾಶ್ಯಾಧಿಪತಿಗಳಿಗೆ ಹೇಳಿದ ದಿಕ್ಕನ್ನು ರಾಶಿಗಳಿಗೆಂದು ತಿಳಿಯಬೇಕು ಸೂರ್ಯನಿಂದ ದ್ವಿತೀಯ ರಾಶಿಗೆ ವೇಶಿ ಎಂತ ಹೇಳಲ್ಪಡುತ್ತದೆ.

॥ ರಾಶಿ ವರ್ಣಗಳು ॥

| ರಾಶಿ | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ |
|---|---|---|---|---|---|---|
| ವರ್ಣ | ರಕ್ತ | ಶ್ವೇತ | ಗಿಳಿ | ಶ್ವೇತರಕ್ತ | ಹೊಗೆ ಕೂಡಿದ ಬಿಳಿ | ಚಿತ್ರ |
| ರಾಶಿ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
| ವರ್ಣ | ಕೃಷ್ಣ ನೀಲ | ಕನಕ ಸದೃಶ | ಪಿಂಗಲ ಕಪಿಲ | ಶುಕ್ಲ ಕಪಿಲಮಿಶ್ರ | ಬೂದು | ಸ್ವಚ್ಛ ಮೀನು ಸದೃಶ |

॥ ರಾಶಿಗಳ ಪ್ಲವತ್ವ ದಿಕ್ಕುಗಳು ॥

| ರಾಶಿ | ಮೇಷ | ವೃಷಭ | ಮಿಥುನ | ಕರ್ಕಾಟಕ | ಧನು | ಮಕರ | ಸಿಂಹ |
|---|---|---|---|---|---|---|---|
| ರಾಶಿ | ವೃಶ್ಚಿಕ | ತುಲಾ | ಕನ್ಯಾ | ೦ | ಮೀನ | ಕುಂಭ | ೦ |
| ರಾಶ್ಯಧಿಪತಿ | ಕುಜ | ಶುಕ್ರ | ಬುಧ | ಚಂದ್ರ | ಗುರು | ಶನಿ | ರವಿ |
| ಪ್ಲವಾದಿ ಸಂಜ್ಞೆ | ದಕ್ಷಿಣ | ಆಗ್ನೇಯ | ಉತ್ತರ | ವಾಯುವ್ಯ | ಈಶಾನ್ಯ | ಪಶ್ಚಿಮ | ಪೂರ್ವ |

॥ ರಾಶಿಭೇದವೆಂಬ ಒಂದನೇಯ ಅಧ್ಯಾಯವು ॥

## ॥ ಗ್ರಹಯೋನಿಭೇದಾಧ್ಯಾಯಃ ॥

**ಕಾಲಾತ್ಮಾ ದಿನಕೃನ್ಮನಸ್ತು ಹಿ ನಗುಃ ಸತ್ವಂ ಕುಜೋಜ್ಞೋ ವಚೋ ।**
**ಜೀವೋ ಜ್ಞಾನ ಸುಖೇ ಸಿತಶ್ಚ ಮದನೋ ದುಃಖಂ ದಿನೇಶಾತ್ಮಜಃ ॥**
**ರಾಜಾನೌ ರವಿಶೀತಗೂ ಕ್ಷಿತಿಸುತೋ ನೇತಾ ಕುಮಾರೋ ಬುಧಃ ।**
**ಸೂರಿರ್ದಾನವ ಪೂಜಿತಶ್ಚ ಸಚಿವೌ ಪ್ರೇಷ್ಯಃ ಸಹಸ್ರಾಂಶುಜಃ ॥೧॥**

ಕಾಲರೂಪೀ ಪುರುಷನ ಆತ್ಮವೇ ಸೂರ್ಯನೂ, ಮನಸ್ಸು ಚಂದ್ರನೂ, ಬಲವು ಕುಜನೂ, ವಾಕ್ಕು ಬುಧನೂ, ಜ್ಞಾನ ಸುಖಗಳು ಗುರುವೂ, ಮನ್ಮಥ ಶುಕ್ರನೂ, ದುಃಖ ಶನಿಯೂ, ಈ ಪ್ರಕಾರ ಗ್ರಹರು ಕಾರಣರಾಗುತ್ತಾರೆ. ಜನ್ಮಕಾಲದಲ್ಲಿ, ಆತ್ಮಾದಿ ಕಾರಕರಾಗಿರುವ ಗ್ರಹಗಳು ಬಲಿಷ್ಠ ರಾಗಿದ್ದರೆ ಶನಿಯನ್ನು ಬಿಟ್ಟು ಬಾಕಿ ಉಳಿದವರಿಗೆ ಹೇಳಿದ ಕಾರಕತ್ವಗಳು ವೃದ್ಧಿಯಾಗುವುದೆಂದೂ, ಶನಿಯು ಬಲಶಾಲಿಯಾಗಿದ್ದರೆ ದುಃಖಗಳು ಕಡಿಮೆಯಾಗುವುದೆಂದು ತಿಳಿಯತಕ್ಕದ್ದು. ಹಾಗೆಯೇ ಸೂರ್ಯ, ಚಂದ್ರರು ರಾಜರುಗಳೆಂದೂ, ಕುಜನು ಸೇನಾಪತಿ ಎಂದೂ, ಬುಧನು ಯುವರಾಜ ನೆಂದೂ, ಗುರು ಶುಕ್ರರು ಮಂತ್ರಿಗಳೆಂದೂ, ಶನಿಯು ಪರಿಚಾರಕನೆಂದೂ ಹೇಳಲ್ಪಟ್ಟಿದೆ ಜನ್ಮ ಕಾಲದಲ್ಲಿ ರಾಜಾದಿ ಗ್ರಹರು ಬಲವುಳ್ಳವರಾಗಿದ್ದರೆ ಅಧಿಕಾರ ಬುದ್ಧಿಚಾತುರ್ಯಾದಿ ಆಯಾಯ ವೃತ್ತಿಗಳಿಗೆ ಉತ್ತಮ ಫಲ ಉಂಟಾಗುವುದೆಂದೂ, ಹಾಗಿಲ್ಲದಿದ್ದರೆ ಮಧ್ಯಮ ಹಾಗೂ ಕನಿಷ್ಠ ಫಲ ಗಳೆಂದೂ ತಿಳಿಯತಕ್ಕದ್ದು.

**ಹೇಲಿಃ ಸೂರ್ಯಶ್ಚಂದ್ರಮಾಃ ಶೀತರಶ್ಮಿ ।**
**ಹೇರ್ಮ್ನೋವಿಟ್‌ಜ್ಞೋ ಬೋಧನಶ್ಚೇಂದು ಪುತ್ರಃ ॥**
**ಆರೋವಕ್ರಃ ಕ್ರೂರದೃಕ್ ಚಾವನೇಯಃ ।**
**ಕೋಣೋಮಂದಃ ಸೂರ್ಯಪುತ್ರೋಽಸಿತಶ್ಚ ॥೨॥**

ಹೇಲಿ, ಸೂರ್ಯ ಈ ಎರಡು ಹೆಸರುಗಳು ರವಿಗೂ, ಚಂದ್ರಮಾ, ಶೀತರಶ್ಮೀ ಎಂತ ಚಂದ್ರನಿಗೂ, ಹೇಮ್ನಾ, ವಿಟ್, ಬೋಧನ, ಇಂದುಪುತ್ರನೆಂತ ಬುಧನಿಗೂ, ಆರ, ವಕ್ರ, ಕ್ರೂರದೃಕ್, (ಭೂಮಿಪುತ್ರ) ಆವನೇಯ ಎಂತ ಕುಜನಿಗೂ, ಕೋಣ, ಮಂದ, ಸೂರ್ಯಪುತ್ರ, ಅಸಿತ ಎಂತ ಶನಿಗೂ ಸಂಜ್ಞೆ ಹೇಳಲ್ಪಟ್ಟಿದೆ.

**ಜೀವೋಂಽಗಿರಾಃ ಸುರಗುರುರ್ವಚಸಾಂ ಪತೀಜ್ಯೌ ।**
**ಶುಕ್ರೋಭೃಗುರ್ಭೃಗು ಸುತಃಸಿತ ಅಸ್ಫುಜಿಚ್ಚ ॥**
**ರಾಹುಸ್ತಮೋಽಗುರಸುರಶ್ಚ ಶಿಖೀಚ ಕೇತುಃ ।**
**ಪರ್ಯಾಯಮನ್ಯ ಮುಪಲಭ್ಯ ವದೇಚ್ಚಲೋಕಾತ್ ॥೩॥**

ಜೀವ, ಅಂಗಿರಾ, ಸುರಗುರು, ವಚಸಾಂಪತಿ ಎಂತ ಗುರುವಿಗೂ, ಶುಕ್ರ, ಭೃಗು, ಭೃಗುಸುತ, ಸಿತ, ಅಸ್ಫುಜಿತ್ ಎಂತ ಶುಕ್ರನಿಗೂ, ರಾಹು, ತಮ, ಅಗು, ಅಸುರ ಎಂತ ರಾಹುವಿಗೂ, ಶಿಖಿ, ಕೇತು ಎಂತ ಕೇತುವಿಗೂ ಹೇಳಲ್ಪಟ್ಟಿದೆ ಇದಲ್ಲದೆ ಪರ್ಯಾಯದಿಂದ ಬರುವ ಹೆಸರುಗಳು ನಿಘಂಟುಗಳಿಂದ ತಿಳಿದುಕೊಂಡು ಹೇಳತಕ್ಕದ್ದು

**ರಕ್ತಶ್ಯಾಮೋ ಭಾಸ್ಕರೋ ಗೌರ ಇಂದು ।**
**ರ್ನಾತ್ಯುಚ್ಚಾಂಗೋ ರಕ್ತ ಗೌರಶ್ಚ ವಕ್ರಃ ॥**
**ದೂರ್ವಾಶ್ಯಾಮೋಜ್ಞೋ ಗುರುರ್ಗೌರ ಗಾತ್ರಃ ।**
**ಶ್ಯಾಮಃ ಶುಕ್ರೋ ಭಾಸ್ಕರಿಃ ಕೃಷ್ಣದೇಹಃ ॥೪॥**

ಸೂರ್ಯನು ರಕ್ತ ಶ್ಯಾಮ ಅಂದರೆ ಕಪ್ಪು ಕೂಡಿದ ಕೆಂಪು ವರ್ಣವುಳ್ಳವನೂ, ಚಂದ್ರನು ಬಿಳಿ ವರ್ಣವುಳ್ಳವನೂ, ಸಣ್ಣ ಶರೀರವುಳ್ಳ ಕುಜನು ಕೆಂಪು ಮಿಶ್ರವಾದ ಬಿಳೀ ವರ್ಣದವನೂ, ಬುಧನು ಗರಿಕೆಹುಲ್ಲು ಅಂದರೆ ಪಚ್ಚೆ ವರ್ಣವುಳ್ಳವನೂ, ಗುರುವು ದೊಡ್ಡ (ಅಗಲವಾದ) ಶರೀರವಿದ್ದು ಬಿಳಿ ವರ್ಣವುಳ್ಳವನೂ, ಶುಕ್ರನು ಕಪ್ಪು ಮಿಶ್ರವಾದ ಬಿಳಿ ವರ್ಣವುಳ್ಳವನೂ (ಎಣ್ಣೆ ಕಪ್ಪು), ಶನಿಯು ಕಪ್ಪು ವರ್ಣವುಳ್ಳವನೂ ಎಂತ ಹೇಳಲ್ಪಟ್ಟಿದೆ. ಲಗ್ನದಲ್ಲಿ ಬಲವುಳ್ಳವರಾದ ಗ್ರಹರಿಂದ ಅಥವಾ ಲಗ್ನಾಂಶಕದಿಂದ ಜಾತಕನ ವರ್ಣಾದಿಗಳನ್ನು ಕಳೆದುಹೋದ ವಸ್ತುಗಳನ್ನು ಕಳ್ಳನ ವರ್ಣವನ್ನು ಹೇಳಲು ಅನುಕೂಲವಾಗುವುದು.

**॥ ಗ್ರಹರ ವರ್ಣಗಳು ॥**

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ವರ್ಣ | ರಕ್ತ ಶ್ಯಾಮ | ಶ್ವೇತ | ರಕ್ತ ಗೌರ | ದೂರ್ವಾ ಶ್ಯಾಮ | ಗೌರ | ಶ್ಯಾಮ | ಕೃಷ್ಣ ಕಪ್ಪು |

**ವರ್ಣಾಸ್ತಾಮ್ರ ಸಿತಾತಿ ರಕ್ತ ಹರಿತವ್ಯಾಪೀತ ಚಿತ್ರಾಸಿತಾ ।**
**ವಹ್ನ್ಯಂಬ್ವಗ್ನಿಜ ಕೇಶವೇಂದ್ರ ಶಚಿಕಾಃ ಸೂರ್ಯಾದಿನಾಥಾಃ ಕ್ರಮಾತ್ ॥**
**ಪ್ರಾಗಾದ್ಯಾ ರವಿಶುಕ್ರಲೋಹಿತತಮಃ ಸೌರೇಂದು ವಿತ್ಸೂರಯಃ ।**
**ಕ್ಷೀಣೇಂದ್ವರ್ಕ ಮಹೀಸುತಾರ್ಕ ತನಯಾಃ ಪಾಪಾಬುಧ ಸ್ತೈಯುತಃ ॥೫॥**

ತಾಮ್ರ ವರ್ಣಕ್ಕೆ ಸೂರ್ಯನೂ, ಬಿಳಿ ವರ್ಣಕ್ಕೆ ಚಂದ್ರನೂ, ಅತ್ಯಂತ ರಕ್ತ ವರ್ಣಕ್ಕೆ ಕುಜನೂ, ಹಸಿರು ವರ್ಣಕ್ಕೆ ಬುಧನೂ, ಹಳದಿ ವರ್ಣಕ್ಕೆ ಗುರುವೂ, ಚಿತ್ರ ವರ್ಣಕ್ಕೆ ಶುಕ್ರನೂ, ಕಪ್ಪು ವರ್ಣಕ್ಕೆ ಶನಿಯೂ ಕ್ರಮವಾಗಿ ಅಧಿಪತಿಗಳಾಗುತ್ತಾರೆ ಸೂರ್ಯನಿಗೆ ಅಗ್ನಿಯೂ, ಚಂದ್ರನಿಗೆ ಜಲ (ನೀರು)ವೂ, ಕುಜನಿಗೆ ಕುಮಾರನೂ (ಸ್ಕಂದ), ಬುಧನಿಗೆ ವಿಷ್ಣುವೂ, ಗುರುವಿಗೆ ಇಂದ್ರನೂ, ಶುಕ್ರನಿಗೆ ಶಚೀದೇವಿಯೂ, ಶನಿಗೆ ಬ್ರಹ್ಮನೂ, ಈ ಪ್ರಕಾರವಾಗಿ ಗ್ರಹಗಳಿಗೆ ದೇವತೆಗಳು, ಇದು

ನವಗ್ರಹ ಪೂಜಾ ಆರಾಧನೆಗಳಿಗೆ ಉಪಯೋಗವಾಗುವುದು. ಅಲ್ಲದೆ ಜನ್ಮಲಗ್ನದಿಂದ ಐದನೇ ಸ್ಥಾನಾಧಿಪತಿಯಾದ ಗ್ರಹದ ದೇವತಾ ಭಕ್ತಿಯಾಗುವುದೆಂದು ಹೇಳಲ್ಪಟ್ಟಿರುತ್ತದೆ ಪೂರ್ವಕ್ಕೆ ರವಿಯೂ, ಆಗ್ನೇಯಕ್ಕೆ ಶುಕ್ರನೂ, ದಕ್ಷಿಣಕ್ಕೆ ಕುಜನೂ, ನೈಋತ್ಯಕ್ಕೆ ರಾಹುವೂ, ಪಶ್ಚಿಮಕ್ಕೆ ಶನಿಯೂ, ವಾಯುವ್ಯಕ್ಕೆ ಚಂದ್ರನೂ, ಉತ್ತರಕ್ಕೆ ಬುಧನೂ, ಈಶಾನ್ಯಕ್ಕೆ ಗುರುವೂ ಹೀಗೆ ದಿಕ್ಕುಗಳಿಗೆ ಅಧಿಪತಿಗಳಾಗುವರು. ಇದನ್ನು ಸೂತಿಕಾ ಗೃಹ ದ್ವಾರ ಜನನ ಸ್ಥಳ ನಿರ್ಣಯಕ್ಕೂ, ಚೋರಾದಿ ಪ್ರಶ್ನೆಗಳಿಗೂ ಉಪಯೋಗವಾಗುವುದು ಕ್ಷೀಣ ಚಂದ್ರನೂ (ಶುಕ್ಲ ಪಾಡ್ಯದಿಂದ ಹತ್ತು ದಿವಸ ಮಧ್ಯ ಬಲವುಳ್ಳವನೂ ನಂತರ ಹತ್ತು ದಿವಸ ಪೂರ್ಣ ಬಲವುಳ್ಳವನೂ ಅನಂತರ ಹತ್ತು ದಿವಸ ದುರ್ಬಲವುಳ್ಳವನೂ ಕ್ಷೀಣ ಚಂದ್ರನೆಂದು ತಿಳಿಯುವುದು) ರವಿಯು, ಕುಜನು, ಶನಿಯು ಪಾಪ ಗ್ರಹಗಳು ಅವರೊಂದಿಗೆ ಕೂಡಿದ ಬುಧನೂ ಪಾಪ ಗ್ರಹವಾಗುತ್ತಾನೆ. ಗುರು ಶುಕ್ರ, ಬುಧ, (ಶುದ್ಧ) ಪೂರ್ಣಚಂದ್ರ ಇವರು ಶುಭಗ್ರಹಗಳೆಂದು ತಿಳಿಯತಕ್ಕದ್ದು ಜನ್ಮಕಾಲದಲ್ಲಿ ಬಲಯುತರಾದ ಶುಭ ಪಾಪಗ್ರಹಗಳಿಗೆ ತಕ್ಕಂತೆ ಸ್ವಭಾವ ವೃತ್ತಿಯುಳ್ಳವರಾಗುವರು

**॥ಗ್ರಹರ ವರ್ಣಾದಿ ಅಧಿಪತ್ಯಗಳು ॥**

| ಅಧಿಪತಿ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ೦ |
|---|---|---|---|---|---|---|---|---|
| ವರ್ಣ | ತಾಮ್ರ | ಬಿಳಿ | ಅತಿರಕ್ತ | ಹಸಿರು | ಹಳದಿ | ಚಿತ್ರ ನಾನಾವರ್ಣ | ಕಪ್ಪು | ೦ |
| ಗ್ರಹರು | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ೦ |
| ಅಧಿಪತಿ | ಅಗ್ನಿ | ಜಲ | ಕಾರ್ತಿಕೇಯ | ವಿಷ್ಣು | ಇಂದ್ರ | ಇಂದ್ರಾಣಿ | ಬ್ರಹ್ಮಾ | ೦ |
| ಗ್ರಹರು | ರವಿ | ಶುಕ್ರ | ಕುಜ | ರಾಹು | ಶನಿ | ಚಂದ್ರ | ಬುಧ | ಗುರು |
| ದಿಕ್ಕು | ಪೂರ್ವ | ಆಗ್ನೇಯ | ದಕ್ಷಿಣ | ನೈಋತ್ಯ | ಪಶ್ಚಿಮ | ವಾಯುವ್ಯ | ಉತ್ತರ | ಈಶಾನ್ಯ |

**ಬುಧ ಸೂರ್ಯಸುತೌ ನಪುಂಸಕಾಖ್ಯೌ ।**
**ಶಶಿಶುಕ್ರೌ ಯುವತೀ ನರಾಶ್ಚ ಶೇಷಾಃ ॥**
**ಶಿಖಿ ಭೂಖಪಯೋ ಮರುದ್ಗಣಾನಾಂ ।**
**ವಶಿನೋಭೂಮಿ ಸುತಾದಯಃ ಕ್ರಮೇಣ ॥೬॥**

ಬುಧ, ಶನಿಗಳಿಗೆ ನಪುಂಸಕರೆಂದೂ, ಚಂದ್ರ, ಶುಕ್ರರಿಗೆ ಸ್ತ್ರೀಗ್ರಹಗಳೆಂದೂ ಬಾಕಿ ಉಳಿದ ಗುರು ರವಿ, ಕುಜರು ಪುರುಷರೆಂದೂ ಸಂಜ್ಞೆಗಳನ್ನು ಹೇಳಲ್ಪಟ್ಟಿದೆ ಜನ್ಮಕಾಲದಲ್ಲಿ ಬಲಿಷ್ಠರಾಗಿರುವ ಗ್ರಹರಿಂದ ಸ್ತ್ರೀ ಪುರುಷತ್ವವನ್ನು, ಸ್ವಭಾವವನ್ನು, ಚೋರಪ್ರಶ್ನೆಯಲ್ಲಿ ಕಳ್ಳನನ್ನು ಇದರಿಂದ ತಿಳಿಯ ಬಹುದು ಮತ್ತು ಅಗ್ನಿಗೆ (ತೇಜ) ಕುಜನೂ, ಭೂಮಿಗೆ ಬುಧನೂ, ಆಕಾಶಕ್ಕೆ ಗುರುವೂ, ಜಲಕ್ಕೆ ಶುಕ್ರನೂ, ವಾಯುವಿಗೆ ಶನಿಯೂ ಹೀಗೆ ಪಂಚಭೂತಗಳಿಗೆ ಕುಜಾದಿ ಗ್ರಹಗಳು ಅಧಿಪತಿ ಗಳಾಗಿರುತ್ತಾರೆ. ಇಲ್ಲಿ ಸೂರ್ಯನಿಗೆ ಅಗ್ನಿ, ಚಂದ್ರನಿಗೆ ಜಲ ತತ್ವವೆಂದು ತಿಳಿಯತಕ್ಕದ್ದು.

॥ ಗ್ರಹರಿಗೆ ಸ್ತ್ರೀ ಪುರುಷ ನಪುಂಸಕಾದಿ ಸಂಜ್ಞೆಗಳು ॥

| ಪುರುಷ | ರವಿ | ಗುರು | ಕುಜ | ೦ | ೦ |
|---|---|---|---|---|---|
| ಸ್ತ್ರೀ | ಚಂದ್ರ | ಶುಕ್ರ | ೦ | ೦ | ೦ |
| ನಪುಂಸಕ | ಬುಧ | ಶನಿ | ೦ | ೦ | ೦ |
| ಪಂಚತತ್ವ | ಅಗ್ನಿ | ಪೃಥ್ವಿ | ಆಕಾಶ | ಜಲ | ವಾಯು |
| ಅಧಿಪತ್ಯ | ಕುಜ | ಬುಧ | ಗುರು | ಶುಕ್ರ | ಶನಿ |

ವಿಪ್ರಾದಿತಃ ಶುಕ್ರಗುರೂ ಕುಜಾರ್ಕೌ ।
ಶಶೀಬುಧಶ್ಚೇತ್ಯ ಸಿತೋಂತ್ಯ ಜಾನಾಮ್ ॥
ಚಂದ್ರಾರ್ಕ ಜೀವಾಜ್ಞ್ಞ ಸಿತೌಕುಜಾರ್ಕಿ ।
ಯಥಾಕ್ರಮಂ ಸತ್ವರಜಸ್ತಮಾಂಸಿ ॥೭॥

ಗುರು ಶುಕ್ರರು ಬ್ರಾಹ್ಮಣ ವರ್ಣದವರೆಂದೂ, ಕುಜ ರವಿಗಳು ಕ್ಷತ್ರಿಯರೆಂದೂ, ಚಂದ್ರನು ವೈಶ್ಯನೆಂದೂ, ಬುಧನು ಶೂದ್ರನೆಂದೂ, ಶನಿಯು ಅಂತ್ಯಜಾತಿಯವನೆಂದೂ, (ಬುಧ ವೈಶ್ಯ, ಶನಿ ಶೂದ್ರನೆಂದು ಪಾಠಾಂತರವಿದೆ) ಈ ಪ್ರಕಾರ ಗ್ರಹಗಳಿಗೆ ವರ್ಣ ಭೇದಗಳನ್ನು ಹೇಳಲ್ಪಟ್ಟಿದೆ ರವಿ, ಚಂದ್ರ, ಗುರುಗಳು ಸಾತ್ವಿಕ ಗುಣದವರೆಂದೂ, ಬುಧ ಶುಕ್ರರು ರಾಜಸ ಗುಣದವರೆಂದೂ, ಕುಜ ಶನಿಗಳು ತಾಮಸ ಗುಣದವರೆಂದೂ ಹೇಳಲ್ಪಟ್ಟಿದೆ. ಇದರಿಂದ ಜಾತಕನ ಮನೋವೃತ್ತಿ, ಗುಣಗಳು, ಪ್ರಶ್ನಾದಿಗಳಿಗೂ ಜಾತಿ ಮುಂತಾಗಿ ಹೀಗೆಯೇ ತಿಳಿಯಬೇಕು.

॥ ಗ್ರಹರ ವರ್ಣ ಮತ್ತು ಗುಣಗಳು ॥

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ವರ್ಣ | ಕ್ಷತ್ರಿಯ | ವೈಶ್ಯ | ಕ್ಷತ್ರಿಯ | ವೈಶ್ಯ | ಬ್ರಾಹ್ಮಣ | ಬ್ರಾಹ್ಮಣ | ವರ್ಣ ಸಂಕರ |
| ಗುಣ | ಸತ್ವ ಗುಣ | ಸತ್ವ ಗುಣ | ತಮೋ ಗುಣ | ರಜೋ ಗುಣ | ಸತ್ವ ಗುಣ | ರಜೋ ಗುಣ | ತಮೋ ಗುಣ |

ಪ್ರಯೋಜನ, ಜಾತಕದಲ್ಲಿ ರವಿಯು ಯಾವ ಗ್ರಹದ ತ್ರಿಶಾಂಶದಲ್ಲಿರುವನೋ ಆ ಗುಣವೇ ಜಾತಕನಿಗೆ ಪ್ರಾಧಾನ್ಯ ಗುಣವೆಂತ ತಿಳಿಯಬೇಕು.

ಮಧು ಪಿಂಗಳದೃಕ್ ಚತುರಶ್ರತನುಃ ।
ಪಿತ್ತ ಪ್ರಕೃತಿಃ ಸವಿತಾऽಲ್ಪಕಚಃ ॥
ತನುವೃತ್ತತನು ರ್ಬಹುವಾತಕಫಃ ಪ್ರಾಜ್ಞಶ್ಚ ।
ಶಶೀ ಮೃದುವಾಕ್ ಶುಭದೃಕ್ ॥೮॥

ಸೂರ್ಯನು ಜೇನುತುಪ್ಪ ವರ್ಣದಿಂದ ಕೂಡಿದ ಪಿಂಗಳ ವರ್ಣದ ಕಣ್ಣುಗಳುಳ್ಳವನೂ ಚತುಷ್ಕೋಣ (ಅಗಲವಾದ ಭುಜವಿದ್ದು ಸಮೋಚ್ಚ) ಶರೀರ ಉಳ್ಳವನೂ, ಪಿತ್ತ ಪ್ರಕೃತಿಯುಳ್ಳವನೂ, ಸ್ವಲ್ಪ ಕೂದಲುಳ್ಳವನೂ ಆಗಿರುತ್ತಾನೆ. ಚಂದ್ರನು ಕೃಶವಾದ ದುಂಡಗಿರುವ ಶರೀರ ಉಳ್ಳವನೂ ವಿಶೇಷವಾದ ಕಫ ಮಿಶ್ರಿತವಾದ ಪ್ರಕೃತಿಯುಳ್ಳವನೂ, ಜ್ಞಾನವಂತನೂ, ತಿಳುವಳಿಕೆ ಇದ್ದು ಮಧುರವಾಗಿ ಮಾತಾಡುವವನೂ ಶುಭ (ಚಂದ) ದೃಷ್ಟಿಯುಳ್ಳವನೂ ಆಗಿರುತ್ತಾನೆ.

**ಕ್ರೂರದೃಕ್ ತರುಣಮೂರ್ತಿರುದಾರಃ ।**
**ಪೈತಿಕಃ ಸುಚಪಲಃ ಕೃಶಮಧ್ಯಃ ॥**
**ಶ್ಲಿಷ್ಟವಾಕ್ ಸತತ ಹಾಸ್ಯರುಚಿಜ್ಞಃ ।**
**ಪಿತ್ತಮಾರುತಕಫ ಪ್ರಕೃತಿಶ್ಚ ॥೯॥**

ಕುಜನು ಕ್ರೂರ ದೃಷ್ಟಿಯುಳ್ಳವನೂ, ಯೌವನದಿಂದ ಕೂಡಿದ ಶರೀರವುಳ್ಳವನೂ, ಉದಾರನೂ, ಪಿತ್ತ ಪ್ರಕೃತಿಯುಳ್ಳವನೂ, ಚಂಚಲನೂ, ಬಡ ನಡುವುಳ್ಳವನೂ ಆಗಿರುತ್ತಾನೆ. ಬುಧನು ಗದ್ಗದ ಸ್ವರ ಅಥವಾ ಶ್ಲಿಷ್ಟ ವಾಕ್ ಎಂದರೆ ಒಂದು ಶಬ್ದಕ್ಕೆ ಅನೇಕಾರ್ಥ ಬರುವಂತೆ ಮಾತಾಡುವವನೂ, ಯಾವಾಗಲೂ ಹಾಸ್ಯಪ್ರಿಯನೂ, ಪಿತ್ತ ವಾಯು ಕಫ ಪ್ರಕೃತಿಯುಳ್ಳವನೂ ಆಗಿರುತ್ತಾನೆ.

**ಬೃಹತ್ತನುಃ ಪಿಂಗಳ ಮೂರ್ಧ ಜೇಕ್ಷಣೋ ।**
**ಬೃಹಸ್ಪತಿಃ ಶ್ರೇಷ್ಠಮತಿಃ ಕಫಾತ್ಮಕಃ ॥**
**ಭೃಗುಃ ಸುಖೀಕಾಂತವಪುಃ ಸುಲೋಚನಃ ।**
**ಕಫಾನಿಲಾತ್ಮಾಽಸಿತ ವಕ್ರಮೂರ್ಧಜಃ ॥೧೦॥**

ಗುರುವು ದೊಡ್ಡ (ಅಗಲವಾದ) ಶರೀರವುಳ್ಳವನೂ, ಪಿಂಗಳವಾದ ತಲೆಕೂದಲು ಮತ್ತು ಕಣ್ಣುಗಳುಳ್ಳವನೂ, ಶ್ರೇಷ್ಠ ಬುದ್ಧಿಯುಳ್ಳವನೂ, (ಧರ್ಮದಿಂದ ಕೂಡಿದ ವಿಶೇಷ ಬುದ್ಧಿ) ಕಫ ಪ್ರಕೃತಿಯುಳ್ಳವನೂ ಆಗಿರುತ್ತಾನೆ. ಶುಕ್ರನು ಸುಖಿಯಾಗಿರುವವನೂ ವ ಸುಖವನ್ನು ಬಯಸುವವನೂ, ಕಾಂತಿಯುಕ್ತವಾದ ಶರೀರ (ಮೈಕಟ್ಟು)ವುಳ್ಳವನೂ, ಸುಂದರವಾದ ಕಣ್ಣುಗಳುಳ್ಳವನೂ ಕಫ ವಾತ ಪ್ರಕೃತಿಯುಳ್ಳವನೂ, ಕಪ್ಪಾದ ಅತೀ ಚೆಂದವಾದ ಗುಂಗುರು ಕೂದಲುಗಳುಳ್ಳವನೂ ಆಗಿರುತ್ತಾನೆ.

**ಮಂದೋಲಸಃ ಕಪಿಲದೃಕ್ ಕೃಶದೀರ್ಘಗಾತ್ರಃ ।**
**ಸ್ಥೂಲದ್ವಿಜಃ ಪರುಷರೋಮ ಕಚೋಽನಿಲಾತ್ಮಾ ॥**

ಸ್ನಾಯ್ವಸ್ಥ್ಯಸೃಕ್ತ್ವಗಥ ಶುಕ್ರವಸೇ ಚಮಜ್ಜಾ ।
ಮಂದಾsರ್ಕಚಂದ್ರ ಬುಧ ಶುಕ್ರ ಸುರೇಜ್ಯ ಭೌಮಾಃ ॥೧೧॥

ಶನಿಯು ಆಲಸ್ಯ ಸ್ವಭಾವವುಳ್ಳವನೂ, ಕಪಿಲ ವರ್ಣದ ಕಣ್ಣುಗಳುಳ್ಳವನೂ, ಕೃಶವಾಗಿ ಉದ್ದವಾದ ಶರೀರವುಳ್ಳವನೂ. ದೊಡ್ಡದಾದ ಹಲ್ಲುಗಳುಳ್ಳವನೂ (ಎದುರು ಎರಡು ಹಲ್ಲುಗಳಾದರೂ ದಪ್ಪವಾಗಿ ದೊಡ್ಡದಿರುತ್ತವೆ) ಗಟ್ಟಿಯಾದ ವ ಒರಟಾದ ರೋಮ ಮತ್ತು ಕೂದಲುಗಳುಳ್ಳವನೂ ವಾತ ಪ್ರಕೃತಿಯುಳ್ಳವನೂ ಆಗಿರುತ್ತಾನೆ. ನರಗಳಿಗೆ ಶನಿಯೂ, ಅಸ್ಥಿಗಳಿಗೆ ರವಿಯೂ, ರಕ್ತಕ್ಕೆ ಚಂದ್ರನೂ, ಚರ್ಮಕ್ಕೆ ಬುಧನೂ, (ವೀರ್ಯ) ಧಾತುವಿಗೆ ಶುಕ್ರನೂ, ಮಿದುಳಿಗೆ ಗುರುವೂ, ಎಲುಬಿನಲ್ಲಿರುವ ಧಾತುವಿಗೆ ಕುಜನೂ ಕಾರಕರಾಗುತ್ತಾರೆ. ಜನ್ಮಕಾಲದಲ್ಲಿ ಬಲಯುಕ್ತರಾದ ಗ್ರಹರಿಗೆ ಹೇಳಲ್ಪಟ್ಟ ಧಾತುಗಳು ದೇಹದಲ್ಲಿ ಬೇಕಾದಷ್ಟು ಇರುವುದೆಂದೂ ಅಬಲರಾದರೆ ಕಡಿಮೆ ಇದೆ ಎಂತಲೂ ಶರೀರ ಕಾಂತಿ ವರ್ಣಾದಿಗಳನ್ನೂ ಮತ್ತು ಚೋರ ಪ್ರಶ್ನಾದಿಗಳಲ್ಲಿಯೂ ರೋಗಾದ್ಯುಪದ್ರವಗಳಲ್ಲಿಯೂ ಅಲ್ಲಲ್ಲಿಗೆ ಬೇಕಾದಂತೆ ಮೇಲೆ ರವ್ಯಾದಿ ಗ್ರಹರಿಗೆ ಹೇಳಿದ ಎಲ್ಲಾ ವಿಷಯ ಗಳನ್ನು ವಿವರಿಸಲು ಉಪಯೋಗವಾಗುವುದೆಂದು ತಿಳಿಯತಕ್ಕದ್ದು

॥ ಸ್ನಾಯು ಇತ್ಯಾದಿ ಧಾತುಗಳು ॥

| ಗ್ರಹರು | ಶನಿ | ರವಿ | ಚಂದ್ರ | ಬುಧ | ಶುಕ್ರ | ಗುರು | ಕುಜ |
|---|---|---|---|---|---|---|---|
| ಧಾತುಗಳು | ಸ್ನಾಯು ನರ | ಅಸ್ಥಿ | ರಕ್ತ | ಚರ್ಮ | ವೀರ್ಯ | ಮೆದುಳು | ಎಲುಬಿನ ಸತ್ವ |

ದೇವಾಂಬ್ವಗ್ನಿ ವಿಹಾರ ಕೋಶಶಯನಕ್ಷಿತ್ಯುತ್ಕರೇಶಾಃ ಕ್ರಮಾ ।
ದ್ವಸ್ತ್ರಂ ಸ್ಥೂಲಮಭುಕ್ತಮಗ್ನಿ ಕಹತಂ ಮಧ್ಯಂ ದೃಢಂ ಸ್ಫಾಟಿತಂ ॥
ತಾಮ್ರಂ ಸ್ಯಾನ್ಮಣಿ ಹೇಮಯುಕ್ತಿ ರಜತಾನ್ಯರ್ಕಾಚ್ಚ ಮುಕ್ತಾಯಸೀ ।
ದ್ರೇಕ್ಕಾಣೈಃ ಶಿಶಿರಾದಯಃ ಶಶುರುಚಜ್ಞಗ್ವಾದಿಷೂದ್ಯತ್ಸುವಾ ॥೧೨॥

ಸೂರ್ಯನಿಗೆ ಪೂಜಾದಿಗಳಿಗೆ ಉಪಯುಕ್ತವಾದ ಸ್ಥಳ ದೇವಸ್ಥಾನವೂ, ಚಂದ್ರನಿಗೆ ನೀರಿರುವ ಪ್ರದೇಶ ಜಲ ಸ್ಥಾನವೂ, ಕುಜನಿಗೆ ಅಗ್ನಿ ಅಡಿಗೆ ಇತ್ಯಾದಿ ಸ್ಥಳ ಸ್ಥಾನವೂ, ಬುಧನಿಗೆ ಕ್ರೀಡಾ, ವಿಹಾರ ಸ್ಥಾನವೂ; ಗುರುವಿಗೆ ದ್ರವ್ಯವಿಡುವ ಸ್ಥಾನವೂ; ಶುಕ್ರನಿಗೆ ಶಯನ ಸ್ಥಾನವೂ; ಶನಿಗೆ ಮಣ್ಣು ರಾಶಿ ಅಥವಾ ಕಸ ಇರುವ ಸ್ಥಾನವೂ ಹೀಗೆ ಅಧಿಕಾರವುಳ್ಳವರಾಗುವರು. ಸೂರ್ಯನಿಗೆ ಸ್ಥೂಲ ವಸ್ತ್ರವೂ, ಚಂದ್ರನಿಗೆ ಹೊಸ ವಸ್ತ್ರವೂ, ಕುಜನಿಗೆ ಬೆಂಕಿಯಿಂದ ಸುಟ್ಟ ವಸ್ತ್ರವೂ, ಬುಧನಿಗೆ ನೀರಿಂದ ನೆನೆದ ವಸ್ತ್ರವೂ, ಗುರುವಿಗೆ ಹೊಸತಲ್ಲದ ಮಧ್ಯಮ ವಸ್ತ್ರವೂ, ಶುಕ್ರನಿಗೆ ಘಟ್ಟಿಯಾದ ವಸ್ತ್ರವೂ, ಶನಿಗೆ ಹರಿದ ವಸ್ತ್ರವೂ, ಈ ಕ್ರಮದಂತೆ ಗ್ರಹರು ವಸ್ತ್ರಗಳಿಗೆ ಕಾರಕತ್ವವುಳ್ಳವರಾಗಿರುವರು. ಇಲ್ಲಿ ಹೇಳಲ್ಪಟ್ಟ ಸ್ಥಾನದಿಂದಲೂ, ವಸ್ತ್ರದಿಂದಲೂ ಜನನ ಕಾಲದಲ್ಲಿ ಸೂತಿಕಾ ಗ್ರಹ ಮತ್ತು ಅಲ್ಲಿರುವ ಜನರ ವಸ್ತ್ರ, ಚೋರ ನಷ್ಟ ಪ್ರಶ್ನೆಗಳಲ್ಲಿ ವಸ್ತು, ಕಳ್ಳನಿರುವ ಸ್ಥಾನ, ಕಳ್ಳನ ವಸ್ತ್ರ, ಸ್ವಭಾವ ಮೊದಲಾದುವುಗಳನ್ನು ಇದರಿಂದ ತಿಳಿಯಬಹುದು. ಸೂರ್ಯನಿಗೆ

ತಾಮ್ರವೂ, ಚಂದ್ರನಿಗೆ ರತ್ನವೂ, ಕುಜನಿಗೆ ಚಿನ್ನವೂ, ಬುಧನಿಗೆ ಕಂಚು, ಹಿತ್ತಾಳಿಯೂ, ಗುರುವಿಗೆ ಬೆಳ್ಳಿಯೂ, ಶುಕ್ರನಿಗೆ ಮುತ್ತೂ, ಶನಿಗೆ ಸೀಸವೂ (ಕಬ್ಬಿಣ, ಉಕ್ಕು) ಈ ಪ್ರಕಾರ ಗ್ರಹರು ಧಾತುಗಳಿಗೆ ಕಾರಕತ್ವವುಳ್ಳವರಾಗುವರು. ಇದರಿಂದ ಜನನ ಕಾಲದಲ್ಲಿರುವ ದೀಪ ಭಾಜನ ಕಳೆದುಹೋದ ಪ್ರಶ್ನಾದಿಗಳಲ್ಲಿ ಅಪಹೃತ ದ್ರವ್ಯಜ್ಞಾನಕ್ಕೂ ಜನ್ಮಕಾಲದಲ್ಲಿ ಬಲವಂತರಾದ ಗ್ರಹರ ದೆಸೆಯಿಂದ ದಶಾಕಾಲದಲ್ಲಿ ವಸ್ತು ಪ್ರಯೋಜನ ಕೆಟ್ಟ ದುರ್ಬಲ ಗ್ರಹರ ದಶಾಬಂದ ಕಾಲದಲ್ಲಿ ದ್ರವ್ಯ ನಾಶವನ್ನು ಹೇಳುವುದಕ್ಕೂ ಉಪಯೋಗವಾಗುವುದೆಂದು ತಿಳಿಯತಕ್ಕದ್ದು. ಶನಿ, ಶುಕ್ರ, ಕುಜ, ಚಂದ್ರ, ಬುಧ, ಗುರು ಈ ಗ್ರಹರಿಗೆ ಶಿಶಿರ, ವಸಂತ, ಗ್ರೀಷ್ಮ, ವರ್ಷ, ಶರತ್ತು ಹಾಗೂ ಹೇಮಂತಗಳೆಂಬ ಆರು ಋತುಗಳೆಂದು ತಿಳಿಯುವುದು (ಸೂರ್ಯನಿಗೆ ಗ್ರೀಷ್ಮ ಋತು). ಈ ಋತುಗಳನ್ನು ನಿರ್ಣಯಿಸುವಾಗ ಲಗ್ನದಲ್ಲಿರುವ ಬಲವದ್ಗ್ರಹಕ್ಕೆ ಸರಿಯಾದ ಋತುವೆಂದೂ ಲಗ್ನದಲ್ಲಿ ಗ್ರಹರಿಲ್ಲದಿದ್ದರೆ ದ್ರೇಕ್ಕಾಣಾಧಿಪತಿಗೆ ಹೇಳಿದ ಋತುಗಳನ್ನು ಹೇಳತಕ್ಕದ್ದು ಮತ್ತು ಲಗ್ನಗತ ಗ್ರಹಗಳಿಂದ ಮತ್ತು ದ್ರೇಕ್ಕಾಣದಿಂದ ಜಾತಕದಲ್ಲಿ ಲಗ್ನ ನಿಶ್ಚಯಕ್ಕೂ ನಷ್ಟಜಾತಕ ಪ್ರಶ್ನಾದಿಗಳಲ್ಲಿಯೂ ಇದರಿಂದ ವಿಶೇಷ ಉಪಯೋಗವಾಗುವುದು.

॥ ಗ್ರಹರ ಸ್ಥಾನ, ವಸ್ತ್ರಾದಿಗಳು ॥

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಸ್ಥಾನ | ದೇವ | ಜಲ | ಅಗ್ನಿ | ಕ್ರೀಡಾ | ಕೋಶ | ಶಯನ | ಮಣ್ಣಿನ ರಾಶಿ |
| ವಸ್ತ್ರ | ದಪ್ಪ ವಸ್ತ್ರ | ಹೊಸ ವಸ್ತ್ರ | ಸುಟ್ಟ ವಸ್ತ್ರ | ನೀರಿಂದ ನೆನೆದದ್ದು | ಮಧ್ಯಮ | ಗಟ್ಟಿ ಇರುವ | ಹರಿದ ವಸ್ತ್ರ |
| ದ್ರವ್ಯ | ತಾಮ್ರ | ರತ್ನ | ಸುವರ್ಣ | ಕಂಚು | ಬೆಳ್ಳಿ | ಮುತ್ತು | ಸೀಸ |

॥ ಗ್ರಹರ ಋತುಗಳು ॥

| ಗ್ರಹ | ಶನಿ | ಶುಕ್ರ | ಕುಜ | ಚಂದ್ರ | ಬುಧ | ಗುರು |
|---|---|---|---|---|---|---|
| ಋತು | ಶಿಶಿರ | ವಸಂತ | ಗ್ರೀಷ್ಮ | ವರ್ಷ | ಶರದ | ಹೇಮಂತ |

ವಿ ಸೂ ರವಿಗೆ ಗ್ರೀಷ್ಮ ಋತುವೆಂತ ಹೇಳಲ್ಪಟ್ಟಿದೆ

**ತ್ರಿದಶ ತ್ರಿಕೋಣಚತುರಶ್ರ ಸಪ್ತಮಾನ್ಯವಲೋಕಯಂತಿ ಚರಣಾಭಿವೃದ್ಧಿತಃ ॥**
**ರವಿಜಾಮರೇಜ್ಯ ರುಧಿರಾಃಪರೇಚಯೇ ಕ್ರಮಶೋ ಭವಂತಿ ಕಿಲವೀಕ್ಷಣೇಧಿಕಾಃ ॥೧೩॥**

ಶನಿಗೆ ತೃತೀಯ, ದಶಮ ಪಾದ ದೃಷ್ಟಿ. ಸಪ್ತಮಕ್ಕೆ ಸಾಮಾನ್ಯ ದೃಷ್ಟಿ ಗುರುವಿಗೆ ಪಂಚಮ ನವಮದಲ್ಲಿ ಅರ್ಧ ದೃಷ್ಟಿ, ಸಪ್ತಮದಲ್ಲಿ ಸಾಮಾನ್ಯ ದೃಷ್ಟಿ. ಕುಜನಿಗೆ ಚತುರ್ಥ, ಅಷ್ಟಮಕ್ಕೆ

ತ್ರಿಪಾದ (ಮುಕ್ಕಾಲು) ದೃಷ್ಟಿ. ಸಪ್ತಮದಲ್ಲಿ ಸಾಮಾನ್ಯ ದೃಷ್ಟಿ, ಉಳಿದ ಸೂರ್ಯ, ಚಂದ್ರ, ಬುಧ, ಶುಕ್ರರಿಗೆ ವಿಶೇಷ ದೃಷ್ಟಿ ಇಲ್ಲದಿರುವುದರಿಂದ ಸಪ್ತಮ ಸ್ಥಾನದಲ್ಲಿ ಸಂಪೂರ್ಣ ದೃಷ್ಟಿ ಎಂತ ತಿಳಿಯತಕ್ಕದ್ದು.

**ಅಯನಕ್ಷಣವಾಸರರ್ತವೋ ಮಾಸ ಮಾಸಾರ್ಧಂ ಚ ಸಮಾಶ್ಚ ಭಾಸ್ಕರಾತ್ ॥**
**ಕಟುಕಲವಣತಿಕ್ತ ಮಿಶ್ರಿತಾ ಮಧುರಾಮ್ಲೌಚ ಕಷಾಯ ಇತ್ಯಪಿ ॥೧೪॥**

ಸೂರ್ಯನಿಗೆ ಆರು ತಿಂಗಳೂ, ಚಂದ್ರನಿಗೆ ಅತ್ಯಲ್ಪ ಎಂದರೆ ಕ್ಷಣಕಾಲವೂ, ಕುಜನಿಗೆ ಒಂದು ವಾರ ಅಂದರೆ ೭ ದಿವಸವೂ, ಬುಧನಿಗೆ ಎರಡು ತಿಂಗಳೂ, ಗುರುವಿಗೆ ಒಂದು ತಿಂಗಳೂ ಶುಕ್ರನಿಗೆ ಹದಿನೈದು ದಿವಸವೂ, ಶನಿಗೆ ಒಂದು ವರ್ಷವೂ ಈ ಪ್ರಕಾರ ಕಾಲ ನಿರ್ಣಯವೆಂದೂ, ಇದರಿಂದ ಪ್ರಶ್ನಾದಿಗಳಲ್ಲಿ ಲಗ್ನದಲ್ಲಿರುವ ಗ್ರಹರಿಗೆ ಅಥವಾ ನವಾಂಶಗಳ ಗ್ರಹರಿಗೆ ಸರಿಯಾಗಿ ಎಷ್ಟು ಕಾಲವು ಹೇಳಲ್ಪಟ್ಟಿದೆಯೋ ಅದರಂತೆ ಶುಭಾಶುಭ ಫಲಗಳನ್ನು ಹೇಳತಕ್ಕದ್ದು ಮತ್ತು ರವಿಗೆ ಖಾರ, ಚಂದ್ರನಿಗೆ ಉಪ್ಪು, ಕುಜನಿಗೆ ಕಹಿ, ಬುಧನಿಗೆ ಮಿಶ್ರರಸ, ಗುರುವಿಗೆ ಸಿಹಿ, ಶುಕ್ರನಿಗೆ ಹುಳಿ, ಶನಿಗೆ ವಗರು, ಈ ಪ್ರಕಾರವಾಗಿ ಸೂರ್ಯಾದಿ ಗ್ರಹರಿಗೆ ರಸವು ಹೇಳಲ್ಪಟ್ಟಿದೆ ಜನ್ಮಕಾಲ ಲಗ್ನದಿಂದ ಷಷ್ಠ ಸ್ಥಾನದಲ್ಲಿ ಬಲಿಷ್ಠರಾದ ಗ್ರಹರಿಗೆ ಸರಿಯಾದ ರಸದಲ್ಲಿ ಜಾತಕನಿಗೆ ಪ್ರೀತಿ ಯುಂಟಾಗುವುದೆಂದೂ, ನಷ್ಟ ಪ್ರಶ್ನೆಗಳಲ್ಲಿಯೂ ಉಪಯೋಗವಾಗುವುದು

॥ ಗ್ರಹರ ಕಾಲ ಮತ್ತು ರಸಗಳು ॥

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಕಾಲ | ಅಯನ | ಕ್ಷಣ | ಒಂದು ವಾರ | ಋತು (೨ ತಿಂಗಳು) | ಒಂದು ತಿಂಗಳು | ೧೫ ದಿವಸ॥ | ಒಂದು ವರ್ಷ |
| ರಸ | ಖಾರ | ಉಪ್ಪು | ಕಹಿ | ಮಿಶ್ರಿತ | ಸಿಹಿ | ಹುಳಿ | ವಗರು |

**ಜೀವೋ ಜೀವ ಬುಧೌ ಸಿತೇಂದು ತನಯೌ ವ್ಯರ್ಕಾ ವಿಭೌಮಾಃ ಕ್ರಮಾ ।**
**ದ್ವೀಂದ್ವರ್ಕಾ ವಿಕುಜೇಂದ್ವಿನಾಶ್ಚ ಸುಹೃದಃ ಕೇಷಾಂ ಚಿದೇವಂ ಮತಮ್ ॥**
**ಸತ್ಯೋಕ್ತೇ ಸುಹೃದ ಸ್ತ್ರೀಕೋಣ ಭವನಾತ್ ಸ್ವಾತ್ ಸ್ವಾಂತ್ಯಧೀ ಧರ್ಮಪಾಃ**
**ಸ್ವೋಚ್ಚಾಯುಃ ಸುಖಪಾಃ ಸ್ವಲಕ್ಷಣ ವಿಧೇರ್ನಾನ್ಯೇ ವಿರೋಧಾದಿತಿ ॥೧೫॥**

ಗುರುವು ಸೂರ್ಯನಿಗೂ, ಗುರು, ಬುಧರು ಚಂದ್ರನಿಗೂ, ಶುಕ್ರ ಬುಧರು ಕುಜನಿಗೂ, ಸೂರ್ಯ ನಲ್ಲದೆ ಚಂದ್ರ ಕುಜ, ಗುರು, ಶುಕ್ರ, ಶನಿ, ಬುಧನಿಗೂ, ಕುಜನಲ್ಲದೆ ರವಿ, ಚಂದ್ರ, ಬುಧ, ಶುಕ್ರ, ಶನಿ ಗುರುವಿಗೂ, ಚಂದ್ರ ಸೂರ್ಯರನ್ನು ಬಿಟ್ಟು ಕುಜ ಬುಧ ಗುರು ಶನಿ ಶುಕ್ರನಿಗೂ, ಕುಜ ಚಂದ್ರ ಸೂರ್ಯರನ್ನು ಬಿಟ್ಟು ಬುಧ ಶುಕ್ರ ಗುರು ಶನಿಗೂ, ಮಿತ್ರರೆಂದೂ ಇತರ ಗ್ರಹಗಳು

ಶತ್ರುಗಳೆಂದೂ ಕೆಲವರ ಅಭಿಪ್ರಾಯವಾಗಿರುತ್ತದೆ ಸತ್ಯಾಚಾರ್ಯರು ಹೇಳುವುದೇನೆಂದರೆ ಗ್ರಹಗಳಿಗೆ ತನ್ನ ಮೂಲತ್ರಿಕೋಣ ಸ್ಥಾನದಿಂದ ದ್ವಿತೀಯ, ದ್ವಾದಶ, ಪಂಚಮ, ನವಮ, ಉಚ್ಚಾಧಿಪತಿ, ಅಷ್ಟಮ, ಚತರ್ಥದ ಅಧಿಪತಿಗಳು ಮಿತ್ರರೆಂದೂ ಇದಕ್ಕೆ ವ್ಯತಿರಿಕ್ತವಾದ ಅಧಿಪತಿಗಳು ವೈರಿಗಳೆಂದೂ ಒಂದು ಸ್ಥಾನ ಮಿತ್ರ ಇನ್ನೊಂದು ಸ್ಥಾನ ವೈರಿಯಾಗಿದ್ದರೆ ಆ ಗ್ರಹರು ಸಮರೆಂದು ತಿಳಿಯತಕ್ಕದ್ದು. ಈ ಮತವನ್ನೇ ಅಂಗೀಕರಿಸಿ ಜನರಿಗೆ ಸುಲಭವಾಗು ವಂತೆ ವಿವರಿಸಲ್ಪಟ್ಟಿದೆ.

|| ಸತ್ಯಾಚಾರ್ಯೋಕ್ತ ಮಿತ್ರತ್ವಾದಿಗಳು ||

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಮೂಲತ್ರಿಕೋಣ | ಸಿಂಹ | ವೃಷಭ | ಮೇಷ | ಕನ್ಯಾ | ಧನು | ತುಲಾ | ಕುಂಭ |
| ಸ್ಥಾನಾಧಿಪತಿ ಮಿತ್ರ | ೨ | ೨ | ೨ | ೨ | ೨ | ೨ | ೨ |
| ಸ್ಥಾನಾಧಿಪತಿ ಮಿತ್ರ | ೧೨ | ೧೨ | ೧೨ | ೧೨ | ೧೨ | ೧೨ | ೧೨ |
| ಸ್ಥಾನಾಧಿಪತಿ ಮಿತ್ರ | ೫ | ೫ | ೫ | ೫ | ೫ | ೫ | ೫ |
| ಸ್ಥಾನಾಧಿಪತಿ ಮಿತ್ರ | ೯ | ೯ | ೯ | ೯ | ೯ | ೯ | ೯ |
| ಉಚ್ಚ ರಾಶಿ | ಮೇಷ | ವೃಷಭ | ಮಕರ | ಕನ್ಯಾ | ಕರ್ಕಾಟಕ | ಮೀನ | ತುಲಾ |
| ಸ್ಥಾನಾಧಿಪತಿ ಮಿತ್ರ | ೮ | ೮ | ೮ | ೮ | ೮ | ೮ | ೮ |
| ಸ್ಥಾನಾಧಿಪತಿ ಮಿತ್ರ | ೪ | ೪ | ೪ | ೪ | ೪ | ೪ | ೪ |

**ಶತ್ರೂಮಂದಸಿತೌ ಸಮಶ್ಚ ಶಶಿಜೋ ಮಿತ್ರಾಣಿ ಶೇಷಾರವೇ**
**ಸ್ತೀಕ್ಷ್ಣಾಂಶುರ್ಹಿಮ ರಶ್ಮಿಜಶ್ಚ ಸುಹೃದೌ ಶೇಷಾಃ ಸಮಾಃ ಶೀತಗೋಃ ||**
**ಜೀವೇಂದೂಷ್ಣಕರಾಃ ಕುಜಸ್ಯ ಸುಹೃದೋ ಜ್ಞೋऽರಿಃ ಸಿತಾರ್ಕೀ ಸಮೌ**
**ಮಿತ್ರೇ ಸೂರ್ಯಸಿತೌ ಬುಧಸ್ಯ ಹಿಮಗುಃ ಶತ್ರುಃ ಸಮಾಶ್ಚಾऽಪರೇ ||೧೬||**

ಸೂರ್ಯನಿಗೆ ಶನಿ ಶುಕ್ರರು ಶತ್ರುಗಳು. ಬುಧನು ಸಮನು ಬಾಕಿ ಉಳಿದ ಚಂದ್ರ, ಗುರು ಕುಜರು ಮಿತ್ರರು. ಚಂದ್ರನಿಗೆ ಸೂರ್ಯ, ಬುಧರು ಮಿತ್ರರು. ಉಳಿದ ಎಲ್ಲಾ ಗ್ರಹರು ಸಮರು. ಇವನಿಗೆ ಶತ್ರುಗಳಿಲ್ಲಾ. ಕುಜನಿಗೆ ರವಿ, ಚಂದ್ರ, ಗುರುಗಳು ಮಿತ್ರರು. ಬುಧನು ಶತ್ರುವು. ಮಿಕ್ಕ ಶನಿ, ಶುಕ್ರರು ಸಮರು. ಬುಧನಿಗೆ ಸೂರ್ಯ, ಶುಕ್ರರು ಮಿತ್ರರು ಚಂದ್ರನು ಶತ್ರುವು ಉಳಿದ ಕುಜ, ಗುರು ಶನಿಗಳು ಸಮರು ಎಂತ ಹೇಳಲ್ಪಟ್ಟಿದೆ.

**ಸೂರೇಃ ಸೌಮ್ಯ ಸಿತಾವರೀ ರವಿ ಸುತೋಮಧ್ಯೋऽಪರೇತ್ವನ್ಯಥಾ |**
**ಸೌಮ್ಯಾರ್ಕೀ ಸುಹೃದೌ ಸಮೌ ಕುಜ ಗುರೂ ಶುಕ್ರಸ್ಯ ಶೇಷಾವರೀ ||**
**ಶುಕ್ರಜ್ಞೌ ಸುಹೃದೌ ಸಮಃ ಸುರಗುರುಃ ಸೌರಸ್ಯ ಚಾऽನ್ಯೇರಯೋ**
**ಯೇ ಪ್ರೋಕ್ತಾಃ ಸ್ವತ್ರಿಕೋಣ ಭಾದಿಷು ಪುನಸ್ತೇऽಮೀ ಮಯಾ ಕೀರ್ತಿತಾಃ ||೧೭||**

ಗುರುವಿಗೆ ಬುಧ, ಶುಕ್ರರು ಶತ್ರುಗಳು ಶನಿಯು ಸಮನು ಉಳಿದ ಸೂರ್ಯ, ಚಂದ್ರ, ಕುಜರು ಮಿತ್ರರು ಶುಕ್ರನಿಗೆ ಬುಧ, ಶನಿಗಳು ಮಿತ್ರರು ಕುಜ, ಗುರುಗಳು ಸಮರು. ಮಿಕ್ಕುಳಿದ ಸೂರ್ಯ ಚಂದ್ರರು ಶತ್ರುಗಳು ಶನಿಗೆ ಬುಧ, ಶುಕ್ರರು ಮಿತ್ರರು ಗುರುವು ಸಮನು. ಸೂರ್ಯ, ಚಂದ್ರ ಕುಜರು ಶತ್ರುಗಳು ಈಗ ಹೇಳಿರುವ ಶತ್ರುಗಳು ಮಿತ್ರತ್ವಾದಿಗಳು ಆಯಾಯ ಗ್ರಹರ ಮೂಲತ್ರಿಕೋಣಗಳಿಂದ ಸತ್ಯಾಚಾರ್ಯರ ಮತದಂತೆ ಹೇಳಲ್ಪಟ್ಟಿರುತ್ತದೆ.

॥ ಸತ್ಯಾಚಾರ್ಯೋಕ್ತಿಯಂತೆ ವರಾಹಮಿಹಿರ ಮತಾನುಸಾರ ಮಿತ್ರತ್ವಾದಿಗಳು ॥

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಮಿತ್ರ | ಚಂದ್ರ<br>ಕುಜ<br>ಗುರು | ರವಿ<br>ಬುಧ | ರವಿ<br>ಚಂದ್ರ<br>ಗುರು | ರವಿ<br>ಶುಕ್ರ | ರವಿ<br>ಚಂದ್ರ<br>ಕುಜ | ಬುಧ<br>ಶನಿ | ಶುಕ್ರ<br>ಬುಧ |
| ಸಮ | ಬುಧ | ಕುಜ<br>ಶುಕ್ರ<br>ಗುರು<br>ಶನಿ | ಶುಕ್ರ<br>ಶನಿ | ಕುಜ<br>ಗುರು<br>ಶನಿ | ಶನಿ | ಕುಜ<br>ಗುರು | ಗುರು |
| ಶತ್ರು | ಶುಕ್ರ<br>ಶನಿ | ೦ | ಬುಧ | ಚಂದ್ರ | ಬುಧ<br>ಶುಕ್ರ | ರವಿ<br>ಚಂದ್ರ | ರವಿ<br>ಚಂದ್ರ<br>ಕುಜ |

ಅನ್ಯೋನ್ಯಸ್ಯ ಧನವ್ಯಯಾಯ ಸಹಜ ವ್ಯಾಪಾರ ಬಂಧುಸ್ಥಿತಾ
ಸ್ತತ್ಕಾಲೇ ಸುಹೃದಃ ಸ್ವತುಂಗಭವನೇ ಪ್ಯೇಕೇಽರಯಸ್ತ್ವನ್ಯಥಾ ॥
ದ್ವ್ಯೇಕಾನುಕ್ತಭಪಾನ್ ಸುಹೃತ್ ಸಮರಿಪೂನ್ ಸಂಚಿತ್ಯ ನೈಸರ್ಗಿಕಾಂ ।
ಸ್ತತ್ಕಾಲೇಚಪುನಸ್ತು ತಾನಧಿಸುಹೃನ್ ಮಿತ್ರಾದಿಭಿಃ ಕಲ್ಪಯೇತ್ ॥೧೮॥

ಗ್ರಹಗಳಿಗೆ ಪರಸ್ಪರ ಗ್ರಹರಿರುವ ಸ್ಥಾನದಿಂದ ದ್ವಿತೀಯ, ದ್ವಾದಶ, ಏಕಾದಶ, ತೃತೀಯ, ದಶಮ, ಚತುರ್ಥ ಈ ರಾಶಿಗಳಲ್ಲಿರುವ ಗ್ರಹರು ತಾತ್ಕಾಲಿಕ ಮಿತ್ರರಾಗುತ್ತಾರೆ. ಕೆಲವರು ತನ್ನ ಉಚ್ಚ ರಾಶಿಯಲ್ಲಿರುವ ಗ್ರಹಮಿತ್ರರೆಂದು ಹೇಳುವರು. ಬಾಕಿ ಉಳಿದ ಲಗ್ನ, ಪಂಚಮ, ಷಷ್ಠ, ಸಪ್ತಮ, ಅಷ್ಟಮ, ನವಮ ಈ ರಾಶಿಗಳಲ್ಲಿರುವ ಗ್ರಹರು ತಾತ್ಕಾಲಿಕ ಶತ್ರುಗಳು. ಹಿಂದೆ ಹೇಳಿದ ನೈಸರ್ಗಿಕ ಮಿತ್ರತ್ವ ಸಮ ಶತ್ರುತ್ವಗಳನ್ನು ಇಲ್ಲಿ ಹೇಳಿದ ಅನ್ಯೋನ್ಯ ಮಿತ್ರ, ಶತ್ರುತ್ವವನ್ನು ತಿಳಿದುಕೊಂಡು ಅಧಿಕ ಮಿತ್ರ, ಮಿತ್ರ, ಸಮ, ಶತ್ರು, ಅಧಿಕ ಶತ್ರು ಇತ್ಯಾದಿಯನ್ನು ನಿರ್ಣಯಿಸಿ ಶುಭಾಶುಭ ಫಲಗಳನ್ನು ಹೇಳತಕ್ಕದ್ದು.

## ತತ್ಕಾಲ ಮಿತ್ರಶತೃಗಳು

| ಮಿತ್ರ | ೨ | ೩ | ೪ | ೧೦ | ೧೧ | ೧೨ | ಉಚ್ಚ |
|---|---|---|---|---|---|---|---|
| ಶತ್ರು | ೫ | ೬ | ೭ | ೮ | ೯ | ೧ | ೦ |

## ಉದಾಹರಣೆ

ಶ್ರೀ ಶಕ ೧೯೦೧ ಸಿದ್ಧಾರ್ಥ ನಾಮ ಸಂ।ರದ ಶ್ರಾವಣ ಶುಕ್ಲ ೬ ಯು ಚಂದ್ರವಾರ ಉದಯಾದಿ ಘಟಿ ೧೨।।। ತಾ. ೩೦-೭-೧೯೭೯ ಮಧ್ಯಾಹ್ನ ಘಂ ೧೧-೧೦ ಎ ಎಂ ಕ್ಕೆ ಕನ್ಯಾಲಗ್ನದಲ್ಲಿ

<table>
<tr><td>೦</td><td>೦</td><td>೦</td><td>ಕುಜ</td></tr>
<tr><td>೦</td><td colspan="2" rowspan="2">ಗ್ರಹಕುಂಡಲಿ</td><td>ರವಿ ಬುಧ<br>ಗುರು ಶುಕ್ರ</td></tr>
<tr><td>೦</td><td>ಶನಿ</td></tr>
<tr><td>೦</td><td>೦</td><td>೦</td><td>ಲಗ್ನ<br>ಚಂದ್ರ</td></tr>
</table>

ಈ ಜಾತಕದಲ್ಲಿ ರವಿಗೆ ಕುಜನು ನೈಸರ್ಗಿಕ ಮಿತ್ರನಾಗಿ ತತ್ಕಾಲ ಮಿತ್ರನಾದುದರಿಂದ ಅಧಿಮಿತ್ರ ನಾಗುತ್ತಾನೆ ರವಿಗೆ ಕುಜನ ಗೃಹವೇ ಉಚ್ಚ ಸ್ಥಾನವಾದ್ದರಿಂದ ಅದರಲ್ಲಿ ವಿಶೇಷವೆಂತ ತಿಳಿಯಬೇಕು ರವಿಗೆ ಚಂದ್ರನು ನೈಸರ್ಗಿಕ ಮತ್ತು ತತ್ಕಾಲ ಮಿತ್ರನಾದ್ದರಿಂದ ಅಧಿಮಿತ್ರ ನಾಗುವನು. ರವಿಗೆ ಗುರು ನೈಸರ್ಗಿಕ ಮಿತ್ರನಾಗಿ ತತ್ಕಾಲ ಶತ್ರುವಾದ್ದರಿಂದ ಸಮನಾಗುವನು ರವಿಗೆ ಶನಿಯು ನೈಸರ್ಗಿಕ ಶತ್ರುವಾಗಿ ತತ್ಕಾಲ ಮಿತ್ರನಾದುದರಿಂದ ಸಮನಾಗುವನು ರವಿಗೆ ಬುಧನು ನೈಸರ್ಗಿಕ ಸಮನಾದರೂ ತತ್ಕಾಲ ಶತ್ರುವಾದ್ದರಿಂದ ಶತ್ರುವಾದನು ರವಿಗೆ ಶುಕ್ರನು ನೈಸರ್ಗಿಕ ಶತ್ರುವಾಗಿ ತತ್ಕಾಲದಲ್ಲಿಯೂ ಶತ್ರುವಾದುದರಿಂದ ಅಧಿಶತ್ರುವಾದನು ಹೀಗೆಯೇ ಎಲ್ಲಾ ಗ್ರಹರಿಗೂ ಅಧಿಮಿತ್ರ ಮಿತ್ರ, ಸಮ, ಶತ್ರು, ಅಧಿಶತ್ರು ಇತ್ಯಾದಿಗಳನ್ನು ನಿರ್ಣೈಸ ತಕ್ಕದ್ದು

## ಸಂಸ್ಕರಿಸಿದ ಅಧಿಮಿತ್ರತ್ವಾಧಿಗಳು

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಅಧಿಮಿತ್ರ | ಚಂದ್ರ ಕುಜ | ರವಿ ಬುಧ | ರವಿ ಚಂದ್ರ ಗುರು | ೦ | ಚಂದ್ರ ಕುಜ | ಶನಿ | ಬುಧ ಶುಕ್ರ |
| ಮಿತ್ರ | ೦ | ಕುಜ ಗುರು ಶುಕ್ರ ಶನಿ | ಶುಕ್ರ ಶನಿ | ಕುಜ ಶನಿ | ಶನಿ | ಕುಜ | ಗುರು |
| ಸಮ | ಗುರು ಶನಿ | ೦ | ಬುಧ | ರವಿ ಚಂದ್ರ ಶುಕ್ರ | ರವಿ | ಚಂದ್ರ ಬುಧ | ರವಿ ಚಂದ್ರ ಕುಜ |
| ಶತ್ರು | ಬುಧ | ೦ | ೦ | ಗುರು | ೦ | ಗುರು | ೦ |
| ಅಧಿಶತ್ರು | ಶುಕ್ರ | ೦ | ೦ | ೦ | ಬುಧ ಶುಕ್ರ | ರವಿ | ೦ |

ಸ್ವೋಚ್ಚಸುಹೃತ್ಸ್ವ ತ್ರಿಕೋಣ ನವಾಂಶೈಃ ।
ಸ್ಥಾನಬಲಂ ಸ್ವಗೃಹೋಪಗತೇಚ ॥
ದಿಕ್ಷು ಬುಧಾಂಗಿರಸೌ ರವಿಭೌಮೌ ।
ಸೂರ್ಯಸುತಃ ಸಿತಶೀತಕರೌ ಚ ॥೧೯॥

ಗ್ರಹಗಳು ತಮ್ಮ ತಮ್ಮ ಉಚ್ಚ ಸ್ಥಾನ, ಮೂಲತ್ರಿಕೋಣ ಸ್ಥಾನ, ಸ್ವಕ್ಷೇತ್ರ, ಮಿತ್ರಕ್ಷೇತ್ರ, ಸ್ವನವಾಂಶಗಳಲ್ಲಿದ್ದರೆ ಸ್ಥಾನ ಬಲಯುಕ್ತರಾಗುವರು. ಪೂರ್ವ ದಿಕ್ಕಿನಲ್ಲಿ ಬುಧ ಗುರುಗಳು ಲಗ್ನದಲ್ಲಿ, ದಕ್ಷಿಣದಲ್ಲಿ ರವಿ ಕುಜರು ದಶಮದಲ್ಲಿ, ಪಶ್ಚಿಮದಲ್ಲಿ ಶನಿ ಸಪ್ತಮದಲ್ಲಿ, ಉತ್ತರ ದಲ್ಲಿ ಶುಕ್ರ ಚಂದ್ರರು ಚತುರ್ಥ ಸ್ಥಾನದಲ್ಲಿದ್ದರೆ ಗ್ರಹರು ದಿಗ್ಬಲವುಳ್ಳವರಾಗುತ್ತಾರೆ.

॥ ದಿಕ್ ಬಲಗಳು ॥

| ೦ | ಲಗ್ನ<br>ಗುರು ಬುಧ | ೦ | ೦ |
|---|---|---|---|
| ೦ | | | ಚಂದ್ರ<br>ಶುಕ್ರ |
| ರವಿ<br>ಕುಜ | | | ೦ |
| ೦ | ೦ | ಶನಿ | ೦ |

**ಉದಗಯನೇ ರವಿ ಶೀತಮಯೂಖೌ ।**
**ವಕ್ರಸಮಾಗಮಗಾಃ ಪರಿಶೇಷಾಃ ॥**
**ವಿಪುಲಕರಾ ಯುಧಿಚೋತ್ತರ ಸಂಸ್ಥಾಶ್ಚೇಷ್ಟಿತ ।**
**ವೀರ್ಯಯುತಾಃ ಪರಿಕಲ್ಪ್ಯಾಃ ॥೨೦॥**

ಉತ್ತರಾಯಣದಲ್ಲಿ ಸೂರ್ಯ ಚಂದ್ರರು ಬಲಶಾಲಿಗಳೆಂದೂ ಉಳಿದ ಕುಜ, ಬುಧ, ಗುರು ಶುಕ್ರ, ಶನಿ ಹೀಗೆ ಐದು ಗ್ರಹರು ವಕ್ರಗತಿಯಲ್ಲಿದ್ದರೆ ಬಲಶಾಲಿಗಳೆಂದೂ ತಿಳಿಯತಕ್ಕದ್ದು. (ಇವರು ಚಂದ್ರನೊಡನೆ ಸೇರಿದರೆ ಬಲಯುಕ್ತರಾಗುವರು. ರವಿಯೊಡನಿದ್ದು ಅಸ್ತಂಗತರಾಗಿದ್ದರೆ ಬಲ ಹೀನರಾಗುವರು.) ಗ್ರಹ ಯುದ್ಧದಲ್ಲಿ ವಿಸ್ತಾರ ಕಿರಣವುಳ್ಳವರಾಗಿಯೂ ಶುಕ್ರನಲ್ಲದೆ ಬಾಕಿ ಉಳಿದ ಗ್ರಹರು ಉತ್ತರ ದಿಕ್ಕಿನಲ್ಲಿರುವವರಾಗಿಯೂ ಇದ್ದರೆ ಚೇಷ್ಟಾ ಬಲವುಳ್ಳವರಾಗುತ್ತಾರೆ. ಶುಕ್ರನು ಮಾತ್ರ ದಕ್ಷಿಣದಲ್ಲಿದ್ದರೆ ಬಲಶಾಲಿಯಾಗುತ್ತಾನೆಂದು ತಿಳಿಯಬೇಕು.

**ನಿಶಿಶಶಿಕುಜ ಸೌರಾಃ ಸರ್ವದಾಜ್ಞೋಽಹ್ನಿ ಚಾನ್ಯೇ ।**
**ಬಹುಲ ಸಿತಗತಾಃ ಸ್ಯುಃ ಕ್ರೂರ ಸೌಮ್ಯಾಃ ಕ್ರಮೇಣ ॥**
**ದ್ವ್ಯಯನ ದಿವಸ ಹೋರಾಮಾಸಪೈಃ ಕಾಲವೀರ್ಯಂ ।**
**ಶಕುಬುಗುಶುಚರಾದ್ಯಾ ವೃದ್ಧಿತೋ ವೀರ್ಯವಂತಃ ॥೨೧॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಗ್ರಹಪ್ರಾದುರ್ಭಾವ ನಿರೂಪಣಂ ನಾಮ ದ್ವಿತೀಯೋಧ್ಯಾಯಃ ॥**

ಚಂದ್ರ, ಕುಜ, ಶನಿಗಳು ರಾತ್ರಿಯಲ್ಲಿಯೂ, ಬುಧನು ಹಗಲು ರಾತ್ರಿ ಭೇದವಿಲ್ಲದೆ ಎಲ್ಲಾ

ಕಾಲದಲ್ಲಿಯೂ, ರವಿ, ಗುರು, ಶುಕ್ರರು ಹಗಲಿನಲ್ಲಿಯೂ ಬಲವುಳ್ಳರಾಗುತ್ತಾರೆ ಕ್ರೂರ (ಪಾಪ) ಗ್ರಹರು ಕೃಷ್ಣಪಕ್ಷದಲ್ಲಿಯೂ ಶುಭ ಗ್ರಹರು ಶುಕ್ಲಪಕ್ಷದಲ್ಲಿಯೂ ಬಲಶಾಲಿಗಳಾಗುತ್ತಾರೆ ವರ್ಷ, ದಿವಸ, ಕಾಲ, ಹೋರೆ, ಮಾಸ ಇವುಗಳ ಅಧಿಪತಿಗಳಿಂದ ಕಾಲಬಲವನ್ನು ತಿಳಿದುಕೊಳ್ಳಬೇಕು. ನೈಸರ್ಗಿಕ ಬಲದಲ್ಲಿ ಶನಿ, ಕುಜ, ಬುಧ, ಗುರು, ಶುಕ್ರ, ಚಂದ್ರ, ರವಿ, ಇವರು ಒಬ್ಬರಿಗಿಂತ ಒಬ್ಬರು ಉತ್ತರೋತ್ತರವಾಗಿ ಹೆಚ್ಚಾದ ಬಲ ಹೊಂದಿದವರಾಗುತ್ತಾರೆ (ಇಲ್ಲಿ ಷಡ್ಬಲ ಗುಣಿಸುವುದಕ್ಕೆ ಬೇಕಾದ ಪ್ರಮಾಣಗಳನ್ನು ಹೇಳಿರುತ್ತಾರೆ )

**॥ ಗ್ರಹಪ್ರಾದುರ್ಭಾವವೆಂಬ ಎರಡನೇಯ ಅಧ್ಯಾಯವು ॥**

## ॥ ವಿಯೋನಿಜನ್ಮಾಧ್ಯಾಯಃ ॥

ಕ್ರೂರಗ್ರಹೈಃ ಸುಬಲಿಭಿರ್ವಿಬಲೈಶ್ಚ ಸೌಮ್ಯೈಃ ।
ಕ್ಲೀಬೇ ಚತುಷ್ಟಯಗತೇ ತದವೇಕ್ಷಣಾದ್ವಾ ॥
ಚಂದ್ರೋಪಗದ್ವಿರಸಭಾಗ ಸಮಾನರೂಪಂ ।
ಸತ್ವಂವದೇದ್ಯದಿ ಭವೇತ್ಸ ವಿಯೋನಿ ಸಂಜ್ಞಾ ॥೧॥

ಕ್ರೂರ ಗ್ರಹರಾದ ರವಿ, ಕುಜ, ಶನಿ, ಕ್ಷೀಣಚಂದ್ರ, ಪಾಪಯುಕ್ತ ಬುಧ, ಈ ಗ್ರಹಗಳು ಬಲವುಳ್ಳ ವರಾಗಿದ್ದು ಶುಭಗ್ರಹರಾದ ಪೂರ್ಣಚಂದ್ರ, ಶುದ್ಧ ಬುಧ, ಗುರು, ಶುಕ್ರರು ಬಲಹೀನರಾಗಿದ್ದು, ನಪುಂಸಕ ಗ್ರಹರಾದ ಶನಿ, ಬುಧರು ಕೇಂದ್ರ ಸ್ಥಾನಗಳಾದ ಲಗ್ನ, ಚತುರ್ಥ, ಸಪ್ತಮ, ದಶಮ ದಲ್ಲಿದ್ದರೆ ಅಥವಾ ಇವರ ದೃಷ್ಟಿ ಲಗ್ನಕ್ಕಿದ್ದರೆ ಚಂದ್ರನ ದ್ವಾದಶಾಂಶಕ್ಕೆ ಸರಿಯಾದ ಪ್ರಾಣಿಯು ಹುಟ್ಟಿದೆ ಎಂದು ತಿಳಿಯತಕ್ಕದ್ದು. ಅಂದರೆ ಚಂದ್ರನ ದ್ವಾದಶಾಂಶೆಯು ಮೇಷವಾಗಿದ್ದರೆ ಆಡು, ಕುರಿ ಇವುಗಳ ಜನ್ಮವೆಂದೂ, ವೃಷಭವಾದರೆ ದನ, ಎತ್ತು, ಎಮ್ಮೆ ಮುಂತಾದುವುಗಳೆಂದೂ, ಕರ್ಕಾಟಕವಾದರೆ ಏಡಿ, ಶಂಖ, ಆಮೆ, ಮುತ್ತು ಮೊದಲಾಗಿಯೂ, ಸಿಂಹವಾದರೆ ಹುಲಿ, ಕರಡಿ, ನಾಯಿ ಇತ್ಯಾದಿಗಳೂ, ವೃಶ್ಚಿಕವಾದರೆ ಚೇಳು, ಸರ್ಪ ಮುಂತಾದ ವಿಷಜಂತುಗಳೂ, ಧನುವಿನ ಅಪರಾರ್ಧವಾದರೆ ಕುದುರೆ, ಕತ್ತೆ ಮೊದಲಾದುವುಗಳೂ, ಮಕರ ಪೂರ್ವಾರ್ಧವಾದರೆ ಜಿಂಕೆ, ನವಿಲು, ಪಕ್ಷಿ, ಸಾರಂಗಾದಿಗಳೂ, ಅಪರಾರ್ಧವಾದರೆ ಮೊಸಳೆ, ಕಪ್ಪೆ ಇತ್ಯಾದಿ ಜಲಜಂತುಗಳೂ, ಮೀನವಾದರೆ ಮೀನು, ತಿಮಿಂಗಿಲ ಇತ್ಯಾದಿ ಜಲಚರಗಳ ಜನ್ಮವೆಂದೂ ಹೇಳತಕ್ಕದ್ದು.

ಪಾಪಾಬಲಿನಃ ಸ್ವಭಾಗಗಾಃ ಪಾರಕ್ಯೇ ವಿಬಲಾಶ್ಚ ಶೋಭನಾಃ ।
ಲಗ್ನಂ ವಿಯೋನಿ ಸಂಜ್ಞಕಂ ದೃಷ್ಟ್ವಾತ್ರಾಪಿ ವಿಯೋನಿ ಮಾದಿಶೇತ್ ॥೨॥

ಪಾಪಗ್ರಹಗಳು ಬಲವುಳ್ಳವರಾಗಿ ಸ್ವನವಾಂಶದಲ್ಲಿದ್ದು ಶುಭಗ್ರಹಗಳು ಬಲಹೀನರಾಗಿ ಅನ್ಯರ ನವಾಂಶದಲ್ಲಿದ್ದು, ವಿಯೋನಿ ಸಂಜ್ಞಗಳಿರುವ ರಾಶಿಗಳು ಲಗ್ನವಾಗಿದ್ದರೆ ಅದನ್ನು ನೋಡಿ ದೊಡನೆ ವಿಯೋನಿ ಜನ್ಮವೆಂದು ತಿಳಿದುಕೊಂಡು ಚಂದ್ರನ ದ್ವಾದಶಾಂಶ ಪ್ರಕಾರ ವಿಯೋನಿ ಜನ್ಮವನ್ನು ಹೇಳತಕ್ಕದ್ದು.

ಶ್ರೀ ಶಕ ೧೮೦೭ ರಕ್ತಾಕ್ಷಿ ಸಂ। ರದ ಪುಷ್ಯ ಶುಕ್ಲ ೧೧ ಯು ಗುರುವಾರ ತಾ ೩-೧-೧೮೮೫ ಬೆಳಿಗ್ಗೆ ಘಂ. ೭-೧ ಘಟಿ ೦-೨೦ಕ್ಕೆ ಧನು ಲಗ್ನ ಕೃತ್ತಿಕಾ ನಕ್ಷತ್ರ.

| | | | |
|---|---|---|---|
| ೦ | ೦ | ಚಂದ್ರ ೧೦<br>ರಾಹು ೧೦ | ೦ |
| ಕುಜ ೧೦<br>ಶುಕ್ರ ೮ | | | ೦ |
| ೦ | | | ೦ |
| ಲಗ್ನ ೭<br>ರವಿ ೬<br>ಗುರು ೯ | ಬುಧ ೧೨<br>ಶನಿ ೪<br>ಕೇತು ೪ | ೦ | ೦ |

ರವಿ ಲಗ್ನ, ಕುಜ ತೃತೀಯ, ಉಚ್ಚಾಂಶಕ ಶನಿ ಲಾಭ ಭಾವದಲ್ಲಿದ್ದು ವೃಶ್ಚಿಕವಾದ್ರಿಂದ ಪಾಪಗ್ರಹಗಳು ಬಲವಂತರಾಗಿದ್ದು ಬುಧನು ನೀಚಾಂಶಕ ವ್ಯಯ, ಗುರುವಿಗೆ ಅಸ್ತದೋಷ, ಶುಕ್ರನು ತೃತೀಯವಾಗಿ ಕುಜಾಂಶಕ ಕುಜಯುತಿಯಾದ್ರಿಂದ ಶುಭಗ್ರಹಗಳು ಬಲಹೀನರಾಗಿದ್ದು ಧನುವಿನ ಅಪರಾರ್ಧ ವಿಯೋನಿ ಸಂಜ್ಞಕವಾದ್ರಿಂದ ವಿಯೋನಿಜನ್ಮವೆಂತಲೂ, ಚಂದ್ರನು ವೃಷಭದಲ್ಲಿ ವೃಷಭ ದ್ವಾದಶಾಂಶೆಯಲ್ಲಿದ್ದದ್ದರಿಂದ ವೃಷಭ ಜನ್ಮವೆಂತಲೂ, ಲಗ್ನದಲ್ಲಿ ರವಿ ಬಲವಂತನಾಗಿರುವುದರಿಂದ ತಾಮ್ರವರ್ಣವೆಂತಲೂ, ಪುರುಷ ಗ್ರಹರು ಲಗ್ನದಲ್ಲಿದ್ದು ಓಜರಾಶಿ ಲಗ್ನವಾಗಿ ಪುರಷಾಂಶಕವಿದ್ದುದರಿಂದ ಎತ್ತಿನ ಜನ್ಮವೆಂತಲೂ ತಿಳಿಯತಕ್ಕದ್ದು ಪೂರ್ವದಿಕ್ ರಾಶಿಗಳು ಲಗ್ನವಾಗಿ ಗುರು ಬುಧರಿದ್ದರೆ, ದಕ್ಷಿಣದಿಕ್ ರಾಶಿಗಳು ದಶಮವಾಗಿ ರವಿ ಕುಜರಿದ್ದರೆ, ಪಶ್ಚಿಮ ದಿಕ್ ರಾಶಿಗಳು ಸಪ್ತಮವಾಗಿ ಶನಿ ಇದ್ದರೆ, ಉತ್ತರ ದಿಕ್ ರಾಶಿಗಳು ಚತುರ್ಥವಾಗಿ ಚಂದ್ರ ಶುಕ್ರರಿದ್ದರೆ ಗ್ರಹರಿಗೆ ದಿಕ್ ಬಲವುಳ್ಳವರಾಗುತ್ತಾರೆ. ಉಕ್ತ ಸ್ಥಾನದಿಂದ ಸಪ್ತಮದಲ್ಲಿ ಗ್ರಹರು ನಿರ್ಬಲರಾಗುತ್ತಾರೆ ಮಧ್ಯದಲ್ಲಿ ಅನುಪಾತದಿಂದ ಬಲವನ್ನು ತರಬೇಕಾಗುತ್ತದೆ.

ಕ್ರಿಯಃ ಶಿರೋವಕ್ತ್ರಗಳಂ ವೃಷೋಽನ್ಯೇ ।
ಪಾದಾಂಸಕಂ ಪೃಷ್ಠ ಮುರೋಽಥ ಪಾರ್ಶ್ವೇ ॥
ಕುಕ್ಷಿಸ್ತ್ವಪಾನಾಂ ಘ್ರ್ಯಥಮೇಢ್ರಮುಷ್ಕೌ ।
ಸ್ಫಿಕ್ಪುಚ್ಛ ಮಿತ್ಯಾಹ ಚತುಷ್ಪದಾಂಗೇ ॥ ೩ ॥

ಮೇಷ ಶಿರಸ್ಸು, ವೃಷಭ ಮುಖ ಮತ್ತು ಕಂಠವೂ, ಮಿಥುನ ಮುಂದಿನ ಕಾಲುಗಳು ಮತ್ತು ಭುಜ ಗಳೂ, ಕರ್ಕಾಟಕ ಬೆನ್ನೂ, ಸಿಂಹ ವಕ್ಷಸ್ಥಳವೂ, ಕನ್ಯಾ ಎರಡು ಪಕ್ಕ (ಬದಿ)ಗಳೂ, ತುಲಾ ಹೊಟ್ಟೆಯೂ, ವೃಶ್ಚಿಕ ಗುದದ್ವಾರ ಪ್ರದೇಶವೂ, ಧನು ಹಿಂದಿನ ಕಾಲುಗಳೂ ಮಕರ ಲಿಂಗ ಮತ್ತು ತರಡುಗಳೂ, ಕುಂಭ ಅಂಡೂ ಅಂದರೆ ಗುದದ್ವಾರದ ಕೆಳಭಾಗವೂ, ಮೀನ ಬಾಲವೆಂತಲೂ (ಪಕ್ಷಿಗಳಿಗಾದರೆ ಮುಂದಿನ ಕಾಲು ರೆಕ್ಕೆಗಳೆಂತಲೂ) ಚತುಷ್ಪದ ಪ್ರಾಣಿಗಳ ಅಂಗವಿಭಾಗವೆಂತ ತಿಳಿಯತಕ್ಕದ್ದು.

**ಲಗ್ನಾಂಶ ಕಾದ್ಗ್ರಹಯೋ ಗೇಕ್ಷಣಾದ್ವಾ ।**
**ವರ್ಣಾನ್ವದೇತ್‍ದ್ಬಲಯುಕ್ತಾ ದ್ವಿಯೋನೌ ॥**
**ದೃಷ್ಟ್ಯಾ ಸಮಾನಾನ್ ಪ್ರವದೇತ್ಸ್ವ ಸಂಖ್ಯಯಾ ।**
**ರೇಖಾಂ ವದೇತ್ಸ್ಮರ ಸಂಸ್ಥೈಶ್ಚ ಪೃಷ್ಠೇ ॥೪॥**

ಲಗ್ನದಲ್ಲಿ ಯಾವ ಗ್ರಹವಿರುವುದೋ ಯಾರ ದೃಷ್ಟಿ ಇರುವುದೋ ಅಂಥ ಬಲವುಳ್ಳ ಗ್ರಹಕ್ಕೆ ಹೇಳಿದ "ವರ್ಣಾಸ್ತಾಮ್ರಸಿತಾ" ಎಂಬಂತೆ ತಿರ್ಯಕ್‍ಜಂತುಗಳಿಗೆ ವರ್ಣವನ್ನು ಹೇಳಬೇಕು. ಲಗ್ನದಲ್ಲಿ ಯಾವ ಗ್ರಹವೂ ಇಲ್ಲದೆ ನೋಡುವ ಗ್ರಹವೂ ಇಲ್ಲದಿದ್ದರೆ ಲಗ್ನ ನವಾಂಶಕ್ಕೆ ಹೇಳಿದ ರಕ್ತ ಶ್ವೇತ ಶುಕ ಎಂಬಂತೆ ರಾಶಿಯ ವರ್ಣವನ್ನು ಹೇಳತಕ್ಕದ್ದು. ಗ್ರಹರ ದೃಷ್ಟಿಗಳಿಗೆ ಸರಿಯಾದ ಸಂಖ್ಯೆಗಳಷ್ಟು ವರ್ಣಗಳನ್ನು ಹೇಳುವುದಲ್ಲದೆ ಸಪ್ತಮ ಸ್ಥಾನದಲ್ಲಿರುವ ಗ್ರಹಗಳಿಂದ ಅವುಗಳ ಬೆನ್ನಿನಲ್ಲಿರುವ ರೇಖೆಗಳನ್ನು ಹೇಳತಕ್ಕದ್ದು

**ಖಗೇ ದೃಕಾಣೆ ಬಲಸಂಯುತೇನ ವಾ ।**
**ಗ್ರಹೇಣ ಯುಕ್ತೇ ಚರಭಾಂಶಕೋದಯೇ ॥**
**ಬುಧಾಂಶಕೇ ವಾ ವಿಹಗಾಃ ಸ್ಥಲಾಂಬುಜಾಃ ।**
**ಶನೈಶ್ಚರೇಂದ್ವೀಕ್ಷಣ ಯೋಗ ಸಂಭವಾಃ ॥೫॥**

ಲಗ್ನವು ಪಕ್ಷಿ ದ್ರೇಕ್ಕಾಣವಾಗಿದ್ದು (ಮಿಥುನ ೨ನೇ ದ್ರೇಕ್ಕಾಣ, ಸಿಂಹ ೧ನೇ ದ್ರೇಕ್ಕಾಣ, ತುಲಾ ೨ನೇ ದ್ರೇಕ್ಕಾಣ, ಕುಂಭ ೧ನೇ ದ್ರೇಕ್ಕಾಣ) ಬಲಯುಕ್ತರಾದ ಶನಿ ಅಥವಾ ಚಂದ್ರನಿಂದ ಕೂಡಿದರೂ ಯಾ ನೋಡಲ್ಪಟ್ಟರೂ ಪಕ್ಷಿಜನ್ಮವಾಗಿರುವುದು. ಚರರಾಶಿಯಾಗಲಿ ಚರ ನವಾಂಶವಾಗಲಿ ಪಡೆದಿರುವ ಲಗ್ನಕ್ಕೆ ಬಲಯುತರಾದ ಶನಿ ಯಾ ಚಂದ್ರನ ಯೋಗ, ದೃಷ್ಟಿ ಯಾಗಿದ್ದರೆ ಪಕ್ಷಿ ಜನ್ಮವಾಗುವುದು. ಮಿಥುನ ಕನ್ಯೆ, ನವಾಂಶಕ ಲಗ್ನಕ್ಕೆ ಶನಿ ವ ಚಂದ್ರನ ದೃಷ್ಟಿ ಅಥವಾ ಯೋಗವಾದರೂ ಪಕ್ಷಿ ಜನ್ಮವಾಗುವುದು ಈ ಮೂರು ಯೋಗಗಳಿಗೆ ಶನಿಯ ಯೋಗ ದೃಷ್ಟಿಯಾಗಿದ್ದರೆ ಸ್ಥಳ ಪಕ್ಷಿಜನ್ಮವೆಂದೂ, ಚಂದ್ರನ ಯೋಗ ದೃಷ್ಟಿಯಾಗಿದ್ದರೆ ಜಲ ಪಕ್ಷಿಜನ್ಮವೆಂದೂ ತಿಳಿಯತಕ್ಕದ್ದು.

**ಹೋರೇಂದು ಸೂರಿರವಿಭಿರ್ವಿಬಲೈ ಸ್ತರೂಣಾಂ ।**
**ತೋಯಸ್ಥಲೇ ತರುಭವೋಽಂಶಕೃತಃ ಪ್ರಭೇದಃ ॥**
**ಲಗ್ನಾದ್ಗ್ರಹಃ ಸ್ಥಲಜಲರ್ಕ್ಷ ಪತಿಸ್ತುಯಾವಾಂ ।**
**ಸ್ತಾವಂತ ಏವ ತರವಃ ಸ್ಥಲತೋಯಜಾತಾಃ ॥೬॥**

ಲಗ್ನವೂ, ಚಂದ್ರನೂ, ಗುರುವೂ ,ಸೂರ್ಯನೂ, ಬಲಹೀನರಾಗಿದ್ದರೆ ವೃಕ್ಷಜನ್ಮವೆಂದೂ ತಿಳಿಯತಕ್ಕದ್ದು. ವೃಕ್ಷಗಳನ್ನು ಜಲಪ್ರದೇಶದಲ್ಲಿ ಅಥವಾ ಭೂಪ್ರದೇಶದಲ್ಲಿ ಬೆಳೆದಿದೆಯೋ ಎಂಬ ಭೇದವನ್ನು ನವಾಂಶದಿಂದ ತಿಳಿಯತಕ್ಕದ್ದು ಅಂದರೆ ಜಲರಾಶಿ ನವಾಂಶವಾದರೆ ಜಲಪ್ರದೇಶ

ವೆಂದೂ ಬಾಕಿ ರಾಶಿಗಳಾದರೆ ಭೂಪ್ರದೇಶದಲ್ಲಿ ವೃಕ್ಷೋತ್ಪತ್ತಿ ಎಂದೂ ಹೇಳತಕ್ಕದ್ದು. ಲಗ್ನ ನವಾಂಶವು ಸ್ಥಲರಾಶಿಯಾಗಲಿ ಜಲರಾಶಿಯಾಗಲಿ ಅದರ ಅಧಿಪತಿ ಗ್ರಹವು ಲಗ್ನದಿಂದ ಎಷ್ಟನೇ ಸ್ಥಾನದಲ್ಲಿರುವನೋ ಅಷ್ಟು ವೃಕ್ಷಗಳ ಸಂಖ್ಯೆಯನ್ನು ಹೇಳತಕ್ಕದ್ದು

**ಅಂತಃಸಾರಾನ್ ಜನಯತಿ ರವಿರ್ದುರ್ಭಗಾನ್ ಸೂರ್ಯಸೂನುಃ ।**
**ಕ್ಷೀರೋಪೇತಾನ್ ತುಹಿನ ಕಿರಣಃ ಕಂಟಕಾಢ್ಯಾಂಶ್ಚ ಭೌಮಃ ॥**
**ವಾಗೀಶಜ್ಞಾ ಸಫಲ ವಿಫಲಾನ್ ಪುಷ್ಪ ವೃಕ್ಷಾಂಶ್ಚ ಶುಕ್ರಃ ।**
**ಸ್ನಿಗ್ಧಾನಿಂದುಃ ಕಟುಕವಿಟಪಾನ್ ಭೂಮಿ ಪುತ್ರಶ್ಚ ಭೂಯಃ ॥೭॥**

ಲಗ್ನಕ್ಕೆ ಸೂರ್ಯನು ನವಾಂಶಾಧಿಪತಿಯಾದರೆ ಒಳಗೆ ಸಾರವಿರುವ ಅಶ್ವತ್ಥ ಶಿಂಶುಪ ಇತ್ಯಾದಿ ವೃಕ್ಷಗಳೂ, ಶನಿಯಾದರೆ ನೋಡುವುದಕ್ಕೆ ಅಪ್ರಿಯವಾದ ದುಷ್ಟ ವೃಕ್ಷಗಳೂ, ಚಂದ್ರನಾಗಿದ್ದರೆ ಹಾಲುಳ್ಳ ಕಬ್ಬು, ಆಲ ಮುಂತಾದ ವೃಕ್ಷಗಳೂ, ಕುಜನಾದರೆ ಮುಳ್ಳಿನಿಂದ ಕೂಡಿದ ವೃಕ್ಷಗಳೂ ಗುರುವಾದರೆ ಫಲ ಕೊಡುವ ತೆಂಗು, ಮಾವು ಇತ್ಯಾದಿ ವೃಕ್ಷಗಳೂ, ಬುಧನಾದರೆ ಫಲ ಬಿಡದೆ ಇರುವ ವೃಕ್ಷಗಳೂ, ಶುಕ್ರನಾದರೆ ಪುಷ್ಪದಿಂದ ಶೋಭಿತವಾದ ಸಂಪಿಗೆ, ಪಾರಿಜಾತ ಇತ್ಯಾದಿ ವೃಕ್ಷಗಳೂ ಮತ್ತು ಚಂದ್ರನಿಗೆ ನುಣುಪಾಗಿರುವ ವೃಕ್ಷಗಳನ್ನು, ಕುಜನಿಗೆ ಕಹಿಯಾಗಿರುವ ವೃಕ್ಷ ಲತಾದಿಗಳನ್ನು ಹೇಳಲ್ಪಟ್ಟಿದೆ ಎಂದು ತಿಳಿಯುವುದು

**ಶುಭೋಽಶುಭರ್ಕ್ಷೇ ರುಚಿರಂ ಕುಭೂಮಿಜಂ ।**
**ಕರೋತಿ ವೃಕ್ಷಂ ವಿಪರೀತ ಮನ್ಯಥಾ ॥**
**ಪರಾಂಶಕೇ ಯಾವತಿ ವಿಚ್ಯುತಃ ಸ್ವಕಾದ್ಭವಂತಿ ।**
**ತುಲ್ಯಾಸ್ತರವಸ್ತಥಾವಿಧಾಃ ॥೮॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ವಿಯೋನಿಜನ್ಮಜ್ಞಾನ ನಿರೂಪಣಂ ನಾಮ ತೃತಿಯೋಧ್ಯಾಯಃ ॥**

ಲಗ್ನ ನವಾಂಶಾಧಿಪತಿ ಶುಭಗ್ರಹವಾಗಿ ಅಶುಭ ರಾಶಿಯಲ್ಲಿ ನಿಂತಿದ್ದರೆ ಆಗ ಸ್ಮಶಾನ ಇತ್ಯಾದಿ ದುಷ್ಟ ಭೂಮಿಯಲ್ಲಿ ಹುಟ್ಟಿದ ಮನೋಹರವಾದ ವೃಕ್ಷವೆಂದು, ಲಗ್ನ ನವಾಂಶಾಧಿಪತಿ ಪಾಪ ಗ್ರಹವಾಗಿ ಶುಭರಾಶಿಯಲ್ಲಿದ್ದರೆ ಒಳ್ಳೆಯ ಭೂಮಿಯಲ್ಲಿ ಕೆಟ್ಟ ವೃಕ್ಷವೆಂದೂ ಲಗ್ನ ನವಾಂಶಾಧಿಪತಿ ಶುಭನಾಗಿ ಶುಭರಾಶಿಯಲ್ಲಿದ್ದರೆ ಪುಣ್ಯಭೂಮಿಯಲ್ಲಿ ಹುಟ್ಟಿದ ಒಳ್ಳೆ ವೃಕ್ಷವೆಂದೂ ಲಗ್ನ ನವಾಂಶಾಧಿಪತಿ ಪಾಪಗ್ರಹವಾಗಿ ಪಾಪರಾಶಿಯಲ್ಲಿದ್ದರೆ ಕೆಟ್ಟ ಭೂಮಿಯಲ್ಲಿ ದುಷ್ಟ ವೃಕ್ಷ ಹುಟ್ಟಿದೆ ಎಂದೂ ತಿಳಿಯಬೇಕು. ಲಗ್ನ ನವಾಂಶಾಧಿಪತಿಯು ಸ್ವನವಾಂಶ ಬಿಟ್ಟು ಎಷ್ಟನೇ ಪರಕೀಯ ನವಾಂಶದಲ್ಲಿದ್ದಾನೋ ಅಷ್ಟು ಜಾತಿಯ ಮತ್ತು ವೃಕ್ಷಸಂಖ್ಯೆಗಳೆಂದು ತಿಳಿಯುವುದು. ಇದರಲ್ಲಿ ಜಲರಾಶಿ ನವಾಂಶಕ್ಕೆ ಜಲಪ್ರದೇಶದಲ್ಲಿ ಹುಟ್ಟಿರುವ ವೃಕ್ಷಗಳೆಂದೂ ಸ್ಥಲರ್ರಾಶಿ ನವಾಂಶಕ್ಕೆ ನಿರ್ಜಲ ಪ್ರದೇಶದಲ್ಲಿ ಹುಟ್ಟಿರುವ ವೃಕ್ಷಗಳೆಂದೂ ತಿಳಿಯತಕ್ಕದು

**॥ ವಿಯೋನಿಜನ್ಮಜ್ಞಾನವೆಂಬ ಮೂರನೇಯ ಅಧ್ಯಾಯವು ॥**

## ॥ ನಿಷೇಕಾಧ್ಯಾಯಃ ॥

ಕುಜೇಂದು ಹೇತು ಪ್ರತಿಮಾಸ ಮಾರ್ತವಂ ।
ಗತೇತು ಪೀಡರ್ಕ್ಷ ಮನುಷ್ಣದೀಧಿತೌ ॥
ಅತೋಽನ್ಯಥಾಸ್ಥೇ ಶುಭ ಪುಂಗ್ರಹೇಕ್ಷಿತೇ ।
ನರೇಣ ಸಂಯೋಗ ಮುಪೈತಿ ಕಾಮಿನೀ ॥೧॥

ಕುಜ, ಚಂದ್ರರು ಕಾರಣರಾಗಿ ಹೆಂಗಸರಿಗೆ ಪ್ರತಿ ತಿಂಗಳಲ್ಲಿಯೂ ರಜೋದರ್ಶನವಾಗುವುದು ಚಂದ್ರನು ಸ್ತ್ರೀ ಜನ್ಮರಾಶಿಯಿಂದ ಅನುಪಚಯ ರಾಶಿಗಳಾದ ಒಂದು, ಎರಡು, ನಾಲ್ಕು, ಐದು, ಏಳು, ಎಂಟು, ಒಂಬತ್ತು, ಹನ್ನೆರಡು ಈ ರಾಶಿಗಳಲ್ಲಿರುವಾಗ ಕುಜನಿಂದ ನೋಡಲ್ಪಟ್ಟರೆ ಗರ್ಭೋತ್ಪತ್ತಿಗೆ ಕಾರಣವಾದ ರಜೋದರ್ಶನವಾಗುವುದು ಹಾಗೆಯೇ ಉಪಚಯ ರಾಶಿಗಳಾದ ಮೂರು, ಆರು, ಹತ್ತು, ಹನ್ನೊಂದರಲ್ಲಿ ಚಂದ್ರನು ಬರುವಾಗ ಗುರುವಿನಿಂದ ನೋಡಲ್ಪಟ್ಟರೆ ಸ್ತ್ರೀಯಳು ಪತಿಯೊಡನೆ ಸಂಯೋಗ ಹೊಂದುವವಳಾಗುತ್ತಾಳೆ ರವಿಯಿಂದ ನೋಡಲ್ಪಟ್ಟರೆ ರಾಜಪುರುಷನಿಂದಲೂ, ಕುಜನಾದರೆ ವಿಟಪುರುಷನಿಂದಲೂ ಬುಧನಾದರೆ ಚಪಲಮತಿಯಿಂದಲೂ ಶುಕ್ರನಾದರೆ ಕಾಂತಿಯುಕ್ತ ತನ್ನ ಪತಿಯಿಂದಲೂ,ಶನಿಯಾದರೆ ಭೃತ್ರನಿಂದಲೂ ಸಂಯೋಗ ವಾಗುವುದೆಂದು ತಿಳಿಯಬೇಕು. ಕುಜಾದಿ ಪಾಪಗ್ರಹರಿಂದ ನೋಡಲ್ಪಟ್ಟರೆ ವೇಶ್ಯೆಯಂತೆ ಮನೆ ಬಿಟ್ಟು ಹೋಗುವಳೆಂದು ತಿಳಿಯಬೇಕು ಆದರೆ ಪತಿವ್ರತಾ ಹೆಂಗಸರಿಗೆ ಆಯುಷ್ಯದಲ್ಲಿ ಗುರು ಶುಕ್ರರಲ್ಲದೆ ಅನ್ಯ ಗ್ರಹರಿಂದ ನೋಡಲ್ಪಡುವುದಿಲ್ಲ. ಮೇಲೆ ಹೇಳಲ್ಪಟ್ಟ ವಿಷಯಗಳನ್ನು ಹಾಗೆಯೇ ಏನೇನೋ ಹೇಳಕೂಡದು ಷಡ್ಬಲ ಗಣಿತದಿಂದ ಬಲಾಬಲಗಳನ್ನು ನೋಡಿ ಹೇಳತಕ್ಕದ್ದು

ಯಥಾಸ್ತ ರಾಶಿರ್ಮಿಥುನಂ ಸಮೇತಿ ।
ತಥೈವವಾಚ್ಯೋಮಿಥುನ ಪ್ರಯೋಗಃ ॥
ಅಸದ್ಗ್ರಹಾಲೋಕಿತ ಸಂಯುತೇಸ್ತೇ ।
ಸರೋಷ ಇಷ್ಟೈಃ ಸವಿಲಾಸಹಾಸಃ ॥೨॥

ಜನ್ಮಲಗ್ನ ಅಥವಾ ಪ್ರಶ್ನಲಗ್ನದಿಂದ ಸಪ್ತಮ ರಾಶಿಗೆ ಸದೃಶವಾದ ಪ್ರಾಣಿಗಳು ಯಾವ ಪ್ರಕಾರ ಕ್ರೀಡಿಸುತ್ತವೆಯೋ ಆ ಪ್ರಕಾರವಾಗಿ ಸ್ತ್ರೀ ಪುರುಷ ಸಂಯೋಗವಾಗುವುದೆಂದು ತಿಳಿಯತಕ್ಕದ್ದು. ಅಂದರೆ ಮೇಷವಾದರೆ ಆಡುಗಳಂತೆ, ವೃಷಭವಾದರೆ ಗೋವುಗಳಂತೆ, ಕೀಟರಾಶಿಗಳಾದರೆ ಕ್ರಿಮಿಕೀಟಗಳಂತೆ ಎಂತ ತಿಳಿಯತಕ್ಕದ್ದು. ಸಪ್ತಮ ಸ್ಥಾನದಲ್ಲಿ ಪಾಪಗ್ರಹರಿದ್ದರೆ ಅಥವಾ ದೃಷ್ಟಿ ಇದ್ದರೆ ಸಿಟ್ಟಿನಿಂದಲೂ, ಶುಭಗ್ರಹರಿದ್ದರೆ ಅಥವಾ ದೃಷ್ಟಿ ಇದ್ದರೆ ವಿಲಾಸ ಪರಿಹಾಸದಿಂದಲೂ ಯಾವ ಗ್ರಹವೂ ನೋಡದೆ ಯಾ ಕೂಡದೆ ಇದ್ದರೆ ಸರಸವಿರಸಾದಿ ಯಾವ ಚೇಷ್ಟೆಯೂ ಇಲ್ಲದೆ ಸಂಯೋಗವಾಗುವುದೆಂತ ತಿಳಿಯತಕ್ಕದ್ದು.

ರವೀಂದು ಶುಕ್ರಾವನಿಜೈಃ ಸ್ವಭಾಗಗೈ ।
ಗುರ್ರೌ ತ್ರಿಕೋಣೋದಯ ಸಂಸ್ಥಿತೇಪಿವಾ ॥
ಭವತ್ಯ ಪತ್ಯಂ ಹಿ ವಿಬೀಜಿನಾಮಿಮೇ ।
ಕರಾ ಹಿಮಾಂಶೋರ್ವಿದೃಶಾಮಿವಾಽಫಲಾಃ ॥೩॥

ಗರ್ಭದಾನಕಾಲ ಲಗ್ನಕ್ಕಾಗಲಿ ಪ್ರಶ್ನಲಗ್ನಕ್ಕಾಗಲಿ ರವಿ, ಚಂದ್ರ, ಶುಕ್ರ, ಕುಜರು ಯಾವ ರಾಶಿಯಲ್ಲಿದ್ದರೂ ಸ್ವನವಾಂಶವನ್ನು ಹೊಂದಿದ್ದರೆ ಅಥವಾ ಗುರುವು ಲಗ್ನ, ಪಂಚಮ, ನವಮಗಳಲ್ಲಿದ್ದರೂ ಗರ್ಭಸಂಭವವಾಗುವುದು ಆದರೆ ಬೀಜ ಕ್ಷೇತ್ರ ಗಣಿತವನ್ನು ಮಾಡಿ ನೋಡುವಾಗ ಬೀಜಬಲ ಮತ್ತು ಕ್ಷೇತ್ರಬಲವಿಲ್ಲದಿದ್ದರೆ ವ್ಯರ್ಥ ಹ್ಯಾಗಂದರೆ ಚಂದ್ರನ ಪ್ರಕಾಶವು ಕುರುಡನಾದವನಿಗೆ ಹೇಗೆ ಪ್ರಯೋಜನವಿಲ್ಲವೋ ಹಾಗೆಯೇ ಬೀಜಕ್ಷೇತ್ರ ಬಲವಿಲ್ಲದವರಿಗೆ ಮೇಲಿನ ಯೋಗಗಳು ಎಷ್ಟಿದ್ದರೂ ನಿಷ್ಫಲವೆಂದು ತಿಳಿಯತಕ್ಕದ್ದು.

॥ ಗರ್ಭಸಂಭವ ಯೋಗ ॥

| | | | |
|---|---|---|---|
| ಶನಿ ೧೦ | ಲಗ್ನ ೦ ರವಿ ೫ ಬುಧ ೬ ಶುಕ್ರ ೪ | ೦ | ೦ |
| ೦ | ಶ್ರೀ ಶಕ ೧೮೩೧ ವೈಶಾಖ ಶುಕ್ಲ ೮ ಯು ಮಂಗಳವಾರ | | ಚಂದ್ರ ೪ |
| ಕುಜ ೩ | | | ಗುರು ೪ |
| ೦ | ೦ | ೦ | ೦ |

ಪೂರ್ವೋಕ್ತ ಗ್ರಹರು ಅವರವರ ನವಾಂಶದಲ್ಲಿಲ್ಲವಾದರೂ ಪುರುಷ ಜನ್ಮರಾಶಿಯಿಂದ ಉಪಚಯ ರಾಶಿಗಳಾದ ಮೂರು ಆರು ಹತ್ತು ಹನ್ನೊಂದರಲ್ಲಿ ರವಿ, ಶುಕ್ರ ಅವರವರ ನವಾಂಶದಲ್ಲಿದ್ದರೂ ಹಾಗೆಯೆ ಸ್ತ್ರೀ ಜನ್ಮರಾಶಿಯಿಂದ ತೃತೀಯ, ಷಷ್ಠ, ದಶಮ, ಏಕಾದಶದಲ್ಲಿ ಚಂದ್ರ, ಕುಜರು ಅವರವರ ನವಾಂಶದಲ್ಲಿದ್ದರೂ ಅವಶ್ಯ ಗರ್ಭಸಂಭವವಾಗುವುದು.

ವಿ ಸೂ ಆಧಾನಲಗ್ನ ಮತ್ತು ಗ್ರಹರುಗಳಿಂದ ಮುಹೂರ್ತವನ್ನು ನಿರ್ಣೈಸಿ ಗರ್ಭದಾನ ಮಾಡಿ ರಾಜಯೋಗಾದಿ ಉತ್ತಮ ಯೋಗಗಳುಳ್ಳ ಸಂತಾನವನ್ನು ಪಡೆಯುವುದಕ್ಕೋಸ್ಕರವಾಗಿ ಈ ಯೋಗಗಳು ಹೇಳಲ್ಪಟ್ಟಿದೆ ಬೀಜ, ಕ್ಷೇತ್ರಗಳಿಗೆ ಬಲವಿಲ್ಲದಿದ್ದರೆ ಈ ಯೋಗಗಳು ನಿರರ್ಥಕವಾಗುವುದು ಆದುದರಿಂದ ಬೀಜ ಬಲ, ಕ್ಷೇತ್ರಬಲವನ್ನು ಗುಣಿಸಿ ನೋಡಿಕೊಂಡು ನಪುಂಸಕಾದಿ ವಿಷಯಗಳನ್ನು ವಿಚಾರಪೂರ್ವಕ ಯುಕ್ತಿಯಿಂದ ನಿರ್ಣೈಸಿ ಈ ಯೋಗಗಳನ್ನು ಹೇಳತಕ್ಕದ್ದು

ದಿವಾಕರೇಂದ್ವೋಃ ಸ್ಮರಗೌ ಕುಜಾರ್ಕಜೌ ।
ಗದಪ್ರದೌ ಪುಂಗಳಯೋಷಿತೋಸ್ತದಾ ॥
ವ್ಯಯಸ್ವಗೌ ಮೃತ್ಯುಕರೌ ಯುತಸ್ತಥಾ ।
ತದೇಕ ದೃಷ್ಟ್ಯಾ ಮರಣಾಯ ಕಲ್ಪಿತೌ ॥೪॥

ಆಧಾನ ಕಾಲಕ್ಕೆ ಸೂರ್ಯನಿಂದ ಸಪ್ತಮ ರಾಶಿಯಲ್ಲಿ ಕುಜನಿದ್ದರೆ ಪುರುಷನಿಗೆ ರೋಗವು ಬರುವುದು. ಹಾಗೆಯೇ ಚಂದ್ರನಿಂದ ಸಪ್ತಮದಲ್ಲಿ ಶನಿ ಇದ್ದರೆ ಸ್ತ್ರೀಯಳಿಗೆ ರೋಗವು ಬರುವುದು. ಅಂತೆಯೇ ಸೂರ್ಯನಿಗೆ ದ್ವಾದಶದಲ್ಲಿ ಕುಜನು ದ್ವಿತೀಯದಲ್ಲಿ ಶನಿಯು ಇದ್ದರೆ ಪುರುಷನಿಗೂ ಹೀಗೆಯೇ ಚಂದ್ರನಿಗಿದ್ದರೆ ಸ್ತ್ರೀಯಳಿಗೂ ಮರಣ ಸಂಭವಿಸುವುದು. ಸೂರ್ಯನು ಕುಜ ಶನಿಗಳಿಬ್ಬರಲ್ಲಿ ಯಾರಾದರೊಬ್ಬನಿಂದ ಕೂಡಿ ಮತ್ತೊಬ್ಬನಿಂದ ನೋಡಲ್ಪಟ್ಟರೆ ಪುರುಷನು ಮರಣವನ್ನು ಹೊಂದುತ್ತಾನೆ. ಹಾಗೆಯೇ ಚಂದ್ರನು, ಕುಜ ಶನಿಗಳಲ್ಲಿ ಒಬ್ಬನಿಂದ ನೋಡಲ್ಪಟ್ಟು ಒಬ್ಬನಿಂದ ಕೂಡಿದರೆ ಸ್ತ್ರೀಯು ಮರಣವನ್ನು ಹೊಂದುತ್ತಾಳೆ. ಇದನ್ನು ಜನ್ಮಲಗ್ನದಿಂದ, ಪ್ರಶ್ನ ಲಗ್ನದಿಂದಲೂ ಹೇಳಬಹುದು

॥ ಪುರುಷ ರೋಗಯೋಗ ॥

| | | | |
|---|---|---|---|
| ೦ | ರವಿ<br>ಬುಧ<br>ಶುಕ್ರ | ೦ | ಚಂದ್ರ |
| ೦ | ಶ್ರೀ ಶಕ ೧೯೦೭ ವೈಶಾಖ<br>ಶುಕ್ಲ ೩ ಶುಕ್ರವಾರ | | ೦ |
| ೦ | | | ೦ |
| ಗುರು | ೦ | ಕುಜ<br>ಶನಿ | ೦ |

**॥ ಸ್ತ್ರೀ ರೋಗಯೋಗ ॥**

| | | | |
|---|---|---|---|
| ೦ | ಚಂದ್ರ ಬುಧ | ರವಿ ಶುಕ್ರ | ೦ |
| ೦ | ಶ್ರೀ ಶಕ ೧೮೦೬ ವೈಶಾಖ ಕೃಷ್ಣ ೧೩ ಯು ಚಂದ್ರವಾರ | | ೦ |
| ೦ | | | ೦ |
| ಗುರು | ೦ | ಕುಜ ಶನಿ | ೦ |

ಇಲ್ಲಿ ರವಿ ಚಂದ್ರರ ಸಪ್ತಮದಲ್ಲಿ ಕುಜ ಶನಿಗಳಿರುವುದರಿಂದ ತಂದೆ ತಾಯಿಗಳಿಗೆ ರೋಗಪ್ರದ ರಾಗುತ್ತಾರೆ. ಕುಜ ಶನಿಗಳು ಅವರವರ ಗರ್ಭ ಮಾಸಾಧಿಪತ್ಯ ಕಾಲದಲ್ಲಿ ಪುರುಷ ಮತ್ತು ಸ್ತ್ರೀಯಳಿಗೆ ರೋಗ ಉಂಟಾಗುತ್ತದೆ. ಅದು ಈ ಅಧ್ಯಾಯದ ೧೬ ಶ್ಲೋಕದಲ್ಲಿ ಹೇಳಲ್ಪಟ್ಟಿದೆ

**॥ ಪುರುಷ ಮರಣಯೋಗ ॥**

| | | | |
|---|---|---|---|
| ೦ | ೦ | ೦ | ೦ |
| ಚಂದ್ರ | ಶ್ರೀ ಶಕ ೧೮೦೫ ಭಾದ್ರಪದ ಶುಕ್ಲ ೧೪ ಯು ಬುಧವಾರ | | ೦ |
| ೦ | | | ಕುಜ ಬುಧ ಶುಕ್ರ |
| ೦ | ಗುರು | ಶನಿ | ರವಿ |

ಇಲ್ಲಿ ಸೂರ್ಯನಿಂದ ವ್ಯಯದಲ್ಲಿ ಕುಜನೂ ದ್ವಿತೀಯದಲ್ಲಿ ಶನಿಯೂ ಇರುವುದರಿಂದ ಇವರಲ್ಲಿ ಶನಿ ಉಚ್ಚವಾಗಿ ಬಲಶಾಲಿಯಾದುದರಿಂದ ೬ ತಿಂಗಳಿನಲ್ಲಿ ಪುರುಷನು ಮರಣ ಹೊಂದುವನು

॥ ಸ್ತ್ರೀ ಮರಣಯೋಗ ॥

| | | | |
|---|---|---|---|
| ೦ | ೦ | ೦ | ೦ |
| ೦ | ಶ್ರೀ ಶಕ ೧೯೦೭ ಆಶ್ವೀಜ ಶುದ್ಧ ೫ ಶನಿವಾರ | | ೦ |
| ೦ | | | ೦ |
| ಕುಜ ಗುರು | ಚಂದ್ರ | ಶುಕ್ರ ಶನಿ | ರವಿ ಬುಧ |

ಚಂದ್ರನಿಂದ ದ್ವಾದಶದಲ್ಲಿ ಶನಿಯೂ ನೀಚಾಂಶಕ ದ್ವಿತೀಯದಲ್ಲಿ ಕುಜನೂ ಇರುವುದರಿಂದ ಇವರಲ್ಲಿ ಕುಜನು ಬಲಿಷ್ಠನಾದುದರಿಂದ ಗರ್ಭಿಣಿಯು ೨ನೆ ತಿಂಗಳಿನಲ್ಲಿ ಮರಣ ಹೊಂದುವಳು.

॥ ಸ್ತ್ರೀಪುರುಷ ಮರಣಯೋಗ ॥

| | | | |
|---|---|---|---|
| ಶುಕ್ರ | ರವಿ ಚಂದ್ರ ಬುಧ ಶನಿ | ೦ | ೦ |
| ೦ | ಶ್ರೀ ಶಕ ೧೮೯೩ ಚೈತ್ರ ಕೃಷ್ಣ ೩೦ ಯು ರವಿವಾರ | | ೦ |
| ಕುಜ | | | ೦ |
| ೦ | ಗುರು | ೦ | ೦ |

ರವಿಗೆ ಶನಿ ಸಂಯೋಗವಿದ್ದು ಕುಜನಿಂದ ನೋಡಲ್ಪಡುವುದರಿಂದ ೨ನೆ ತಿಂಗಳಲ್ಲಿ ಪುರುಷನಿಗೂ ಚಂದ್ರನಿಗೆ ಶನಿ ಕೂಡುವಿಕೆ ಇದ್ದು ಕುಜದೃಷ್ಟಿ ಇರುವುದರಿಂದ ೭ನೆ ತಿಂಗಳಲ್ಲಿ ಸ್ತ್ರೀಯಳಿಗೂ ಮರಣ ಉಂಟಾಗುವುದು.

**ದಿವಾsರ್ಕಶುಕ್ರೌ ಪಿತೃಮಾತೃ ಸಂಜ್ಞಿತೌ ।**
**ಶನೈಶ್ಚರೇಂದೂ ನಿಶಿ ತದ್ವಿಪರ್ಯಯಾತ್ ॥**
**ಪಿತೃವ್ಯ ಮಾತೃಷ್ವಸೃ ಸಂಜ್ಞಿತೌ ಚ ತಾವಥೌಜ ।**
**ಯುಗ್ಮರ್ಕ್ಷ ಗತೌ ತಯೋಃ ಶುಭೌ ॥೫॥**

ಹಗಲಿನಲ್ಲಿ ಸೂರ್ಯ ಶುಕ್ರರು, ಪಿತೃ ಮತ್ತು ಮಾತೃಗಳೆಂಬ ಸಂಜ್ಞೆಗಳನ್ನೂ ರಾತ್ರಿಯಲ್ಲಿ ಶನಿ ಮತ್ತು ಚಂದ್ರರು ಪಿತೃ ಮಾತೃ ಸಂಜ್ಞೆಯನ್ನು ಕ್ರಮವಾಗಿ ಹೊಂದುತ್ತಾರೆ ಹಾಗೆಯೇ ಹಗಲಿನಲ್ಲಿ ಶನಿಯು ಪಿತೃವ್ಯ (ದೊಡ್ಡಪ್ಪ ಚಿಕ್ಕಪ್ಪರು) ಸಂಜ್ಞೆಯನ್ನು ಚಂದ್ರನು ಮಾತೃಷ್ವಸೃ (ತಾಯಿಯ ಅಕ್ಕ ವ ತಂಗಿ) ಸಂಜ್ಞೆಯನ್ನು ಹಾಗೆಯೇ ರಾತ್ರಿಯಲ್ಲಿ ಸೂರ್ಯ ಮತ್ತು ಶುಕ್ರರು ಪಿತೃವ್ಯ ಮಾತೃಷ್ವಸೃ ಸಂಜ್ಞೆಯನ್ನು ಹೊಂದುತ್ತಾರೆ ಇದನ್ನು ಆಧಾನ ಕಾಲ ಲಗ್ನ ಅಥವಾ ಜನ್ಮಲಗ್ನದಿಂದ ಈ ಗ್ರಹರು ಪುರುಷರಾಶಿಯಲ್ಲಿದ್ದರೆ ಪಿತೃ, ಪಿತೃವ್ಯ ಭಾವಗಳಿಗೆ ಶುಭಪ್ರದರಾಗಿಯೂ ಸ್ತ್ರೀರಾಶಿಯಲ್ಲಿದ್ದರೆ ಮಾತೃ ಮಾತೃಷ್ವಸೃಗಳಿಗೆ ಶುಭಪ್ರದರಾಗಿರುತ್ತಾರೆ

**ಅಭಿಲಷದ್ಭಿ'ರುದಯರ್ಕ್ಷಮಸದ್ಭಿ'ರ್ಮರಣ ।**
**ಮೇತಿ ಶುಭದೃಷ್ಟಿ ಮಯಾತೇ ॥**
**ಉದಯ ರಾಶಿಸಹಿತೇ ಚ ಯಮೇ ಸ್ತ್ರೀ ।**
**ವಿಗಲಿತೋಡುಪತಿ ಭೂಸುತದೃಷ್ಟೇ ॥೬॥**

ಆಧಾನಲಗ್ನಕ್ಕೆ ಶುಭ ಗ್ರಹರ ದೃಷ್ಟಿ ಇಲ್ಲದೆ (ಲಗ್ನಕ್ಕೆ ಬರುವ ಪಾಪಗಳು ವ್ಯಯದಲ್ಲಿ ಪಾಪ ಗ್ರಹಗಳಿದ್ದರೆ ಗರ್ಭಿಣಿಯಾದವಳು ಮರಣ ಹೊಂದುವಳು). ಹಾಗೆಯೇ ಲಗ್ನದಲ್ಲಿ ಶನಿಯು ಕ್ಷೀಣ ಚಂದ್ರ ಅಥವಾ ಕುಜನಿಂದ ನೋಡಲ್ಪಟ್ಟರೆ ಗರ್ಭಿಣಿಯಾದವಳು ಮರಣವನ್ನು ಹೊಂದುವಳು.

**ಪಾಪದ್ವಯ ಮಧ್ಯ ಸಂಸ್ಥಿತೌ ।**
**ಲಗ್ನೇಂದೂ ನ ಚ ಸೌಮ್ಯ ವೀಕ್ಷಿತೌ ॥**
**ಯುಗಪತ್ ಪೃಥಗೇವ ವಾ ವದೇನ್ನಾರೀ ।**
**ಗರ್ಭಯುತಾ ವಿಪದ್ಯತೇ ॥೭॥**

ಆಧಾನಕಾಲದ ಲಗ್ನವು ಚಂದ್ರನು ಒಟ್ಟಿಗಿದ್ದರೂ ಬೇರೆ ಬೇರೆಯಾಗಿದ್ದರೂ ಇವೆರಡೂ ಪಾಪಗ್ರಹರ ಮಧ್ಯದಲ್ಲಿ (ದ್ವಿತೀಯ ವ್ಯಯದಲ್ಲಿ )ದ್ದು ಶುಭ ದೃಷ್ಟಿ ಇಲ್ಲದಿದ್ದರೆ ಗರ್ಭಿಣಿಯು ಮಗು ಸಹಿತವಾಗಿ ಮೃತಿಯನ್ನು ಹೊಂದುತ್ತಾಳೆಂದು ಹೇಳತಕ್ಕದ್ದು. ದೃಷ್ಟಿ ಗಣಿತದಿಂದ ಶುಭಗ್ರಹರ ದೃಷ್ಟಿ ಇಲ್ಲದಿದ್ದರೆ ಈ ಯೋಗವು ದೃಷ್ಟಾಂತವಾದುದೆಂದು ತಿಳಿಯತಕ್ಕದ್ದು.

**ಕ್ರೂರೇ ಶಶಿನಶ್ಚತುರ್ಥಗೇ ।**
**ಲಗ್ನಾದ್ವಾ ನಿಧನಾಶ್ರಿತೇ ಕುಜೇ ॥**
**ಬಂಧ್ವಂತ್ಯಗಯೋಃ ಕುಜಾರ್ಕಯೋಃ ।**
**ಕ್ಷೀಣೇಂದೌ ನಿಧನಾಯ ಪೂರ್ವವತ್ ।೮॥**

ಆಧಾನಲಗ್ನಕ್ಕೆ ಚಂದ್ರನಿಂದ ಚತುರ್ಥ ಸ್ಥಾನದಲ್ಲಿ ಪಾಪಗ್ರಹವಿದ್ದು ಅಷ್ಟಮದಲ್ಲಿ ಕುಜನಿದ್ದರೂ, ಅಥವಾ ಆಧಾನ ಲಗ್ನಕ್ಕೆ ಚತುರ್ಥದಲ್ಲಿ ಪಾಪಗ್ರಹವಿದ್ದು ಅಷ್ಟಮದಲ್ಲಿ ಕುಜನಿದ್ದರೂ, ಹಾಗೆಯೇ ಚತುರ್ಥದಲ್ಲಿ ಕುಜನೂ, ದ್ವಾದಶದಲ್ಲಿ ಸೂರ್ಯನೂ, ಅಷ್ಟಮ ಕ್ಷೀಣ ಚಂದ್ರನೂ ಇದ್ದರೆ ಹಿಂದೆ ಹೇಳಿದಂತೆ ಸ್ತ್ರೀಯು ಗರ್ಭ ಸಹಿತವಾಗಿ ಮರಣವನ್ನು ಹೊಂದುವಳು

**ಉದಯಾಸ್ತಗಯೋಃ ಕುಜಾರ್ಕಯೋರ್ನಿಧನಂ ಶಸ್ತ್ರಕೃತಂ ವದೇತ್ತಥಾ ।**
**ಮಾಸಾಧಿಪತೌ ನಿಪೀಡಿತೇ ತತ್ಕಾಲಂ ಸ್ರವಣಂ ಸಮಾದಿಶೇತ್ ॥೯॥**

ಆಧಾನಕಾಲ ಲಗ್ನದಲ್ಲಿ ಕುಜನು, ಸಪ್ತಮದಲ್ಲಿ ಸೂರ್ಯನು ಇದ್ದರೆ ಗರ್ಭಿಣಿಯು (ಶಸ್ತ್ರಚಿಕಿತ್ಸೆ) ಶಸ್ತ್ರಘಾತದಿಂದ ಮರಣವಾಗುವುದೆಂದೂ ಮುಂದೆ ಹೇಳುವ ಮಾಸಾಧಿಪತಿಯು ಗ್ರಹಯುದ್ಧ ದಲ್ಲಿ ಪೀಡಿತನಾಗಿದ್ದರೆ (ಸೂರ್ಯ ಚಂದ್ರರಿಗೆ ರಾಹು ಕೇತು ಗ್ರಸ್ತರಾಗಿದ್ದರೂ) ಆತನ ತಿಂಗಳಿ ನಲ್ಲಿಯೇ ಗರ್ಭವು ಸ್ರಾವವಾಗುವುದೆಂದು ಹೇಳಬೇಕು

**ಶಶಾಂಕ ಲಗ್ನೋಪಗತೈಃ ಶುಭಗ್ರಹೈ ।**
**ಸ್ತ್ರಿಕೋಣ ಜಾಯಾರ್ಥ ಸುಖಾಸ್ಪದ ಸ್ಥಿತೈಃ ॥**
**ತೃತೀಯ ಲಾಭರ್ಕ್ಷಗತೈರ ಶೋಭನೈಃ ।**
**ಸುಖೀತು ಗರ್ಭೋ ರವಿಣಾ ನಿರೀಕ್ಷಿತಃ ॥೧೦॥**

ಆಧಾನಲಗ್ನಕ್ಕೆ ಅಥವಾ ಚಂದ್ರನಿಗೆ ಒಂದು, ಎರಡು, ನಾಲ್ಕು, ಐದು, ಏಳು, ಒಂಬತ್ತು, ಹತ್ತು ಈ ಸ್ಥಾನಗಳಲ್ಲಿ ಶುಭಗ್ರಹಗಳಿದ್ದು ತೃತೀಯ, ಲಾಭ ಸ್ಥಾನದಲ್ಲಿ ಪಾಪಗ್ರಹಗಳಿದ್ದರೆ ಗರ್ಭವು ಪುಷ್ಟಿಯಾಗಿ ಸುಖಿಯಾಗಿರುವುದು. ಲಗ್ನಕ್ಕಾಗಲಿ ಚಂದ್ರನಿಗಾಗಲಿ ರವಿಯಿಂದ ನೋಡಲ್ಪಟ್ಟರೆ ಗರ್ಭವು ಪುಷ್ಟಿಯಾಗಿರುವುದೆಂದು ಹೇಳತಕ್ಕದ್ದು. ಇಲ್ಲಿ ರವಿಗೆ ಬದಲಾಗಿ "ಗುರುಣಾನಿರೀಕ್ಷಿತೇ" ಎಂತ ಪಾಠಾಂತರವಿದೆ. (ಅದು ಸರಿಯಾಗಿ ಅನುಭವಕ್ಕೆ ಬರಲಿಲ್ಲ.)

**ಓಜರ್ಕ್ಷೇ ಪುರುಷಾಂಶಕೇಷು ಬಲಿಭಿರ್ಲಗ್ನಾರ್ಕ ಗುರ್ವಿಂದುಭಿಃ ।**
**ಪುಂಜನ್ಮಪ್ರವದೇತ್ ಸಮಾಂಶಕಗತೈರ್ಯುಗ್ಮೇಷು ತೈರ್ಯೋಷಿತಃ ॥**
**ಗುರ್ವರ್ಕೌ ವಿಷಮೇ ನರಂ ಶಶಿ ಸಿತೌ ವಕ್ರಶ್ಚ ಯುಗ್ಮೇಸ್ತ್ರಿಯಂ ।**
**ದ್ವ್ಯಂಗಸ್ಥಾ ಬುಧವೀಕ್ಷಣಾಚ್ಚ ಯಮಳೌ ಕುರ್ವಂತಿ ಪಕ್ಷೇ ಸ್ವಕೇ ॥೧೧॥**

ಲಗ್ನ, ರವಿ, ಗುರು, ಚಂದ್ರ ಇವರುಗಳು ಓಜರಾಶಿಗಳಲ್ಲಿ ಪುರುಷ (ಓಜ) ನವಾಂಶಗಳಲ್ಲಿ ಬಲಶಾಲಿಗಳಾಗಿದ್ದರೆ ಗಂಡು ಮಗುವಿನ ಜನನವೆಂದೂ, ಇದೇ ಗ್ರಹರು ಯುಗ್ಮರಾಶಿ ಯುಗ್ಮ ನವಾಂಶಗಳಲ್ಲಿದ್ದರೆ ಸ್ತ್ರೀ ಜನನವೆಂದೂ ಹೇಳತಕ್ಕದ್ದು (ಇಲ್ಲಿ ವಿಷಮ ಸಮರಾಶಿಗಳಲ್ಲಿ ಈ ಗ್ರಹಗಳು ಮಿಶ್ರವಾಗಿದ್ದರೆ ಅಧಿಕ ಬಲಶಾಲಿಗಳಾಗಿ ಯಾವ ರಾಶಿಯಲ್ಲಿ ಹೆಚ್ಚಿಗೆ ಗ್ರಹರಿರುವರೋ ಅವರಿಂದ ವಿಚಾರ ಮಾಡಿ ಸ್ತ್ರೀ ಪುರುಷ ನಿರ್ದೇಶವನ್ನು ಹೇಳಬೇಕು) ಪುನಃ ಗುರು ಮತ್ತು ರವಿಯು ಪುರುಷರಾಶಿಯಲ್ಲಿ ಪುರುಷ ನವಾಂಶಕದಲ್ಲಿದ್ದರೆ ಪುರುಷ ಜನನವೆಂದೂ, ಚಂದ್ರ, ಶುಕ್ರ, ಕುಜರು ಯುಗ್ಮರಾಶಿಯಲ್ಲಿ ಯುಗ್ಮ ನವಾಂಶಕದಲ್ಲಿದ್ದರೆ ಸ್ತ್ರೀ ಜನನವೆಂದೂ ಹೇಳತಕ್ಕದ್ದು ಈ ಮೇಲೆ ಹೇಳಲ್ಪಟ್ಟ ಗ್ರಹರು ದ್ವಿಸ್ವಭಾವ ರಾಶಿಗಳಲ್ಲಿದ್ದು ಬುಧನಿಂದ ನೋಡಲ್ಪಟ್ಟರೆ, ಅವಳಿ ಮಕ್ಕಳೆಂದೂ ಹೇಳಬೇಕು. ಆ ಮಕ್ಕಳು ರವಿ ಮತ್ತು ಗುರುಗಳು ಮಿಥುನ ಧನು ರಾಶಿ ನವಾಂಶಕಗಳಲ್ಲಿದ್ದು, ಬುಧನಿಂದ ನೋಡಲ್ಪಟ್ಟರೆ ಎರಡೂ ಗಂಡು ಮಕ್ಕಳೆಂದೂ, ಚಂದ್ರ ಶುಕ್ರ ಕುಜರು ಕನ್ಯಾ ಮೀನ ನವಾಂಶದಲ್ಲಿದ್ದು ಬುಧನಿಂದ ನೋಡಲ್ಪಟ್ಟರೆ ಎರಡೂ ಸ್ತ್ರೀ ಜನನವೆಂದೂ ಹೇಳತಕ್ಕದ್ದು

॥ ಪುರುಷ ಜನನಯೋಗ ॥

| | | | |
|---|---|---|---|
| ೦ | ೦ | ೦ | ೦ |
| ೦ | ಶ್ರೀ ಶಕ ೧೮೭೧ ಭಾದ್ರಪದ ಶುಕ್ಲ ೫ ಯು ರವಿವಾರ | | ಕುಜ ೪ |
| ೦ | | | ಲಗ್ನ ೩<br>ರವಿ ೩<br>ಶನಿ ೫ |
| ಗುರು ೯ | ೦ | ಚಂದ್ರ ೭ | ಬುಧ ೧೦<br>ಶುಕ್ರ ೧ |

ಇಲ್ಲಿ ಲಗ್ನ, ರವಿ, ಗುರು, ಚಂದ್ರರು ವಿಷಮ ರಾಶಿಯಲ್ಲಿರುವುದರಿಂದ ಪುರುಷ ಜನನವೆಂದು ತಿಳಿಯತಕ್ಕದ್ದು.

|| ಸ್ತ್ರೀ ಜನನಯೋಗ ||

| | | | |
|---|---|---|---|
| ೦ | ೦ | ಗುರು ೩ | ೦ |
| ೦ | ಶ್ರೀ ಶಕ ೧೮೩೯ ಭಾದ್ರಪದ ಶುಕ್ಲ ೧ ಯು ಚಂದ್ರವಾರ | | ಕುಜ ೬ ಶನಿ ೮ |
| ೦ | | | ೦ |
| ೦ | ೦ | ಶುಕ್ರ ೯ | ಲಗ್ನ ೨ ರವಿ ೨ ಚಂದ್ರ ೪ ಬುಧ ೨ |

ಇಲ್ಲಿ ಲಗ್ನ, ಚಂದ್ರ, ಕುಜ, ಸಮರಾಶಿಯಲ್ಲಿದ್ದು ಶುಕ್ರನು ವಿಷಮರಾಶಿಯಲ್ಲಿದ್ದರೂ ಲಗ್ನಾತ್ ಸಮರಾಶಿಯಲ್ಲಿರುವುದರಿಂದ ಸ್ತ್ರೀ ಜನ್ಮವಾಯ್ತು

|| ಯಮಳ (ಅವಳಿ) ಜನನಯೋಗ ||

| | | | |
|---|---|---|---|
| ಚಂದ್ರ ೧೦ | ೦ | ೦ | ೦ |
| ೦ | ಶ್ರೀ ಶಕ ೧೯೦೦ ಆಶ್ವೀಜ ಶುಕ್ಲ ೧೪ ಯು ರಾತ್ರಿ ಘಂ ೧-೫೬ ಮತ್ತು ೧-೫೮ | | ಲಗ್ನ ೧೨ ಗುರು ೭ |
| ೦ | | | ಶನಿ ೫ |
| ೦ | ೦ | ಕುಜ ೨ ಬುಧ ೯ ಶುಕ್ರ ೩ | ರವಿ ೬ |

(ರಾತ್ರಿ ಘಂ. ೧-೫೬ಕ್ಕೆ ಮತ್ತು ೧-೫೮ಕ್ಕೆ ಜನನ).

ಇಲ್ಲಿ ಲಗ್ನ, ಚಂದ್ರ, ಗುರು, ರವಿ ಯುಗ್ಮರಾಶಿಯಲ್ಲಿದ್ದು ಕುಜ ಶುಕ್ರ ಓಜ ರಾಶಿಯಲ್ಲಿದ್ದರೂ ಲಗ್ನದಿಂದ ಯುಗ್ಮರಾಶಿಯಲ್ಲಿದ್ದು ಗುರು ಲಗ್ನದಲ್ಲಿದ್ದು ಚಂದ್ರನನ್ನು ನೋಡುವುದರಿಂದ ಎರಡು ಹೆಣ್ಣುಮಕ್ಕಳ ಜನನವೆಂದು ತಿಳಿಯತಕ್ಕದ್ದು

> ವಿಹಾಯ ಲಗ್ನಂ ವಿಷಮರ್ಕ್ಷ ಸಂಸ್ಥಃ ।
> ಸೌರೋಽಪಿ ಪುಂಜನ್ಮಕರೋ ವಿಲಗ್ನಾತ್ ॥
> ಪ್ರೋಕ್ತ ಗ್ರಹಾಣಾ ಮವಲೋಕ್ಯ ವೀರ್ಯಂ ।
> ವಾಚ್ಯಃ ಪ್ರಸೂತೌ ಪುರುಷೋಂಽಗನಾ ವಾ ॥೧೨॥

ಲಗ್ನವಾಗಲಿ, ಪ್ರಶ್ನವಾಗಲಿ ಬಿಟ್ಟು ಉಳಿದ ವಿಷಮಸ್ಥಾನಗಳಿಂದ ತೃತೀಯ, ಪಂಚಮ, ಸಪ್ತಮ, ನವಮ, ಏಕಾದಶ ಈ ಸ್ಥಾನಗಳಲ್ಲಿ ಎಲ್ಲಿಯಾದರೂ ಶನಿ ಇದ್ದರೆ ಪುರುಷ ಜನನವನ್ನೂ ಸಮರಾಶಿಗಳಲ್ಲಿ ಲಗ್ನ ಸಹಿತ ಅಂದರೆ ಲಗ್ನ, ದ್ವಿತೀಯ, ಚತುರ್ಥ, ಷಷ್ಠ, ಅಷ್ಟಮ, ದಶಮ, ದ್ವಾದಶ. ಈ ಸ್ಥಾನಗಳಲ್ಲಿ ಶನಿ ಇದ್ದರೆ ಸ್ತ್ರೀ ಜನನವೆಂದೂ ತಿಳಿಯತಕ್ಕದ್ದು. ಹಿಂದೆ ಹೇಳಿದ ಗ್ರಹಗಳ ಬಲಾಬಲಗಳನ್ನು ನೋಡಿಕೊಂಡು ಗಂಡು ಅಥವಾ ಹೆಣ್ಣು ಎಂಬುದನ್ನು ನಿಶ್ಚಯಿಸಿ ಹೇಳತಕ್ಕದ್ದು.

> ಅನ್ಯೋನ್ಯಂ ಯದಿಪಶ್ಯತಃ ಶಶಿರವೀ ಯದ್ವಾರ್ಕಿ ಸೌಮ್ಯಾವಪಿ ।
> ವಕ್ರೋ ವಾ ಸಮಗಂ ದಿನೇಶಮಸಮೇ ಚಂದ್ರೋದಯೌ ಚೇತ್‌ಸ್ಥಿತೌ ॥
> ಯುಗ್ಮೌಜರ್ಕ್ಷ ಗತಾಮಪೀಂದು ಶಶಿಜೌ ಭೂಮ್ಯಾತ್ಮಜೇನೇಕ್ಷಿತೌ ।
> ಪುಂಭಾಗೇ ಸಿತಲಗ್ನ ಶೀತಕಿರಣಾಃ ಷಟ್‌ಕ್ಲೀಬಯೋಗಾಃ ಸ್ಮೃತಾಃ ॥೧೩॥

ಸಮರಾಶಿಯಲ್ಲಿದ್ದ ಚಂದ್ರನನ್ನು ವಿಷಮ ರಾಶಿಯಲ್ಲಿದ್ದ ಸೂರ್ಯನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ನಪುಂಸಕ ಜನ್ಮವಾಗುವುದು ಹಾಗೆಯೇ ಯುಗ್ಮರಾಶಿಯಲ್ಲಿ ಶನಿ ಇದ್ದು ಓಜರಾಶಿ ಯಲ್ಲಿದ್ದ ಬುಧನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿಯೂ ನಪುಂಸಕ ಜನನವಾಗುವುದು ಇದೇ ಪ್ರಕಾರ ವಿಷಮ ರಾಶಿಯಲ್ಲಿದ್ದ ಕುಜನನ್ನು ಸಮರಾಶಿಯಲ್ಲಿದ್ದ ರವಿಯಿಂದ ನೋಡಲ್ಪಟ್ಟರೆ ನಪುಂಸಕ ಜನನವಾಗುವುದು. ಹೀಗೆಯೇ ಚಂದ್ರ ಮತ್ತು ಲಗ್ನಗಳು ಓಜರಾಶಿಯಲ್ಲಿದ್ದು ಸಮರಾಶಿಯಲ್ಲಿದ್ದ ಕುಜನಿಂದ ನೋಡಲ್ಪಟ್ಟರೆ ನಪುಂಸಕ ಜನ್ಮವಾಗುವುದು. ಇದೇ ರೀತಿಯಲ್ಲಿ ಯುಗ್ಮರಾಶಿಯಲ್ಲಿ ಚಂದ್ರನೂ ಓಜರಾಶಿಯಲ್ಲಿ ಬುಧನಿದ್ದು ವಿಷಮರಾಶಿಯಲ್ಲಿದ್ದ ಕುಜನಿಂದ ನೋಡಲ್ಪಟ್ಟರೆ ನಪುಂಸಕ ಜನ್ಮವಾಗುವುದು ಶುಕ್ರ, ಲಗ್ನ, ಚಂದ್ರ ಇವು ಮೂರು ಯಾವ ರಾಶಿಯೊಳಗಾದರೂ ಪುರುಷರಾಶಿ ನವಾಂಶದಲ್ಲಿದ್ದರೆ ಆ ಕಾಲದಲ್ಲಿಯೂ ನಪುಂಸಕ ಜನ್ಮ ವಾಗುವುದು. ಈ ಪ್ರಕಾರ ಆರು ನಪುಂಸಕ ಜನನ ಯೋಗಗಳು ಹೇಳಲ್ಪಟ್ಟಿವೆ. (ಇಲ್ಲಿ ಸಮ ರಾಶಿಯಲ್ಲಿರುವ ಗ್ರಹರಿಗೆ ವಿಷಮರಾಶಿಯಲ್ಲಿದ್ದ ಗ್ರಹರು ನೋಡಲು ಸಾಧ್ಯವಿಲ್ಲೆಂತ ತಿಳಿಯ ಕೂಡದು. ಅದನ್ನು ದೃಷ್ಟಿಗಣಿತದಿಂದ ಗುಣಿಸಿ ನಿಶ್ಚಯಿಸಬೇಕು).

**ಯುಗ್ಮೇ ಚಂದ್ರಸಿತೌ ತಥೌಜ ಭವನೇಸ್ಯುಜ್ಞಾರ ಜೀವೋದಯಾ ।**
**ಲಗ್ನೇಂದೂ ನೃನಿರೀಕ್ಷಿತೌ ಚ ಸಮಗೌ ಯುಗ್ಮೇಷುವಾ ಪ್ರಾಣಿನಃ ॥**
**ಕುರ್ಯುಸ್ತೇ ಮಿಥುನಂ ಗ್ರಹೋದಯಗತಾನ್‌ದ್ವ್ಯಂಗಾಂಶಕಾನ್ ಪಶ್ಯತಿ ।**
**ಸ್ವಾಂಶೇಜ್ಞೇತ್ರಿತಯಂ ಜ್ಞಗಾಂಶಕ ವಶಾದ್ಯುಗ್ಮಂತ್ವ ಮಿಶ್ರೈಃ ಸಮಮ್ ॥೧೪॥**

ಸ್ತ್ರೀರಾಶಿಯಲ್ಲಿ ಚಂದ್ರ, ಶುಕ್ರರೂ ಪುರುಷರಾಶಿಯಲ್ಲಿ ಬುಧ, ಕುಜ, ಗುರು, ಲಗ್ನಗಳೂ ಇದ್ದರೆ, ಒಂದು ಸ್ತ್ರೀ ಮತ್ತೊಂದು ಪುರುಷ ಹೀಗಿರುವ ಯಮಳ ಜನನವನ್ನೂ ಲಗ್ನ, ಚಂದ್ರರು ಸ್ತ್ರೀರಾಶಿಯಲ್ಲಿದ್ದು ಪುರುಷ ಗ್ರಹರಿಂದ ನೋಡಲ್ಪಟ್ಟರೆ ಒಂದು ಗಂಡು ಒಂದು ಹೆಣ್ಣು ಇರುವ ಯಮಳ ಜನನವನ್ನು ಹೇಳಬೇಕು ಪುನಃ ಬುಧ, ಕುಜ, ಗುರು, ಲಗ್ನ ಇವು ಸಮರಾಶಿಯಲ್ಲಿ ಬಲಶಾಲಿಗಳಾಗಿ ಇದ್ದರೂ ಒಂದು ಹೆಣ್ಣು ಒಂದು ಗಂಡು ಹೀಗಿರುವ ಯಮಳ ಜನನವಾಗುವುದು ಎಲ್ಲಾ ಗ್ರಹಗಳು ದ್ವಿಸ್ವಭಾವ (ಮಿಥುನ, ಕನ್ಯಾ, ಧನು, ಮೀನ) ನವಾಂಶವಾಗಿ ಲಗ್ನದಲ್ಲಿದ್ದು ತನ್ನ ನವಾಂಶದಲ್ಲಿರುವ ಬುಧನಿಂದ ನೋಡಲ್ಪಟ್ಟರೆ ಮೂರು ಮಕ್ಕಳು ಹುಟ್ಟುವುದೆಂದು ಹೇಳಬೇಕು ಈ ಮೂರು ಶಿಶು ಗಳಲ್ಲಿ ಬುಧನ ಅಂಶಕದಂತೆ ಅಂದರೆ ಬುಧನು ಮಿಥುನಾಂಶಕದಲ್ಲಿದ್ದರೆ ಎರಡು ಪುರುಷ ಒಂದು ಸ್ತ್ರೀ, ಕನ್ಯಾಂಶಕದಲ್ಲಿದ್ದರೆ ಎರಡು ಸ್ತ್ರೀ ಒಂದು ಪುರುಷನೆಂದು ಹೇಳಬೇಕು ಈ ಮೇಲೆ ಹೇಳಿದ ಗ್ರಹರು ಸ್ತ್ರೀರಾಶಿಯಲ್ಲಿದ್ದು, ಪುರುಷ ನವಾಂಶವನ್ನು ಹೊಂದಿದ್ದರೆ ಮೂರು ಗಂಡು ಎಂತಲೂ ಪುರುಷರಾಶಿಯಲ್ಲಿದ್ದು ಸ್ತ್ರೀನವಾಂಶವನ್ನು ಹೊಂದಿದ್ದರೆ ಮೂರು ಹೆಣ್ಣೆಂತಲೂ ಹೇಳತಕ್ಕದ್ದು

**ಧನುರ್ಧರ ಸ್ಯಾಂತ್ಯಗತೇ ವಿಲಗ್ನೇ ।**
**ಗ್ರಹೈಸ್ತದಂಶೋ ಪಗತೈರ್ಬಲಿಷ್ಠೈಃ ॥**
**ಜ್ಞೇನಾರ್ಕಿಣಾವೀರ್ಯ ಯುತೇನ ದೃಷ್ಟೇ ।**
**ಸಂತಿ ಪ್ರಭೂತಾ ಅಪಿಕೋಶ ಸಂಸ್ಥಾಃ ॥೧೫॥**

ಧನುರಾಶಿಯಲ್ಲಿ ಅಂತ್ಯ ಧನು ನವಾಂಶಕದಲ್ಲಿ ಲಗ್ನವಿರುವಾಗ ಯಾವ ರಾಶಿಯಲ್ಲಾದರೂ ಧನು ನವಾಂಶ ಹೊಂದಿರುವ ಬಲಶಾಲಿಗಳಾದ ಷಡ್ಬಲಯುಕ್ತರಾದ ಸೂರ್ಯಾದಿ ಗ್ರಹಗಳಿಂದಲೂ ಬಲವಂತನಾದ ಬುಧ, ಶನಿಗಳಿಂದ ನೋಡಲ್ಪಟ್ಟರೆ ಆ ಗರ್ಭಕೋಶದಲ್ಲಿ ಬಹಳ ಮಕ್ಕಳಿರುವು ದೆಂದು ತಿಳಿಯುವುದು (ಬೆಕ್ಕು, ನಾಯಿ, ಹಂದಿ, ಕರಡಿ ಇತ್ಯಾದಿ ಪ್ರಾಣಿಗಳಲ್ಲೂ ಕೋಳಿ ಇತ್ಯಾದಿ ಪಕ್ಷಿಗಳಲ್ಲೂ ಇಂಥ ಯೋಗ ಸಿಕ್ಕುತ್ತದೆ.)

**ಕಲಲಘನಾಂ ಕುರಾಸ್ಥಿ ಚರ್ಮಾಂಗಜ ಚೇತನತಾಃ ।**
**ಸಿತಕುಜ ಸೂರ್ಯಚಂದ್ರಾರ್ಕಿ ಬುಧಾಃ ಪರತಃ ॥**
**ಉದಯಪಚಂದ್ರ ಸೂರ್ಯನಾಥಾಃ ಕ್ರಮಶೋ ಗದಿತಾ ।**
**ಭವತಿ ಶುಭಾಶುಭಂ ಚ ಮಾಸಾಧಿಪತೇಃ ಸದೃಶಂ ॥೧೬॥**

ಗರ್ಭದಾನ ಕಾಲದಿಂದಾರಂಭಿಸಿ ಮೊದಲನೇ ಮಾಸದಲ್ಲಿ ಗರ್ಭವು ಮಾಂಸ ರೂಪವನ್ನು ಹೊಂದುತ್ತದೆ ಆ ಮಾಸಕ್ಕೆ ಶುಕ್ರನು ಅಧಿಪತಿಯು ಎರಡನೆ ತಿಂಗಳಲ್ಲಿ ಆ ಮಾಂಸ ಘಟ್ಟಿ

ಯಾಗುತ್ತದೆ. ಅದಕ್ಕೆ ಕುಜನು ಅಧಿಪತಿಯು ಮೂರನೆ ತಿಂಗಳಲ್ಲಿ ಆ ಪಿಂಡದಲ್ಲಿ ಆಕಾರ ರೂಪಗಳು ಅಂಕುರವಾಗುವುದು ಅದಕ್ಕೆ ಗುರುವು ಅಧಿಪತಿಯು. ನಾಲ್ಕನೆ ತಿಂಗಳಲ್ಲಿ ಗರ್ಭದಲ್ಲಿ ಅಸ್ಥಿಗಳುಂಟಾಗುವುದು ಅದಕ್ಕೆ ಸೂರ್ಯನು ಅಧಿಪತಿಯು ಐದನೆಯ ತಿಂಗಳಲ್ಲಿ ಗರ್ಭಕ್ಕೆ ಚರ್ಮ ಉಂಟಾಗುವುದು ಆಗ ಚಂದ್ರನು ಅಧಿಪತಿಯು ಆರನೇ ತಿಂಗಳಲ್ಲಿ ಗರ್ಭಕ್ಕೆ ಕರಚರಣಾದ್ಯವಯವಗಳುಂಟಾಗುವುದು ಅದಕ್ಕೆ ಶನಿಯು ಅಧಿಪತಿಯು. ಏಳನೇ ತಿಂಗಳಲ್ಲಿ ಗರ್ಭಕ್ಕೆ ಚೇತನ ಉಂಟಾಗುವುದು ಅದಕ್ಕೆ ಬುಧನು ಅಧಿಪತಿಯು. ಎಂಟನೇ ತಿಂಗಳಲ್ಲಿ ಗರ್ಭಾದಾನ ಲಗ್ನದ ಅಧಿಪತಿಯು ಒಂಬತ್ತನೇ ತಿಂಗಳಲ್ಲಿ ಚಂದ್ರನೂ, ಹತ್ತನೆ ತಿಂಗಳಿಗೆ ಸೂರ್ಯನೂ ಹೀಗೆ ಮಾಸಾಧಿಪತಿಗಳು ಆಗುತ್ತಾರೆ ಮಾಸಾಧಿಪತಿಗಳ ಬಲಾಬಲವನ್ನನುಸರಿಸಿ ಆಯಾಯ ತಿಂಗಳಿನಲ್ಲಿ ಶುಭಾಶುಭ ಫಲಗಳು ಉಂಟಾಗುತ್ತವೆ ಅಂದರೆ ಯಾವ ಮಾಸಾಧಿಪತಿಗಳು ಬಲವುಳ್ಳವರಾಗುವರೋ ಆ ಮಾಸದಲ್ಲಿ ಗರ್ಭಿಣಿಗೆ ಅಥವಾ ಗರ್ಭಕ್ಕೆ ಪುಷ್ಟಿಯೂ, ಸುಖವೂ, ಯಾವ ಮಾಸಾಧಿಪತಿ ಬಲಹೀನನಾಗಿ ಪೀಡಿತನಾಗುವನೋ ಆ ಮಾಸದಲ್ಲಿ ಗರ್ಭಿಣಿಗೆ ಮತ್ತು ಗರ್ಭಕ್ಕೆ ದುಃಖವೂ ಅಥವಾ ಗರ್ಭಪಾತವೂ ಆಗುವುದೆಂದು ತಿಳಿಯತಕ್ಕದ್ದು

|| ಗರ್ಭದ ಸ್ಥಿತಿ ಮತ್ತು ಮಾಸಾಧಿಪತಿಗಳು ||

| ಗರ್ಭ ಮಾಸ ಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
|---|---|---|---|---|---|---|---|---|---|---|
| ಗರ್ಭದ ಸ್ಥಿತಿ | ಶುಕ್ಲ ಶೋಣಿತ | ಗಟ್ಟಿಯಾಗುವುದು | ಅವಯವ ಅಂಕುರವಾಗುವುದು | ಎಲುಬು ಹುಟ್ಟುವುದು | ಚರ್ಮ ಬರುವುದು | ರೋಮ ಇತ್ಯಾದಿ ಉತ್ಪತ್ತಿಯಾಗುವುದು | ಜೀವ ಚೈತನ್ಯ ಬರುವುದು | ತಾಯಿಯಿಂದ ಆಹಾರ ಸೇವನೆ ಪ್ರಾರಂಭ | ಪ್ರಸವ ಉದ್ವೇಗ ಆಗುವುದು | ಪ್ರಸವಕಾಲ |
| ಅಧಿಪತಿ ಗ್ರಹರು | ಶುಕ್ರ | ಕುಜ | ಗುರು | ರವಿ | ಚಂದ್ರ | ಶನಿ | ಬುಧ | ಲಗ್ನಾಧಿಪತಿ | ಚಂದ್ರ | ರವಿ |

ಗರ್ಭಾದಾನ ಕಾಲದಿಂದ ಯಾವ ತಿಂಗಳ ಅಧಿಪತಿ ಅಸ್ತ, ರಶ್ಮಿಹೀನ, ಇತ್ಯಾದಿಗಳಿಂದ ಕಲುಷಿತ ವಾಗುವನೋ ಆ ತಿಂಗಳಿನಲ್ಲಿ ಗರ್ಭಕ್ಕೆ ಪೀಡೆ ಯಾ ದೋಷವನ್ನು ಹೇಳತಕ್ಕದ್ದು.

**ತ್ರಿಕೋಣಗೇ ಜ್ಞೇ ವಿಬಲೈಸ್ತಥಾ ಪರೈರ್ಮುಖಾಂಘ್ರಿ ಹಸ್ತೈರ್ದ್ವಿಗುಣಸ್ತದಾ ಭವೇತ್ ||**
**ಅವಾಗ್ಗವೀಂ ದಾವಶುಭೈರ್ಭ ಸಂಧಿಗೈಃ ಶುಭೇಕ್ಷಿತಶ್ಚೇತ್ ಕುರುತೇ ಗಿರಂ ಚಿರಾತ್ ||೧೭||**

ಬುಧನು ಲಗ್ನದಿಂದ ಐದು ಒಂಬತ್ತರಲ್ಲಿದ್ದು ಬಾಕಿ ಉಳಿದ ಗ್ರಹರು ದುರ್ಬಲರಾಗಿ ಎಲ್ಲಿ ಯಾದರೂ ಇದ್ದರೆ ಆಗ ಗರ್ಭಸ್ಥ ಮಗುವಿಗೆ ಮುಖವೂ, ಕಾಲು, ಕೈಗಳು ಸ್ವಾಭಾವಿಕವಾಗಿರ ಬೇಕಾದುದಕ್ಕಿಂತ ಎರಡರಷ್ಟು ಇರುವುದು (ಸ್ವಾಭಾವಿಕಕ್ಕಿಂತ ಹೆಚ್ಚು ಬೆರಳುಗಳು, ಮಾಂಸದ ಗುಳ್ಳೆ ಮೊದಲಾದವುಗಳೂ ಸೇರಿರಬಹುದು.) ವೃಷಭ ರಾಶಿಯಲ್ಲಿ ಚಂದ್ರನು ಕರ್ಕಾಟಕ, ವೃಶ್ಚಿಕ, ಮೀನ ಈ ರಾಶಿಗಳ ಅಂತ್ಯ ನವಾಂಶಗಳಲ್ಲಿ ಪಾಪಗ್ರಹರೆಲ್ಲರೂ ಇದ್ದರೆ ಮೂಕನು ಜನಿಸುವನೆಂದು ಹೇಳಬೇಕು ಆ ಪಾಪಗ್ರಹರ ಮೇಲೆ ಶುಭಗ್ರಹರ ದೃಷ್ಟಿ ಇದ್ದರೆ ಕೆಲವು ಕಾಲ ಕಳೆದ ಮೇಲೆ ಆ ಮಗುವು ಮಾತನ್ನು ಕಲಿಯುತ್ತಾನೆಂದು ಹೇಳಬೇಕು

**ಸೌಮ್ಯರ್ಕ್ಷಾಂಶೇ ರವಿಜರುಧಿರೌ ಚೇತ್ಸದಂತೋತ್ರ ಜಾತಃ ।**
**ಕುಬ್ಜಃ ಸ್ವರ್ಕ್ಷೇ ಶಶಿನಿ ತನುಗೇ ಮಂದಮಾಹೇಯ ದೃಷ್ಟೇ ॥**
**ಪಂಗುರ್ಮೀನೇ ಯಮಶಶಿ ಕುಜೈರ್ವೀಕ್ಷಿತೇ ಲಗ್ನ ಸಂಸ್ಥೇ ।**
**ಸಂಧೌ ಪಾಪೇ ಶಶಿನಿ ಚ ಜಡಃ ಸ್ಯಾನ್ನಚೇತ್ಸೌಮ್ಯ ದೃಷ್ಟಾಃ ॥೧೮॥**

ಬುಧನ ರಾಶಿಗಳಾದ ಮಿಥುನ ಕನ್ಯಾ ನವಾಂಶದಲ್ಲಿ ಶನಿ ಕುಜರಿದ್ದರೂ ಅಥವಾ ಮಿಥುನ ಕನ್ಯಾ ರಾಶಿಯಲ್ಲಿದ್ದರೂ ಆ ಕಾಲದಲ್ಲಿ ಹುಟ್ಟಿದ ಮಗುವು ಹಲ್ಲು ಸಹಿತ ಜನಿಸುವುದು ಚಂದ್ರನು ಸ್ವಕ್ಷೇತ್ರವಾದ ಕರ್ಕಾಟಕದಲ್ಲಿದ್ದು ಕರ್ಕಾಟಕವೇ ಲಗ್ನವಾಗಿ ಶನಿ, ಕುಜರಿಂದ ನೋಡಲ್ಪಟ್ಟರೆ, ಗೂನುಬೆನ್ನಿನ (ಕುಬ್ಜ) ಮಗುವು ಹುಟ್ಟುವುದು ಮೀನವು ಲಗ್ನವಾಗಿ ಶನಿ, ಚಂದ್ರ, ಕುಜರು ಅಲ್ಲಿದ್ದರೂ ಅಥವಾ ನೋಡಲ್ಪಟ್ಟರೂ, ಹೆಳವ (ಪಂಗು) ಮಗುವು ಹುಟ್ಟುವುದು ಕರ್ಕಾಟಕ, ವೃಶ್ಚಿಕ, ಮೀನ, ರಾಶಿಗಳ ಕೊನೆಯ ನವಾಂಶಕದಲ್ಲಿ ಕ್ಷೀಣ ಚಂದ್ರನಿದ್ದು ಶುಭಗ್ರಹರ ದೃಷ್ಟಿ ಇಲ್ಲದಿದ್ದರೆ ಜಡ ಮಗುವು ಹುಟ್ಟುವುದು. (ಇಲ್ಲಿ ಗ್ರಹರ ಷಡ್ಬಲ ಷಡ್ವರ್ಗಬಲ, ಶುಭಗ್ರಹರ ದೃಷ್ಟಿಗಳನ್ನು ಚೆನ್ನಾಗಿ ವಿಚಾರ ಮಾಡಿ ಹೇಳತಕ್ಕದ್ದು )

**ಸೌರಶಶಾಂಕ ದಿವಾಕರ ದೃಷ್ಟೇ ।**
**ವಾಮನಕೋ ಮಕರಾಂತ್ಯ ವಿಲಗ್ನೇ ॥**
**ಧೀ ನವಮೋದಯಗೈಶ್ಚ ದೃಕಾಣೈಃ ।**
**ಪಾಪಯುತೈರ ಭುಜಾಂಘ್ರಿ ಶಿರಾಃ ಸ್ಯಾತ್ ॥೧೯॥**

ಮಕರ ರಾಶಿಯ ಅಂತ್ಯಭಾಗವು ಲಗ್ನವಾಗಿ ಅದನ್ನು ಶನಿ, ಚಂದ್ರ, ಸೂರ್ಯ ಈ ಮೂರು ಗ್ರಹರಿಂದ ನೋಡಲ್ಪಟ್ಟರೆ ಕುಳ್ಳನು ಜನಿಸುವನು. ಲಗ್ನದ ಆದಿ ದ್ರೇಕ್ಕಾಣದಲ್ಲಿ ರವಿ, ಕುಜ ಶನಿಗಳಿಂದ ಕೂಡಿದ್ದರೆ ಭುಜಹೀನವಾದ ಮಗುವೂ ಮಧ್ಯ ದ್ರೇಕ್ಕಾಣವು ರವಿ ಕುಜ ಶನಿಗಳಿಂದ ಕೂಡಿದ್ದರೆ ಪಾದಹೀನವೂ, ಅಂತ್ಯ ದ್ರೇಕ್ಕಾಣವು ರವಿ, ಕುಜ, ಶನಿಗಳಿಂದ ಕೂಡಿದ್ದರೆ ಶಿರೋಹೀನವೂ ಆಗಿರುವ ಮಗುವು ಹುಟ್ಟುವುದೆಂದು ತಿಳಿಯತಕ್ಕದ್ದು

ರವಿ ಶಶಿಯುತೇ ಸಿಂಹೇ ಲಗ್ನೇ ಕುಜಾರ್ಕಿ ನಿರೀಕ್ಷಿತೇ ।
ನಯನ ರಹಿತಃ ಸೌಮ್ಯಾ ಸೌಮ್ಯೈಃ ಸಬುದ್ಬುದ ಲೋಚನಃ ॥
ವ್ಯಯಗೃಹಗತಶ್ಚಂದ್ರೋ ವಾಮಂ ಹಿ ನಸ್ತ್ಯಪರಂ ರವಿಸ್ತ್ವ ಶುಭ ।
ಗದಿತಾ ಯೋಗಾಯಾಪ್ಯಾ ಭವಂತಿ ಶುಬೇಕ್ಷಿತಾಃ ॥೨೦॥

ಲಗ್ನವು ಸಿಂಹರಾಶಿಯಾಗಿ ಸೂರ್ಯ ಚಂದ್ರರಿಂದ ಕೂಡಿದ್ದು ಕುಜ ಶನಿಗಳಿಂದ ನೋಡಲ್ಪಟ್ಟರೆ ಕಣ್ಣಿಲ್ಲದವನೂ ಮೇಲಿನ ಯೋಗಕ್ಕೆ ಶುಭಾಶುಭಗ್ರಹರ ದೃಷ್ಟಿ ಇದ್ದರೆ (ಗಡ್ಡೆಗಣ್ಣು, ಗಾಜು ಗಣ್ಣು) ಹೂಗಣ್ಣುಳ್ಳವನೂ ಚಂದ್ರನು ದ್ವಾದಶದಲ್ಲಿದ್ದರೆ ಎಡಗಣ್ಣಿಲ್ಲದವನೂ, ಸೂರ್ಯನು ದ್ವಾದಶದಲ್ಲಿದ್ದರೆ ಬಲಗಣ್ಣಿಲ್ಲದವನೂ ಹುಟ್ಟುವನು. ಈ ಅಶುಭವಾಗಿ ಹೇಳಿದ ಯೋಗಗಳಿಗೆ ಶುಭದೃಷ್ಟಿ ಇದ್ದರೆ ಮೇಲೆ ಹೇಳಿದ ಯೋಗಗಳು ಸಂಭವಿಸುವುದಿಲ್ಲ.

ತತ್ಕಾಲಮಿಂದು ಸಹಿತೋ ದ್ವಿರ ಸಾಂಶಕೋಯ ।
ಸ್ತತ್ತುಲ್ಯರಾಶಿ ಸಹಿತೇ ಪುರತಃ ಶಶಾಂಕೇ ॥
ಯಾವಾನುದೇತಿ ದಿನರಾತ್ರಿ ಸಮಾನಭಾಗ ।
ಸ್ತಾವದ್ಗತೇ ದಿನನಿಶೋಃ ಪ್ರವದಂತಿ ಜನ್ಮ ॥೨೧॥

ಗರ್ಭಾದಾನ ಲಗ್ನ ಅಥವಾ ಪ್ರಶ್ನಲಗ್ನ ಕಾಲಕ್ಕೆ ಚಂದ್ರನು ತಾನಿರುವ ರಾಶಿಯಲ್ಲಿ ಎಷ್ಟನೇ ದ್ವಾದಶಾಂಶಯಲ್ಲಿದ್ದಾನೋ ಮೇಷಾದಿಯಾಗಿ ಅಷ್ಟನೆ ರಾಶಿಯಲ್ಲಿ ಮುಂದೆ ಚಂದ್ರನಿರುವ ಹತ್ತನೆ ತಿಂಗಳಲ್ಲಿ ಪ್ರಸವವಾಗುವುದೆಂದು ಹೇಳತಕ್ಕದ್ದು. ಕೆಲವರ ಮತ, ಚಂದ್ರನು ತಾನಿರುವ ರಾಶಿಯಲ್ಲಿ ಎಷ್ಟು ದ್ವಾದಶಾಂಶಗಳು ಕಳೆದಿವೆಯೊ ಆ ರಾಶಿ ಮೊದಲುಗೊಂಡು ಅಷ್ಟನೆ ರಾಶಿಯಲ್ಲಿ ಚಂದ್ರನಿರುವಾಗ ಹತ್ತನೆ ತಿಂಗಳಲ್ಲಿ ಪ್ರಸವವಾಗುವುದೆಂದು ಹೇಳತಕ್ಕದ್ದು. ಆಧಾನ ಲಗ್ನ ಅಥವಾ ಪ್ರಶ್ನಲಗ್ನ ರಾಶಿಯು ದಿವಾಬಲ ಉಳ್ಳದ್ದಾಗಿದ್ದರೆ ಹಗಲಿನಲ್ಲಿಯೂ ರಾತ್ರಿ ಬಲ ಉಳ್ಳದ್ದಾಗಿದ್ದರೆ ರಾತ್ರಿಯಲ್ಲಿಯೂ ಆ ಲಗ್ನದ ಎಷ್ಟು ಭಾಗ, ಕಲೆಗಳು ಸಂದಿವೆಯೋ ಅಷ್ಟನೇ ಘಟಿವಿಘಟಿಗಳಲ್ಲಿ ಜನನವಾಗುವುದೆಂದು ಹೇಳಬೇಕು

## ಉದಾಹರಣೆ

"ಕುಜೇಂದು ಹೇತು ಪ್ರತಿ ಮಾಸ" (ಈ ಅಧ್ಯಾಯದ ೧ನೇ ಶ್ಲೋಕ) ಸ್ತ್ರೀಯರಿಗೆ ಪ್ರತಿ ತಿಂಗಳಲ್ಲಿ ರಜೋದರ್ಶನವಾದರೂ ಗರ್ಭಸಂಭವಕ್ಕೆ ಕಾರಣವಾಗುವುದಿಲ್ಲ. ಗರ್ಭಕೋಶವು ಶುದ್ಧವಾಗಿ ಗರ್ಭೋತ್ಪತ್ತಿಯಾಗಬೇಕಾದರೆ ಸ್ತ್ರೀಯರ ಜನ್ಮರಾಶಿಯಿಂದ ಅನುಪಚಯರಾಶಿಗಳಾದ, ೧-೨-೪-೫-೭-೮-೯-೧೨ ಈ ಸ್ಥಾನಗಳಲ್ಲಿ ಎಲ್ಲಿಯಾದರೂ ಚಂದ್ರನಿದ್ದು ಅಂಗಾರಕನಿಂದ ಕೂಡಿಕೊಂಡಿದ್ದರೆ ಯಾ ನೋಡಲ್ಪಟ್ಟಾಗ ರಜೋ ದರ್ಶನವಾದಲ್ಲಿ ಗರ್ಭಸಂಭವಕ್ಕೆ ಕಾರಣ ವಾಗುವುದು. ಇದಕ್ಕೆ ವ್ಯತ್ಯಸ್ತವಾಗಿ ೩-೬-೧೦-೧೧ನೇ ರಾಶಿಯಲ್ಲಿ ಚಂದ್ರನಿದ್ದು ಶುಭ ಮತ್ತು ಪುರುಷ ಗ್ರಹವಾದ ಗುರುವಿನಿಂದ ನೋಡಲ್ಪಟ್ಟಾಗ ಪುರುಷ ಸಂಭೋಗ ಉಂಟಾಗುವುದು. ಪುರುಷನಿಗೂ ಹೀಗೆಯೇ ಯೋಗ ಸಂಭವಿಸಿದಲ್ಲಿ ಸ್ತ್ರೀ ಸಂಬಂಧವಾಗುವುದು.

ಪುರುಷನು ರೇವತಿ ನಕ್ಷತ್ರ ಮೀನ ರಾಶಿ ಸ್ತ್ರೀಯಳಿಗೆ ಉತ್ರಾಷಾಡಾ ಸಕ್ಷತ್ರ ಧನು ರಾಶಿ ಶ್ರೀ ಶಕ ೧೯೦೪ ದುಂದುಭಿ ನಾಮ ಸಂ|ರದ ಕಾರ್ತಿಕ ಶುಕ್ಲ ೫ ಯು ರವಿವಾರ ತಾ ೨೧-೧೧-೧೯೮೨ರ ಸೂರ್ಯೋದಯಾದಿ ಘಟಿ ೧೪ಕ್ಕೆ ಸ್ತ್ರೀಯಳಿಗೆ ರಜೋದರ್ಶನ (ಋತು)ವಾಯ್ತು ಈ ದಿವಸ ಉತ್ರಾಷಾಡಾ ನಕ್ಷತ್ರ ಧನು ರಾಶಿಯಾಗಿದ್ದು ಅನುಪಚಯ ರಾಶಿಯಲ್ಲಿ ಚಂದ್ರನಾಗಿ ಕುಜನ ಯೋಗವಾದುದರಿಂದ ಗರ್ಭಸಂಭವಕ್ಕೆ ಯೋಗ್ಯವಾದ ಋತುವೆಂತ ತಿಳಿಯತಕ್ಕದ್ದು ಈ ಪುರುಷ ಮತ್ತು ಸ್ತ್ರೀಯಳ ಜನ್ಮರಾಶಿಗಳಿಗೆ ಉಪಚಯರಾಶಿಯಾದ ವೃಷಭ ರಾಶಿಯಲ್ಲಿ ಚಂದ್ರನು ಬಂದಾಗ ವೃಶ್ಚಿಕದಲ್ಲಿರುವ ಗುರುವಿನ ದೃಷ್ಟಿಯಾಗುವುದರಿಂದ ಈ ದಿವಸ ಗರ್ಭೋತ್ಪತ್ತಿಯಾಗುವುದೆಂದೂ ಇದು ಹತ್ತನೇ ದಿವಸವಾದುದರಿಂಪ ಸ್ತ್ರೀ ಜನನವಾಗುವುದೆಂದೂ ಹೇಳತಕ್ಕದ್ದು

ಶ್ರೀ ಶಕ ೧೯೦೪ ದುಂದುಭಿನಾಮ ಸಂ|ರದ ವೃಶ್ಚಿಕ ಮಾಸ ೧೪ ಸಲುವ ಕಾರ್ತಿಕ ಶುಕ್ಲ ೧೫ಯು ಕುಜವಾರ ತಾ. ೩೦-೧೧-೧೯೮೨ ರಾತ್ರಿ ಘಂಟೆ ೯-೪೨ಕ್ಕೆ ಸೂರ್ಯೋದಯಾದಿ ಘಟಿ ೩೭.೪೫ ಕರ್ಕಾಟಕ ಲಗ್ನ ಆಧಾನಲಗ್ನ ಅಥವಾ ಪ್ರಶ್ನಲಗ್ನವಾದರೂ ಇದರಿಂದ ಪ್ರಸವಕಾಲ ಯಾವಾಗವೆಂತ ತಿಳಿಯಬೇಕು ತತ್ಕಾಲದಲ್ಲಿ ನವೀನ ದೃಕ್ ಸಿದ್ಧಾಂತ ಪ್ರಕಾರ ಗುಣಿಸಿ ತಂದ ಚಂದ್ರಸ್ಫುಟ ರಾಶಿ ೧.೮ ೩ ೨೮ ಲಗ್ನಸ್ಫುಟ ರಾಶಿ ೩ ೬ ೫೩.೨೫ ದಿವಾ ಮಾನ ಘಟಿ ೨೮ ೨೮ ವೃಷಭ ರಾಶಿಯಲ್ಲಿ ಚಂದ್ರನು ೪ನೇ ದ್ವಾದಶಾಂಶದಲ್ಲಿರುವುದರಿಂದ ಮೇಷಾದಿ ೪ನೇ ರಾಶಿಯಾದ ಕರ್ಕಾಟಕದಲ್ಲಿ ಚಂದ್ರನಿರುವಾಗ ೧೦ನೇ ತಿಂಗಳಾದ ಶ್ರಾವಣ ಮಾಸದಲ್ಲಿ ಜನನವಾಗುವುದು ಕರ್ಕಾಟಕ ರಾಶಿಯಲ್ಲಿ ಪುನರ್ವಸು ನಕ್ಷತ್ರದ ೧ ಚರಣ ಪುಷ್ಯಾ ನಕ್ಷತ್ರದ ೪ ಚರಣ ಆಶ್ಲೇಷಾ ನಕ್ಷತ್ರದ ೪ ಚರಣಗಳಿರುವುದರಿಂದ ಇದರಲ್ಲಿ ಯಾವ ನಕ್ಷತ್ರದ ಯಾವ ಚರಣದಲ್ಲಿ ಪ್ರಸವವಾಗುವುದೆಂದು ನಿರ್ಣೈಸಬೇಕು

ಇಲ್ಲಿ ರಾಶಿ ಬಿಟ್ಟು ಅಂಶಾದಿಯಾಗಿ ಚಂದ್ರ ೮ ೩ ೨೮ ಒಂದು ದ್ವಾದಶಾಂಶವೆಂದರೆ ಭಾಗ ೨.೩೦=ಕಲಾ ೧೫೦ ಒಂದು ರಾಶಿಗೆ ಕಲಾ ೧೮೦೦ ಚಂದ್ರನ ಭುಕ್ತ ದ್ವಾದಶಾಂಶ ೮ ೩.೨೮—೭ ೩೦ ಲಬ್ಧಿ ೩ ಭುಕ್ತ ಕಲಾ ೩೩ ೨೮ ಸ್ವಲ್ಪಾಂತರದಿಂದ ೩೩ ಇದರಿಂದ ೧೮೦೦X೩೩ ಲಬ್ಧಿ ೫೯೪೦೦—೧೫೦ ಲಬ್ಧಿ ಕಲಾ ೩೯೬ ಒಂದು ನಕ್ಷತ್ರ ಚರಣಕ್ಕೆ ೩ ೨೦=ಕಲಾ ೨೦೦ ಇದರಿಂದ ಭಾಗಿಸಿದ್ದು ೩೯೬—೨೦೦ ಲಬ್ಧಿ ೧ ಶೇಷ ೧೯೬ ಅಂದರೆ ಕರ್ಕಾಟಕ ರಾಶಿಯಲ್ಲಿ ೨ನೇ ಚರಣವಾಯ್ತು ಕರ್ಕಾಟಕ ರಾಶಿಯಲ್ಲಿ ಪುನರ್ವಸು ೧ ಚರಣ ಕಳದು ಪುಷ್ಯ ನಕ್ಷತ್ರದ ೧ನೇ ಚರಣದಲ್ಲಿ ಪ್ರಸವವಾಗುವುದೆಂದು ಹೇಳತಕ್ಕದ್ದು.

ಲಗ್ನಸ್ಫುಟ ರಾಶಿ ೩.೬ ೫೩ ೨೫ ಕರ್ಕಾಟಕ ಲಗ್ನದಲ್ಲಿ ೩ನೆಯ ಕನ್ಯಾ ನವಾಂಶವಾದ್ರಿಂದ ದಿವಾ ಬಲ ರಾಶಿಯಾಯ್ತು. ಹಗಲಿನಲ್ಲಿ ಪ್ರಸವವೆಂತ ಹೇಳತಕ್ಕದ್ದು ರಾಶಿ ಬಿಟ್ಟು ಲಗ್ನಭುಕ್ತ ನವಾಂಶ ೬.೫೩.೨೫—೬ ೪೦ ಲಬ್ಧಿ ಸ್ವಲ್ಪಾಂತರದಿಂದ ೧೩ ದಿವಾ ಮಾನ ೨೮.೨೮ ಸ್ವಲ್ಪಾಂತರದಿಂದ ೨೮ ಇಲ್ಲಿ ೧೩X೨೮ ಲಬ್ಬಿ ೩೬೪—೨೦೦ ಲಬ್ಧಿ ಘಟಿ ೧ ಶೇಷ ೧೬೪X೬೦ ಲಬ್ಧಿ ೯೮೪೦—೨೦೦ ಲಬ್ಧಿ ವಿಘಟಿ ೪೯ ಅಂದರೆ ಸೂರ್ಯೋದಯಾದಿ ಘಟಿ ೧ ವಿಘಟಿ

೪೯ಕ್ಕೆ ಪ್ರಸವವಾಗುವುದೆಂದು ಹೇಳತಕ್ಕದ್ದು. ಇದಕ್ಕೆ ಸರಿಯಾಗಿ ಜಾತಕವನ್ನು ಗುಣಿಸಿ ಜನನ ಲಕ್ಷಣಾದಿ ಎಲ್ಲಾ ಫಲಗಳನ್ನು ಹೇಳತಕ್ಕದ್ದು. (ಇದರ ಪ್ರಕಾರ ಗರ್ಭಾದಾನದಿಂದ ೧೦ನೇ ತಿಂಗಳಾದ ಶ್ರಾವಣ ಮಾಸದ ಪಂಚಾಂಗವನ್ನು ನೋಡುವುದು)

## ಶ್ರೀರಸ್ತು

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್ನೃಪಶಾಲಿವಾಹನ ಶಕ ೧೯೦೫ ರುಧಿರೋದ್ಗಾರಿ ನಾಮ ಸಂ|ರದ ಸಿಂಹ ಮಾಸ ೧೮ ಸಲುವ ಶ್ರಾವಣ ಕೃಷ್ಣ ೧೨ಯು ರವಿವಾರ ೩೧||| ಪುಷ್ಯ ೫೧| ವರಿಯಾನ್ ೩೩| ಕೌಲವಾ ೫||| ವಿಷ ೧೫|| ಅಮೃತ ೩೭ ೦೦ ತಾ ೪-೯-೧೯೮೩ ಅಯನಾಂಶ ೨೩ ೩೭ ೨೮ ದಿವಾ ಮಾನ ೩೦ ೪೬ ಅಕ್ಷಾಂಶ ೧೨ ೫೮ ರೇಖಾಂಶ ೭೪ ೫೦ ಏವಂ ಉದಯ ಪಂಚಾಂಗ ಶುದ್ಧಿಃ ಈ ಶುಭ ದಿವಸ ಸೂರ್ಯೋದಯಾದಿ ಘಟಿ ೧ ವಿಘಟಿ ೪೯ (ಬೆಳಿಗ್ಗೆ ಘಂಟೆ ೭ ೩ ಎ ಎಂ )ಕ್ಕೆ ಸರಿಯಾದ ಸಿಂಹಲಗ್ನ ಅಂತ್ಯ ದ್ರೇಕ್ಕಾಣದಲ್ಲಿ ಸ್ತ್ರೀ ಶುಭ ಜನನ.

**॥ ನವೀನ ದೃಕ್ ಸಿದ್ಧಾಂತ ಪ್ರಕಾರ ಗ್ರಹಸ್ಫುಟಾದಿಗಳು ॥**

| | ರಾಶಿ | ಭಾಗ | ಕಲಾ | ವಿಕಲಾ |
|---|---|---|---|---|
| ರವಿ | ೪ | ೧೭ | ೨೦ | ೪೭ |
| ಚಂದ್ರ | ೩ | ೪ | ೨೨ | ೪೦ |
| ಕುಜ | ೩ | ೨೦ | ೧ | ೩೫ |
| ವಕ್ರಿ ಬುಧ | ೫ | ೬ | ೫೬ | ೩೦ |
| ಗುರು | ೭ | ೯ | ೨೫ | ೩೪ |
| ವಕ್ರಿ ಶುಕ್ರ | ೪ | ೨ | ೧೪ | ೨೫ |
| ಶನಿ | ೬ | ೭ | ೧೬ | ೫೮ |
| ರಾಹು | ೧ | ೨೭ | ೧೨ | ೪೦ |
| ಕೇತು | ೭ | ೨೭ | ೧೨ | ೪೦ |
| ಲಗ್ನ | ೪ | ೨೮ | ೨೪ | ೩೫ |
| ಮಾಂದಿ | ೯ | ೧೬ | ೩೫ | ೨೪ |

ಚಂದ್ರಸ್ಫುಟಾನುಸಾರ ಜನ್ಮಾದಿ ಶನಿ ಮಹರ್ದಶಾ ಏಷ್ಯ ವರ್ಷ ೧೭ ಮಾಸ ೬ ದಿನ ೧೦ ನಂತರ ಬುಧದಶಾ.

| ಲಗ್ನಾದಿ ದ್ವಾದಶ ಭಾವ ಸ್ಫುಟಗಳು | | | | | ಲಗ್ನಾದಿ ದ್ವಾದಶ ಭಾವ ಸಂಧಿಗಳು | | | | |
|---|---|---|---|---|---|---|---|---|---|
| | ರಾಶಿ | ಭಾಗ | ಕಲಾ | ವಿಕಲಾ | | ರಾಶಿ | ಭಾಗ | ಕಲಾ | ವಿಕಲಾ |
| ಲಗ್ನ | ೪ | ೨೮ | ೨೪ | ೩೫ | ಲಗ್ನದ್ವಿತೀಯ | ೫ | ೧೩ | ೩೯ | ೦ |
| ದ್ವಿತೀಯ | ೫ | ೨೮ | ೩೫ | ೨೫ | ದ್ವಿತೀಯ ತೃತೀಯ | ೬ | ೧೪ | ೭ | ೫೦ |
| ತೃತೀಯ | ೬ | ೨೯ | ೨೨ | ೧೫ | ತೃತೀಯ ಚತುರ್ಥ | ೭ | ೧೪ | ೩೨ | ೧೫ |
| ಚತುರ್ಥ | ೭ | ೨೯ | ೪೨ | ೧೫ | ಚತುರ್ಥ ಪಂಚಮ | ೮ | ೧೪ | ೩೨ | ೧೫ |
| ಪಂಚಮ | ೮ | ೨೯ | ೨೨ | ೧೫ | ಪಂಚಮ ಷಷ್ಠ | ೯ | ೧೪ | ೭ | ೫೦ |
| ಷಷ್ಠ | ೯ | ೨೮ | ೫೩ | ೨೫ | ಷಷ್ಠ ಸಪ್ತಮ | ೧೦ | ೧೩ | ೩೯ | ೦ |
| ಸಪ್ತಮ | ೧೦ | ೨೮ | ೨೪ | ೩೫ | ಸಪ್ತಮ ಅಷ್ಟಮ | ೧೧ | ೧೩ | ೩೯ | ೦ |
| ಅಷ್ಟಮ | ೧೧ | ೨೮ | ೩೫ | ೨೫ | ಅಷ್ಟಮ ನವಮ | ೦ | ೧೪ | ೭ | ೫೦ |
| ನವಮ | ೦ | ೨೯ | ೨೨ | ೧೫ | ನವಮ ದಶಮ | ೧ | ೧೪ | ೩೨ | ೧೫ |
| ದಶಮ | ೧ | ೨೯ | ೪೨ | ೧೫ | ದಶಮ ಏಕಾದಶ | ೨ | ೧೪ | ೩೨ | ೧೫ |
| ಏಕಾದಶ | ೨ | ೨೯ | ೨೨ | ೧೫ | ಏಕಾದಶ ವ್ಯಯ | ೩ | ೧೪ | ೭ | ೫೦ |
| ವ್ಯಯ | ೩ | ೨೮ | ೫೩ | ೨೫ | ವ್ಯಯ ಲಗ್ನ | ೪ | ೧೩ | ೩೯ | ೦ |

<table>
<tr><td>ಶ್ರೀ</td><td>ಶ್ರೀ</td><td>ರಾಹು ೬</td><td>ಶ್ರೀ</td></tr>
<tr><td>ಶ್ರೀ</td><td colspan="2" rowspan="2">॥ ನವಾಂಶಯುಕ್ರ<br>ಗ್ರಹ ಕುಂಡಲಿ ॥</td><td>ಚಂದ್ರ ೫<br>ಕುಜ ೧೦</td></tr>
<tr><td>ಮಾಂದಿ ೨</td><td>ಲಗ್ನ ೯<br>ರವಿ ೬<br>ವ ಶುಕ್ರ ೧</td></tr>
<tr><td>ಶ್ರೀ</td><td>ಗುರು ೬<br>ಕೇತು ೧೨</td><td>ಶನಿ ೯</td><td>ವ ಬುಧ ೧೨</td></tr>
</table>

ಉದಯತಿ ಮೃದುಭಾಂಶೇ ಸಪ್ತಮಸ್ಥೇ ಚ ಮಂದೇ ।
ಯದಿ ಭವತಿ ನಿಷೇಕಃ ಸೂತಿರಬ್ದ ತ್ರಯೇಣ ॥
ಶಶಿನಿತು ವಿಧಿರೇಷ ದ್ವಾದಶೇಽಬ್ದೇ ಪ್ರಕುರ್ಯಾ ।
ನ್ನಿಗದಿತ ಮಿಹಚಿಂತ್ಯಂ ಸೂತಿಕಾಲೇಪಿ ಯುಕ್ತ್ಯಾ ॥೨೨॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ನಿಷೇಕಾಖ್ಯವಿಚಾರ ನಿರೂಪಣಂ ನಾಮ ಚತುರ್ಥೋಽಧ್ಯಾಯಃ ॥

ಯಾವ ಲಗ್ನಕ್ಕಾದರೂ ಶನಿರಾಶಿಗಳಾದ ಮಕರ ಕುಂಭ ನವಾಂಶಗಳು ಲಗ್ನಕ್ಕೆ ಬಂದು ಶನಿ ಸಪ್ತಮದಲ್ಲಿದ್ದರೆ ಗರ್ಭಿಣಿ ಸ್ತ್ರೀಯಳು ಮೂರು ವರ್ಷದಲ್ಲಿ ಪ್ರಸೂತಿಯಾಗುವಳು ಯಾವ ಲಗ್ನದಲ್ಲಾದೂ ಕರ್ಕಾಟಕ ನವಾಂಶವು ಗರ್ಭಾದಾನ ಲಗ್ನಕ್ಕೆ ಬಂದು ಚಂದ್ರನಿಂದ ನೋಡಲ್ಪಟ್ಟರೆ ಆ ಕಾಲದಲ್ಲಿ ಗರ್ಭ ಧರಿಸಿದವಳು ಹನ್ನೆರಡು ವರ್ಷದಲ್ಲಿ ಪ್ರಸೂತಿಯಾಗುವಳೆಂದು ತಿಳಿಯ ತಕ್ಕದ್ದು. ಈ ನಿಷೇಕಾಧ್ಯಾಯದಲ್ಲಿ ಹೇಳಿದ ಎಲ್ಲಾ ಯೋಗಗಳು ನಿಷೇಕ ಕಾಲವಲ್ಲದೆ ಜನ್ಮಕಾಲ ದಲ್ಲಿಯೂ ಯುಕ್ತಿಯಿಂದ ವಿಚಾರ ಮಾಡಿ ಬಲಾಬಲಗಳನ್ನರಿತು ಹೀನಾಂಗಾದಿ ವಿಷಯಗಳನ್ನು ಚಿಂತಿಸಿ ಹೇಳತಕ್ಕದ್ದು.

॥ ನಿಷೇಕವೆಂಬ ನಾಲ್ಕನೆಯ ಅಧ್ಯಾಯವು ॥

## ॥ ಜನ್ಮಲಕ್ಷಣಾಧ್ಯಾಯಃ ॥

**ಪಿತುರ್ಜಾತಃ ಪರೋಕ್ಷಸ್ಯ ಲಗ್ನಮಿಂದಾವ ಪಶ್ಯತಿ ।**
**ವಿದೇಶಸ್ಥಸ್ಯ ಚರಭೇ ಮಧ್ಯಾದ್ಭ್ರಷ್ಟೇ ದಿವಾಕರೇ ॥೧॥**

ಜನ್ಮಲಗ್ನವನ್ನು ಚಂದ್ರನು ನೋಡದಿದ್ದರೆ ತಂದೆಯು ಸಮೀಪದಲ್ಲಿಲ್ಲದಾಗ ಮಗುವು ಜನ್ಮಿಸಿದವನೆಂದು ತಿಳಿಯಬೇಕು. ಆ ಕಾಲದಲ್ಲಿ ರವಿಯು ದಶಮದಿಂದ ಹಿಂದೆ ಅಥವಾ ಮುಂದೆ ಚರರಾಶಿಯಲ್ಲಿದ್ದರೆ ಮಗುವಿನ ತಂದೆಯು ವಿದೇಶದಲ್ಲಿ ಇದ್ದನೆಂದೂ ಸ್ಥಿರರಾಶಿಯಲ್ಲಿದ್ದರೆ ಊರಿನಲ್ಲಿದ್ದು ತಂದೆಯು ಸಮೀಪದಲ್ಲಿರಲಿಲ್ಲವೆಂದೂ ದ್ವಿಸ್ವಭಾವ ರಾಶಿಯಲ್ಲಿದ್ದರೆ ಎಲ್ಲಿಗೋ ಹೋದವನು ಮಧ್ಯಮಾರ್ಗದಲ್ಲಿದ್ದನೆಂದೂ ತಿಳಿಯಬೇಕು.

**ಉದಯಸ್ಥೇಽಪಿ ವಾ ಮಂದೇ ಕುಜಾವಾಸ್ತಂ ಸಮಾಗತೇ ।**
**ಸ್ಥಿತೇವಾಂಽತಃ ಕ್ಷಪಾನಾಥೇ ಶಶಾಂಕಸುತ ಶುಕ್ರಯೋಃ ॥೨॥**

ಜನ್ಮಲಗ್ನದಲ್ಲಿ ಶನಿ ಇದ್ದರೂ, ಅಥವಾ ಸಪ್ತಮದಲ್ಲಿ ಕುಜನಿದ್ದರೂ, ಅಲ್ಲದೆ ಬುಧ ಶುಕ್ರರ ಮಧ್ಯದಲ್ಲಿ ಚಂದ್ರನಿದ್ದರೂ (ಚಂದ್ರನ ಹಿಂದೆ ಮುಂದೆ ಬುಧ ಶುಕ್ರರಿದ್ದರೂ) ತಂದೆಯು ಸಮೀಪದಲ್ಲಿಲ್ಲದಾಗ ಜನನವೆಂದು ತಿಳಿಯಬೇಕು

**ಶಶಾಂಕೇ ಪಾಪಲಗ್ನೇ ವಾ ವೃಶ್ಚಿಕೇಶ ತ್ರಿಭಾಗಗೇ ।**
**ಶುಭೈಃ ಸ್ವಾಯಸ್ಥಿತೈರ್ಜಾತಃ ಸರ್ಪಸ್ತದ್ವೇಷ್ಟಿತೋಽಪಿ ವಾ ॥೩॥**

ಜನ್ಮಕಾಲದಲ್ಲಿ ಚಂದ್ರನು ಕುಜ ದ್ರೇಕ್ಕಾಣದಲ್ಲಿದ್ದು, ದ್ವಿತೀಯ ಏಕಾದಶ ಸ್ಥಾನಗಳಲ್ಲಿ ಶುಭ ಗ್ರಹರಿದ್ದರೂ ಸರ್ಪಜನನವೆಂದೂ ಪಾಪಗ್ರಹರ ಲಗ್ನವಾಗಿ ಕುಜನ ದ್ರೇಕ್ಕಾಣವಾಗಿದ್ದು ದ್ವಿತೀಯ ಏಕಾದಶದಲ್ಲಿ ಶುಭಗ್ರಹರಿದ್ದರೆ ಸರ್ಪವೇಷ್ಟಿತವಾಗಿ ಮಗುವಿನ ಜನ್ಮವೆಂದು ಹೇಳತಕ್ಕದ್ದು ಈ ಯೋಗ ಪ್ರಶ್ನಕಾಲದಲ್ಲಿದ್ದರೂ ಹೇಳಬಹುದು.

**ಚತುಷ್ಪದ ಗತೇ ಭಾನೌ ಶೇಷೈರ್ವೀರ್ಯ ಸಮನ್ವಿತೈಃ ।**
**ದ್ವಿತನುಸ್ಥೈಶ್ಚ ಯಮಳೌ ಭವತಃ ಕೋಶವೇಷ್ಟಿತೌ ॥೪॥**

ಜನ್ಮಕಾಲದಲ್ಲಿ ಚತುಷ್ಪಾದ ರಾಶಿಗಳಾದ ಮೇಷ, ವೃಷಭ, ಸಿಂಹ, ಧನು ಅಪರಾರ್ಧ, ಮಕರ ಪೂರ್ವಾರ್ಧದಲ್ಲಿ ರವಿ ಇದ್ದು, ಬಾಕಿ ಉಳಿದ ಗ್ರಹರು ದ್ವಿಸ್ವಭಾವಗಳಾದ ಮಿಥುನ, ಕನ್ಯಾ, ಧನು, ಮೀನ, ರಾಶಿಗಳಲ್ಲಿ ಬಲಿಷ್ಠರಾಗಿದ್ದರೆ ಕೋಶವೇಷ್ಟಿತ ಅಂದರೆ ಎರಡು ಮಕ್ಕಳು ಜನನವಾಗುವುದೆಂದು ಹೇಳತಕ್ಕದ್ದು.

**ಛಾಗಸಿಂಹ ವೃಷೇಲಗ್ನೇತತ್‌ಸ್ಥೇ ಸೌರೇಥವಾ ಕುಜೇ ।**
**ರಾಶ್ಯಂಶ ಸದೃಶೇಗಾತ್ರೇ ಜಾಯತೇ ನಾಳವೇಷ್ಟಿತಃ ॥೫॥**

ಜನ್ಮಕಾಲದಲ್ಲಿ ಮೇಷ, ಸಿಂಹ, ವೃಷಭಗಳಲ್ಲಿ ಯಾವುದಾದರೂ ಒಂದು ಲಗ್ನವಾಗಿ ಅಲ್ಲಿ ಶನಿಯಾಗಲಿ ಕುಜನಾಗಲಿ ಇದ್ದರೆ ಜನ್ಮಲಗ್ನದಲ್ಲಿ ಜನನಕಾಲಕ್ಕೆ ಯಾವ ನವಾಂಶವಾಗಿರುವುದೋ ಆ ನವಾಂಶರಾಶಿಗೆ "ಕಾಲಾಂಗಾನಿ ವರಾಂಗ" ಎಂಬಂತೆ ಹೇಳಿದ ಅವಯವದಲ್ಲಿ ನಾಳವೇಷ್ಟಿತ ವಾಗಿ ಶಿಶುವಿನ ಜನನವಾಗುವುದೆಂದು ಹೇಳತಕ್ಕದ್ದು

**ನ ಲಗ್ನಮಿಂದುಂ ಚ ಗುರುರ್ನಿರೀಕ್ಷಿತೇ ।**
**ನ ವಾ ಶಶಾಂಕಂ ರವಿಣಾ ಸಮಾಗತಮ್ ॥**
**ಸ ಪಾಪಕೋಽರ್ಕೇಣ ಯುತೋಽಥವಾಶಶೀ ।**
**ಪರೇಣ ಜಾತಂ ಪ್ರವದಂತಿ ನಿಶ್ಚಯಾತ್ ॥೬॥**

ಜನ್ಮಕಾಲದ ಲಗ್ನಕ್ಕಾಗಲಿ ಚಂದ್ರನಿಗಾಗಲಿ ಗುರುದೃಷ್ಟಿ ಇಲ್ಲದಿದ್ದರೂ ಅಥವಾ ಸೂರ್ಯ ಚಂದ್ರರು ಒಂದೇ ರಾಶಿಯಲ್ಲಿದ್ದು ಗುರುವಿನಿಂದ ನೋಡಲ್ಪಡದಿದ್ದರೂ ಚಂದ್ರನಿಗೆ ಪಾಪಗ್ರಹರ ಯೋಗವಾಗಿ ಅಲ್ಲಿಯೇ ಸೂರ್ಯನಿದ್ದರೂ ಆ ಕಾಲದಲ್ಲಿ ಹುಟ್ಟಿದವನು ತನ್ನ ಪತಿಯಲ್ಲದೆ ಅನ್ಯ ಪುರುಷನಿಂದ ಹುಟ್ಟಿದವನೆಂದು ಹೇಳುತ್ತಾರೆ. ಆದರೆ ಚಂದ್ರನು ಗುರು ಕ್ಷೇತ್ರದಲ್ಲಿದ್ದರೂ ಅಥವಾ ಲಗ್ನ ಚಂದ್ರರಿಗೆ ಗುರುವಿನ ದ್ರೇಕ್ಕಾಣ, ನವಾಂಶ, ದ್ವಾದಶಾಂಶ ತ್ರಿಂಶಾಂಶಗಳಿದ್ದರೂ, ಪರಜಾತನಲ್ಲವೆಂತ ತಿಳಿಯತಕ್ಕದ್ದು.

**ಕ್ರೂರರ್ಕ್ಷ ಗತಾವಶೋಭನೌ ಸೂರ್ಯಾದ್ದ್ಯೂನ ನವಾತ್ಮಜಸ್ಥಿತೌ ।**
**ಬದ್ಧಸ್ತು ಪಿತಾ ವಿದೇಶಗಃ ಸ್ವೇವಾ ರಾಶಿವಶಾದಥೋಪಥಿ ॥೭॥**

ಜನ್ಮಕಾಲದಲ್ಲಿ ಸೂರ್ಯನಿಂದ ಸಪ್ತಮ, ನವಮ, ಪಂಚಮ ಸ್ಥಾನಗಳು ಕ್ರೂರ ಕ್ಷೇತ್ರಗಳಾದ ಮೇಷ, ಸಿಂಹ, ವೃಶ್ಚಿಕ, ಮಕರ, ಕುಂಭಗಳಾಗಿ ಎರಡು ಪಾಪಗ್ರಹಗಳಿದ್ದರೆ ಸೂರ್ಯನಿರುವ ರಾಶಿಗಳಿಗೆ ಅನುಕ್ರಮವಾಗಿ ಚರರಾಶಿಯಲ್ಲಿದ್ದರೆ ವಿದೇಶದಲ್ಲಿ, ಸ್ಥಿರರಾಶಿಯಲ್ಲಿದ್ದರೆ ಸ್ವದೇಶದಲ್ಲಿ ದ್ವಿಸ್ವಭಾವರಾಶಿಯಲ್ಲಿದ್ದರೆ ಮಾರ್ಗಮಧ್ಯದಲ್ಲಿ, ಮಗುವಿನ ತಂದೆಯು ಬಂಧನದಲ್ಲಿ (ಕಾರಾಗ್ರಹ ಮುಂತಾಗಿ)ದ್ದಾನೆಂದು ತಿಳಿಯತಕ್ಕದ್ದು.

**ಪೂರ್ಣೇ ಶಶಿನಿ ಸ್ವರಾಶಿಗೇ ಸೌಮ್ಯೇ ಲಗ್ನಗತೇ ಶುಭೇ ಸುಖೇ ।**
**ಲಗ್ನೇ ಜಲಜೇಸ್ತಗೇಽಪಿವಾ ಚಂದ್ರೇ ಪೋತಗತಾ ಪ್ರಸೂಯತೇ ॥೮॥**

ಜನ್ಮಕಾಲದಲ್ಲಿ ಪೂರ್ಣಚಂದ್ರನು ಕರ್ಕಾಟಕದಲ್ಲಿದ್ದು, ಲಗ್ನದಲ್ಲಿ ಬುಧನೂ ಚತುರ್ಥದಲ್ಲಿ ಸೌಮ್ಯಗ್ರಹರಾದ ಗುರು ಅಥವಾ ಶುಕ್ರ ಇದ್ದರೂ ಮತ್ತು ಜಲರಾಶಿಗಳಾದ ಕರ್ಕಾಟಕ, ಮಕರ,

ಉತ್ತರಾರ್ಧ ಮೀನ ಇವುಗಳಲ್ಲಿ ಯಾವುದಾದರೂ ಒಂದು ಲಗ್ನವಾಗಿ ಸಪ್ತಮದಲ್ಲಿ ಚಂದ್ರನಿದ್ದರೂ ಹಡಗು ಇತ್ಯಾದಿ ಜಲಯಾನದಲ್ಲಿ ಮಗುವಿನ ಜನ್ಮವಾಗುವುದು

**ಆಪ್ಯೋದಯ ಮಾಪ್ಯಗಃ ಶಶೀ ಸಂಪೂರ್ಣ ಸಮವೇಕ್ಷತೇಽಥವಾ ।**
**ಮೇಷೂರಣ ಬಂಧು ಲಗ್ನಗಾ ಸ್ಯಾತ್ಪೂಸತಿಃ ಸಲಿಲೇನ ಸಂಶಯಃ ॥೯॥**

ಜನ್ಮಕಾಲದಲ್ಲಿ ಲಗ್ನ ಮತ್ತು ಚಂದ್ರ ಈ ಎರಡೂ ಜಲರಾಶಿಯಾದರೂ ಅಥವಾ ಲಗ್ನವು ಜಲರಾಶಿಯಾಗಿದ್ದು ಲಗ್ನಕ್ಕೆ ಪೂರ್ಣಚಂದ್ರನ ದೃಷ್ಟಿ ಇದ್ದರೂ, ಅಥವಾ ಜಲರಾಶಿಯಲ್ಲಿರುವ ಚಂದ್ರನು ದಶಮ, ಚತುರ್ಥ, ಲಗ್ನ ಈ ಸ್ಥಾನಗಳಲ್ಲಿ ಯಾವುದಾದರೊಂದು ಸ್ಥಾನದಲ್ಲಿದ್ದರೆ ಜಲಸಮೀಪದಲ್ಲಿ ಜನನವಾಗುವುದು. ಇದರಲ್ಲಿ ಸಂಶಯವಿಲ್ಲ

**ಉದಯೋಡುಪಯೋರ್ವ್ಯಯಸ್ಥಿತೇ ಗುಪ್ತ್ಯಾಂ ಪಾಪನಿರೀಕ್ಷಿತೇ ಯಮೇ ।**
**ಅಳಿಕರ್ಕಿಯುತೇ ವಿಲಗ್ನಗೇ ಸೌರೇಶೀತಕರೇಕ್ಷಿತೇಽವಟೇ ॥೧೦॥**

ಜನ್ಮಕಾಲದಲ್ಲಿ ಲಗ್ನ, ಚಂದ್ರರಿಗೆ ವ್ಯಯದಲ್ಲಿ ಶನಿಯು ಪಾಪದೃಷ್ಟನಾಗಿದ್ದರೆ ತಾಯಿಯು ಬಂಧನದಲ್ಲಿರುವಾಗ ಪ್ರಸವವೆಂದು ತಿಳಿಯಬೇಕು. (ಇಲ್ಲಿ ಪ್ರತಿದಿವಸ ಉಪಯೋಗ ಮಾಡ ದಿರುವ ಕತ್ತಲೆಯ ಕೋಣೆಯಾದರೂ ಆಗಬಹುದು ) ಮತ್ತು ವೃಶ್ಚಿಕ ಅಥವಾ ಕರ್ಕಾಟಕ ಲಗ್ನವಾಗಿ ಅಲ್ಲಿ ಶನಿ ಇದ್ದು ಚಂದ್ರದೃಷ್ಟಿ ಇದ್ದರೆ ಗುಹೆಯೊಳಗೆ ಅಥವಾ ಗುಹೆಯಂತೆ ಕತ್ತಲೆಯೊಳಗೆ ಪ್ರಸವವೆಂದು ತಿಳಿಯತಕ್ಕದ್ದು.

**ಮಂದೇಽಬ್ಜಗತೇ ವಿಲಗ್ನಗೇ ಬುಧಸೂರ್ಯೇಂದು ನಿರೀಕ್ಷಿತೇ ಕ್ರಮಾತ್ ॥**
**ಕ್ರೀಡಾಭವನಂ ಸುರಾಲಯಂ ಪ್ರಸವೇಸೋಷರ ಭೂಮಿಮಾದಿಶೇತ್ ॥೧೧॥**

ಜನ್ಮಕಾಲದಲ್ಲಿ ಜಲರಾಶಿಗಳಾದ ಕರ್ಕಾಟಕ, ಮಕರ, ಉತ್ತರಾರ್ಧ ಮೀನ ಇವುಗಳಲ್ಲಿ ಯಾವು ದಾದರೊಂದು ಲಗ್ನವಾಗಿ ಶನಿ ಇದ್ದು ಬುಧನಿಂದ ನೋಡಲ್ಪಟ್ಟರೆ ಕ್ರೀಡಾ ಮಂದಿರದಲ್ಲಿಯೂ ರವಿಯಿಂದ ನೋಡಲ್ಪಟ್ಟರೆ ದೇವಾಲಯ ಪ್ರಾಕಾರಗಳಲ್ಲಿಯೂ ಚಂದ್ರನಿಂದ ನೋಡಲ್ಪಟ್ಟರೆ ಬೆಳೆ ಮಾಡಲು ಸಾಧ್ಯತೆ ಇಲ್ಲದ ಸೋಷರ ಭೂಮಿಯಲ್ಲಿಯೂ ಪ್ರಸವವೆಂದು ಹೇಳಲ್ಪಡ ತಕ್ಕದ್ದು

**ನೃಲಗ್ನಗಂ ಪ್ರೇಕ್ಷ್ಯಕುಜಃ ಸ್ಮಶಾನೇ ।**
**ರಮ್ಯೇಸಿತೇಂದು ಗುರುರಗ್ನಿ ಹೋತ್ರೇ ॥**
**ರವಿರ್ನರೇಂದ್ರಾ ಮರಗೋಕುಲೇಷು ।**
**ಶಿಲ್ಪಾಲಯೇಜ್ಞಃ ಪ್ರಸವಂಕರೋತಿ ॥೧೨॥**

ಜನ್ಮಕಾಲದಲ್ಲಿ ನರರಾಶಿಗಳಾದ ಮಿಥುನ, ಕನ್ಯಾ, ತುಲಾ, ಧನುವಿನ ಪೂರ್ವಾರ್ಧ, ಕುಂಭಗಳಲ್ಲಿ ಯಾವುದಾದರೂ ಒಂದು ಲಗ್ನವಾಗಿ ಶನಿಯಿಂದ ಕೂಡಿದ್ದು ಕುಜನಿಂದ ನೋಡಲ್ಪಟ್ಟರೆ ಸ್ಮಶಾನ ದಲ್ಲಿಯೂ, ಚಂದ್ರ ಶುಕ್ರರ ದೃಷ್ಟಿ ಇದ್ದರೆ ರಮ್ಯ ಸ್ಥಾನದಲ್ಲಿಯೂ, ಗುರುದೃಷ್ಟಿ ಇದ್ದರೆ ಅಗ್ನಿಹೋತ್ರವಿರುವ ಭೂಮಿಯಲ್ಲಿಯೂ, ಅಥವಾ ಮನೆಯಲ್ಲಿಯೂ, ರವಿ ದೃಷ್ಟಿ ಇದ್ದರೆ ರಾಜಭವನ, ದೇವಾಲಯ, ಗೋಶಾಲೆಯಲ್ಲಿಯೂ, ಬುಧದೃಷ್ಟಿ ಇದ್ದರೆ ಶಿಲ್ಪಶಾಲೆಯಲ್ಲಿ ಅಥವಾ ಮೂರ್ತಿಗಳಿರುವ ಸ್ಥಳಗಳಲ್ಲಿಯೂ ಪ್ರಸವವೆಂದು ಹೇಳತಕ್ಕದ್ದು. ಈ ವಿಷಯ ನಷ್ಟ ಪ್ರಶ್ನೆಗಳಲ್ಲಿ ಅತೀ ಉಪಯೋಗವಾಗುವುದು

> **ರಾಶ್ಯಂಶ ಸಮಾನಗೋಚರೇ ।**
> **ಮಾರ್ಗೇ ಜನ್ಮಚರೇ ಸ್ಥಿರೇ ಗೃಹೇ ॥**
> **ಸ್ವರ್ಕ್ಷಾಂಶ ಗತೇಸ್ವ ಮಂದಿರೇ ।**
> **ಬಲಯೋಗಾತ್ ಫಲಮಂಶ ಕರ್ಕ್ಷಯೋಃ ॥೧೩॥**

ಜನ್ಮಕಾಲದಲ್ಲಿ ಲಗ್ನರಾಶಿ ಮತ್ತು ನವಾಂಶರಾಶಿ ಇವೆರಡರಲ್ಲಿ ಯಾವುದಕ್ಕೆ ಬಲ ಜಾಸ್ತಿ ಇರುವುದೋ ಆ ರಾಶಿಯ ಸಂಚಾರ ಸ್ಥಳ ಮುಂತಾದ ಗುಣಗಳಿಗನುಸಾರವಾಗಿಯೂ ಅದು ಚರರಾಶಿಯಾಗಿದ್ದರೆ ಮಾರ್ಗದಲ್ಲಿಯೂ ಸ್ಥಿರರಾಶಿಯಾಗಿದ್ದರೆ ಮನೆಯಲ್ಲಿಯೂ ವರ್ಗೋತ್ತಮ ವ ಸ್ವನವಾಂಶವಾಗಿದ್ದರೆ ಸ್ವಂತ ಮನೆಯಲ್ಲಿಯೂ ಪ್ರಸವ ಸ್ಥಳವನ್ನು ಹೇಳತಕ್ಕದ್ದು.

> **ಆರಾರ್ಕಜಯೋ ಸ್ತ್ರೀ ಕೋಣಗೇ ।**
> **ಚಂದ್ರಕೇಚ ವಿಸೃಜ್ಯತೇಂಬಯಾ ॥**
> **ದೃಷ್ಟೇ ಮರರಾಜ ಮಂತ್ರಿಣಾ ।**
> **ದೀರ್ಘಾಯುಃ ಸುಖಭಾಕ್ಚಸ ಸ್ಮೃತಃ ॥೧೪॥**

ಜನ್ಮಕಾಲದಲ್ಲಿ ಶನಿ ಕುಜರು ಒಂದೇ ರಾಶಿಯಲ್ಲಿದ್ದು ಅವರ ತ್ರಿಕೋಣವಾದ ಪಂಚಮ ನವಮ ದಲ್ಲಿ ರವಿ ಚಂದ್ರರಿದ್ದರೆ ತಾಯಿಯು ಹುಟ್ಟಿದ ಮಗುವನ್ನು ತ್ಯಜಿಸಿ ಬಿಡುವಳೆಂದು ಹೇಳಲ್ಪಟ್ಟಿದೆ. (ಇಲ್ಲಿ ಶನಿ ಕುಜರ ೫.೯ರಲ್ಲಿ ರವಿ ಇದ್ದರೂ ಅಥವಾ ಚಂದ್ರನಿದ್ದರೂ ಎಂತ ಬೇರೆಬೇರೆಯಾಗಿ ಹೇಳುತ್ತಾರೆ ಮತ್ತು ಶನಿ ಕುಜರ ೫-೯-೭ರಲ್ಲಿ ಚಂದ್ರನಿದ್ದರೆ ಎಂತ ಪಾಠಾಂತರವಿದೆ.) ಚಂದ್ರನ ಮೇಲೆ ಗುರುದೃಷ್ಟಿ ಇದ್ದರೆ ತಾಯಿಯಿಂದ ತ್ಯಜಿಸಲ್ಪಟ್ಟ ಮಗುವು ದೀರ್ಘಾಯುವಾಗಿ ಸುಖವನ್ನು ಪಡೆಯುವುದೆಂದು ತಿಳಿಯತಕ್ಕದ್ದು. ಈ ಯೋಗಗಳನ್ನು ವಿಚಾರ ಮಾಡಿ ಹೇಳಬೇಕು.

> **ಪಾಪೇಕ್ಷಿತೇ ತುಹಿನಗಾವುದಯೇ ಕುಜೇಽಸ್ತೇ ।**
> **ತ್ಯಕ್ತೋಽವಿನಸ್ಯತಿ ಕುಜಾರ್ಕ ಜಯೋಸ್ತಥಾಯೇ ॥**
> **ಸೌಮ್ಯೇಽಪಿ ಪಶ್ಯತಿ ತಥಾವಿಧಿ ಹಸ್ತಮೇತಿ ।**
> **ಸೌಮ್ಯೇತರೇಷು ಪರಹಸ್ತ ಗತೋಽಪ್ಯನಾಯುಃ ॥೧೫॥**

ಜನ್ಮಕಾಲದಲ್ಲಿ ಚಂದ್ರನು ಪಾಪಗ್ರಹರಿಂದ ನೋಡಲ್ಪಟ್ಟು ಲಗ್ನದಲ್ಲಿದ್ದು ಕುಜನು ಸಪ್ತಮದಲ್ಲಿದ್ದರೆ ತಾಯಿಯಿಂದ ಬಿಡಲ್ಪಟ್ಟ ಮಗುವು ಮೃತಿಯನ್ನು ಹೊಂದುವುದು. ಶನಿ ಕುಜರು ಏಕಾದಶದಲ್ಲಿದ್ದು ಲಗ್ನದಲ್ಲಿರುವ ಚಂದ್ರನನ್ನು ಸೌಮ್ಯಗ್ರಹಗಳು ನೋಡಿದಲ್ಲಿ ಆ ಸೌಮ್ಯಗ್ರಹರಿಗೆ ಹೇಳಿದ ಬ್ರಾಹ್ಮಣಾದಿ ವರ್ಣದವರಲ್ಲಿ ಹೋಗಿ ಸೇರುವುದು ಆದರೆ ಆ ಚಂದ್ರನ ಮೇಲೆ ಪಾಪಗ್ರಹರ ದೃಷ್ಟಿ ಇದ್ದರೆ—ಬೇರೆಯವರ ಕೈಗೆ ಸಿಕ್ಕಿದರೂ ಆಯುಷ್ಯವಿಲ್ಲದೆ ನಾಶವಾಗುವುದು.

**ಪಿತೃಮಾತೃ ಗೃಹೇಷು ತದ್ಬಲಾತ್ತರು ಸಾಲಾದಿಷು ನೀಚಗೈಃ ಶುಭೈಃ ।**
**ಯದಿ ನೈಕಗತೈಸ್ತುವೀಕ್ಷಿತೌ ಲಗ್ನೇಂದೂ ವಿಜನೇ ಪ್ರಸೂಯತೇ ॥೧೬॥**

ಪ್ರಸವಕಾಲದಲ್ಲಿ (ನಾಲ್ಕನೆ ಅಧ್ಯಾಯದ ಐದನೆ ಶ್ಲೋಕದಲ್ಲಿ ಹೇಳಿದಂತೆ) ಪಿತೃ, ಮಾತೃ ಸಂಜ್ಞಕರಾದ ಗ್ರಹರ ಬಲಾಬಲವನ್ನು ನೋಡಿ ಪಿತೃಸಂಜ್ಞಕ ಗ್ರಹವು ಬಲಶಾಲಿಯಾಗಿದ್ದರೆ ತಂದೆಯ ಮನೆಯಲ್ಲಿಯೂ, ಮಾತೃಕಾರಕ ಗೃಹವು ಬಲಶಾಲಿಯಾಗಿದ್ದರೆ ತಾಯಿಯ ಮನೆಯಲ್ಲಿಯೂ, ಹಗಲಿನಲ್ಲಿ ಶನಿ ಬಲಶಾಲಿಯಾಗಿದ್ದರೆ ದೊಡ್ಡಪ್ಪ ಚಿಕ್ಕಪ್ಪನ ಮನೆಯಲ್ಲಿಯೂ, ಹಗಲಿನಲ್ಲಿ ಚಂದ್ರನು ಬಲವಂತನಾಗಿದ್ದರೆ ದೊಡ್ಡಮ್ಮ ಚಿಕ್ಕಮ್ಮನವರಲ್ಲಿಯೂ, ರಾತ್ರಿಯಲ್ಲಿ ಸೂರ್ಯನಾದರೆ ಸೋದರಮಾವ, ರಾತ್ರಿಯಲ್ಲಿ ಶುಕ್ರನಾದರೆ ಸೋದರ ಅತ್ತೆ ಮುಂತಾದವರ ಮನೆಗಳಲ್ಲಿ ಪ್ರಸವವೆಂದು ಹೇಳತಕ್ಕದ್ದು. ಹಾಗೆಯೇ ಎಲ್ಲಾ ಶುಭಗ್ರಹಗಳು ನೀಚರಾಗಿದ್ದರೆ ಮರಗಳ ಸಮೀಪದಲ್ಲಿ ಅಥವಾ ಪರ್ವತ, ನದೀ, ಪ್ರಾಕಾರಾದಿಗಳ ಸಮೀಪ ಸ್ಥಳದಲ್ಲಿ ಜನನವೆಂದು ಹೇಳತಕ್ಕದ್ದು. ಶುಭಗ್ರಹಗಳು ನೀಚರಾಗಿ ಒಂದೇ ರಾಶಿಯಲ್ಲಿ ಲಗ್ನಚಂದ್ರರಿದ್ದು ಶುಭಗ್ರಹಗಳ ದೃಷ್ಟಿ ಇಲ್ಲದಿದ್ದರೆ ಜನರಿಲ್ಲದ ಪ್ರದೇಶದಲ್ಲಿ ಜನನವೆಂದು ತಿಳಿಯತಕ್ಕದ್ದು.

**ಮಂದರ್ಕ್ಷಾಂಶೇ ಶಶಿನಿ ಹಿಬುಕೇ ಮಂದದೃಷ್ಟೇಽಬ್ಜಗೇವಾ ।**
**ತದ್ಯುಕ್ತೇವಾ ತಮಸಿ ಶಯನಂ ನೀಚ ಸಂಸ್ಥೈಶ್ಚ ಭೂಮೌ ॥**
**ಯದ್ವದ್ರಾಶಿರ್ವ್ರಜತಿ ಹರಿಜಂ ಗರ್ಭಮೋಕ್ಷಸ್ತು ತದ್ವತ್ಸಾ ।**
**ಪೈಶ್ಚಂದ್ರಾತ್ಸ್ಮರ ಸುಖಗತೈಃ ಕ್ಲೇಶಮಾಹುರ್ಜನನ್ಯಾಃ ॥೧೭॥**

ಜನ್ಮಕಾಲದಲ್ಲಿ ಚಂದ್ರನು ಶನಿಯಿಂದ ಕೂಡಿದ್ದರೂ ಅಥವಾ ಶನಿ ನವಾಂಶದಲ್ಲಿದ್ದರೂ ಮತ್ತು ಚಂದ್ರನು ಚತುರ್ಥದಲ್ಲಿದ್ದರೂ ಯಾ ಜಲರಾಶಿಗಳಾದ ಕರ್ಕಾಟಕ, ಮೀನ ನವಾಂಶದಲ್ಲಿದ್ದರೂ ಚಂದ್ರನ ಮೇಲೆ ಶನಿದೃಷ್ಟಿ ಇದ್ದರೂ ಅಂಧಕಾರದಲ್ಲಿ ಸೂತಿಕಾಶಯನವೆಂದು ತಿಳಿಯಬೇಕು. ಈ ಯೋಗಗಳಿದ್ದರೂ , ಚಂದ್ರನು ಸೂರ್ಯನಿಂದ ನೋಡಲ್ಪಟ್ಟರೆ ಕತ್ತಲೆ ಆ ಸ್ಥಳದಲ್ಲಿ ಇರುವುದಿಲ್ಲ. ಮತ್ತು ಸೂರ್ಯನು ಬಲಶಾಲಿಯಾಗಿದ್ದು ಕುಜನಿಂದ ನೋಡಲ್ಪಟ್ಟರೆ ಸೂತಿಕಾ ಶಯನ ಸ್ಥಳದಲ್ಲಿ ದೀಪವಿದೆ ಎಂತ ಹೇಳತಕ್ಕದ್ದು. ಎರಡಕ್ಕೂ ಹೆಚ್ಚಿಗೆ ಗ್ರಹರು ನೀಚರಾಗಿದ್ದರೆ ಭೂಮಿಯಲ್ಲಿ ಶಯನವೆಂದು ಹೇಳಬೇಕು. ಲಗ್ನವು ಯಾವ ಪ್ರಕಾರ ರಾಶಿಯಲ್ಲಿ ಉದಯವಾಗುವುದೋ ಅದರಂತೆ ಅಂದರೆ ಶೀರ್ಷೋದಯ ರಾಶಿಯಾಗಿದ್ದರೆ ಶಿರಸ್ಸು, ಹೊಟ್ಟೆಯನ್ನು ಪ್ರಷ್ಠೋದಯ ರಾಶಿಯಾಗಿದ್ದರೆ ಕಾಲು, ಬೆನ್ನುಗಳನ್ನು ಉಭಯೋದಯ ರಾಶಿಯಾಗಿದ್ದರೆ ಕೈ, ಕಾಲುಗಳನ್ನು ಮುಂಚಿತವಾಗಿ ಕಾಣಿಸಿಕೊಂಡು ಮಗುವು ಜನ್ಮಕ್ಕೆ ಬರುವುದೆಂದು ತಿಳಿಯಬೇಕು

ಚಂದ್ರನಿಂದ ಚತುರ್ಥ ಸಪ್ತಮದಲ್ಲಿ ಪಾಪಗ್ರಹಗಳಿದ್ದರೆ ಮಗುವು ಹುಟ್ಟುವಾಗ ತಾಯಿಗೆ ಬಹಳ ಕಷ್ಟವಾಗುವುದೆಂದು ತಿಳಿಯತಕ್ಕದ್ದು (ಬಲಿಷ್ಠರಾದ ಶುಭಗ್ರಹರು ವ ಗುರುವಿನ ಯುತಿ ದೃಷ್ಟಿ ಲಗ್ನ ಚಂದ್ರರಿಗೆ ಇದ್ದರೆ ತಾಯಿಗೆ ಎಷ್ಟು ಕಷ್ಟವಾದರೂ ಕೂಡಲೆ ಪ್ರಸವವಾಗುವುದೆಂದು ತಿಳಿಯಬೇಕು.)

ಸ್ನೇಹಃ ಶಶಾಂಕಾ ದುದಯಾಚ್ಚ ವರ್ತಿ ।
ದೀರ್ಘೋsರ್ಕಯುಕ್ತರ್ಕ್ಷ ವಶಾಚ್ಚರಾದ್ಯೈಃ ॥
ದ್ವಾರಂಚ ತದ್ವಾಸ್ತುನಿಕೇಂದ್ರ ಸಂಸ್ಥೈ ।
ರ್ಜ್ಞೇಯಂ ಗ್ರಹೈರ್ವೀರ್ಯ ಸಮನ್ವಿತೈರ್ವಾ ॥೧೮॥

ಜನ್ಮಕಾಲದಲ್ಲಿ ಚಂದ್ರನಿಂದ ದೀಪದಲ್ಲಿರುವ ಎಣ್ಣೆಯನ್ನೂ ಲಗ್ನದಿಂದ ಬತ್ತಿಯನ್ನೂ ಹೇಳ ಬೇಕು. ಅಂದರೆ ಚಂದ್ರನು ಯಾವ ರಾಶಿಯಲ್ಲಾದರೂ ಆದಿಯಲ್ಲಿದ್ದರೆ ದೀಪದಲ್ಲಿ ಎಣ್ಣೆ ತುಂಬಾ ಇದೆ ಎಂತಲೂ, ಮಧ್ಯದಲ್ಲಿದ್ದರೆ ಅರ್ಧವೆಂತಲೂ, ಅಂತ್ಯದಲ್ಲಿದ್ದರೆ ಅತ್ಯಲ್ಪವಿದೆ ಎಂತಲೂ, ಹೀಗೆಯೇ ಲಗ್ನದಿಂದ ಆದಿ, ಮಧ್ಯ, ಅಂತ್ಯವೆಂಬಂತೆ ಬತ್ತಿಯನ್ನು ತಿಳಿಯಬೇಕು ಲಗ್ನರಾಶಿಯ "ರಕ್ತಶ್ವೇತಶ್ಶುಕತನುಃ" ಎಂಬಂತೆ ಬತ್ತಿಯ ವರ್ಣವನ್ನು ಹೇಳತಕ್ಕದ್ದು ರವಿಯು ಚರರಾಶಿಯ ಲ್ಲಿದ್ದರೆ ಕೈಯಲ್ಲಿ ಹಿಡಿದು ತಿರುಗುವ ದೀಪವೆಂತಲೂ ಸ್ಥಿರರಾಶಿಯಲ್ಲಿದ್ದರೆ ಒಂದೇ ಕಡೆಯಲ್ಲಿ ಇಟ್ಟಿರುವ ದೀಪವೆಂತಲೂ, ದ್ವಿಸ್ವಭಾವ ರಾಶಿಯಲ್ಲಿದ್ದರೆ ತೂಗಾಡುವ ದೀಪವೆಂತಲೂ ತಿಳಿಯ ತಕ್ಕದ್ದು ಲಗ್ನದಿಂದ ಕೇಂದ್ರದಲ್ಲಿರುವ ಗ್ರಹಗಳಲ್ಲಿ ಬಲಶಾಲಿಯಾದ ಗ್ರಹವನ್ನು ನೋಡಿ. "ಪ್ರಾಗಾದ್ಯಾ ರವಿ ಶುಕ್ರ" ಎಂಬಂತೆ ಆಯಾಯ ಗ್ರಹರಿಗೆ ಹೇಳಿದ ದಿಕ್ಕಿನಲ್ಲಿ ಮನೆಯ (ಪ್ರಧಾನ ದ್ವಾರ) ಬಾಗಿಲನ್ನು ಹೇಳತಕ್ಕದ್ದು (ಕೇಂದ್ರದಲ್ಲಿರುವ ಇತರ ಗ್ರಹಗಳಿಂದ ಅವರವರಿಗೆ ಹೇಳಿದ ದಿಕ್ಕುಗಳಲ್ಲಿ ಉಪದ್ವಾರ ಮತ್ತು ಕಿಟಕಿಗಳಿವೆ ಎಂದು ಹೇಳತಕ್ಕದ್ದು)

ಜೀರ್ಣಂ ಸಂಸ್ಕೃತ ಮರ್ಕಜೇ ಕ್ಷಿತಿಸುತೇದಗ್ಧಂ ನವಂ ಶೀತಗೌ ।
ಕಾಷ್ಠಾಢ್ಯಂ ನದೃಢಂ ರವೌಶಶಿಸುತೇ ತನ್ನೈಕ ಶಿಲ್ಪ್ಯುದ್ಭವಂ ॥
ರಮ್ಯಂಚಿತ್ರಯುತಂ ನವಂ ಚ ಭೃಗುಜೇ ಜೀವೇದೃಢಂ ಮಂದಿರಂ ।
ಚಕ್ರಸ್ಥೈಶ್ಚ ಯಥೋಪದೇಶ ರಚನಾಂ ಸಾಮಂತ ಪೂರ್ವಾನ್ ವದೇತ್ ॥೧೯॥

ಜನ್ಮಕಾಲದಲ್ಲಿ ಬಲಶಾಲಿಯಾದ ಗ್ರಹವು ಶನಿಯಾಗಿದ್ದರೆ ಜೀರ್ಣವಾಗಿರುವ ಬಹು ಪುರಾತನ ದಿದ್ದು ಚೆನ್ನಾಗಿ ಮಾಡಲ್ಪಟ್ಟ ಮನೆ ಎಂತಲೂ, ಕುಜನಾಗಿದ್ದರೆ ಬೆಂಕಿಯಿಂದ ಸುಡಲ್ಪಟ್ಟದೆ ಎಂತಲೂ, ಚಂದ್ರನಾಗಿದ್ದರೆ ಹೊಸದಾಗಿ ಕಟ್ಟಿದ್ದೆಂತಲೂ, ರವಿಯಾಗಿದ್ದರೆ ಬಹಳ ಮರಗಳಿಂದ ಕಟ್ಟಲ್ಪಟ್ಟು ಈಗ ದುರ್ಬಲವಾಗಿದೆ ಎಂತಲೂ, ಬುಧನಾಗಿದ್ದರೆ ಅನೇಕ ಶಿಲ್ಪಿಗಳಿಂದ ಮಾಡಿ ದ್ದೆಂತಲೂ, ಶುಕ್ರನಾದರೆ ಚಿತ್ರಕಲೆಗಳಿಂದ ಕೂಡಿದ ರಮ್ಯವಾಗಿ ಹೊಸದಾಗಿರುವುದೆಂತಲೂ, ಗುರುವಾಗಿದ್ದರೆ ವಿಶೇಷ ಗಟ್ಟಿಯಾಗಿ ಬಹಳ ಕಾಲದವರೆಗೆ ಭದ್ರವಾಗಿರುವಂತೆ ಮಾಡಿ ದ್ದೆಂತಲೂ, ಸೂತಿಕಾಗ್ರಹವನ್ನು ಹೇಳತಕ್ಕದ್ದು. ಹಾಗೆಯೇ ಆ ಕಾಲದ ರಾಶಿಚಕ್ರದಲ್ಲಿ ಬಲ ಕಡಿಮೆ ಇರುವ ಗ್ರಹಗಳಿಂದ ಸೂತಿಕಾ ಮಂದಿರದ ಆಸುಪಾಸಿನಲ್ಲಿರುವ ಮನೆ ಮುಂತಾದ್ದನ್ನು

ಕಲ್ಪನೆ ಮಾಡಿ ಹೇಳತಕ್ಕದ್ದು (ಇಲ್ಲಿ ಬಲಯುಕ್ತವಾದ ಗುರುವಿನ ಕೇಂದ್ರ, ಪರಮೋಚ್ಚ, ಉಚ್ಚ, ಮೂಲತ್ರಿಕೋಣ, ಸ್ವಕ್ಷೇತ್ರಾದಿಗಳಿಂದ ವಿಚಾರ ಮಾಡಿ ಒಂದು, ಎರಡು, ಮೂರು ಅಂತಸ್ತುಗಳು ಮನೆಗೆ ಇರುವುದೆಂದು ತಿಳಿಯಬೇಕು. ಇದು ಪ್ರಶ್ನಾದಿಗಳಿಗೂ ಉಪಯೋಗವಾಗುವುದು.

**ಮೇಷ ಕುಳೀರ ತುಲಾಳಿ ಘಟೈಃ ಪ್ರಾಗುತ್ತರತೋ ಗುರುಸೌಮ್ಯ ಗೃಹೇಷು ||**
**ಪಶ್ಚಿಮತಶ್ಚ ವೃಷೇಣ ನಿವಾಸೋ ದಕ್ಷಿಣ ಭಾಗಕರೌ ಮೃಗಸಿಂಹೌ ||೨೦||**

ಜನ್ಮಕಾಲದಲ್ಲಿ ಮೇಷ, ಕರ್ಕಾಟಕ, ತುಲಾ, ವೃಶ್ಚಿಕ, ಕುಂಭ ಇವುಗಳಲ್ಲಿ ಯಾವುದಾದರೊಂದು ಲಗ್ನವಾಗಿದ್ದರೆ ಮನೆಯೊಳಗೆ ಪೂರ್ವದಿಕ್ಕಿನಲ್ಲಿಯೂ ಧನು, ಮೀನ, ಮಿಥುನ, ಕನ್ಯಾ ರಾಶಿ ಗಳಾಗಿದ್ದರೆ ಉತ್ತರದಲ್ಲಿಯೂ, ವೃಷಭವಾಗಿದ್ದರೆ ಪಶ್ಚಿಮದಲ್ಲಿ, ಮಕರ ಸಿಂಹಗಳಾದರೆ ದಕ್ಷಿಣ ದಿಕ್ಕಿನಲ್ಲಿಯೂ, ಪ್ರಸೂತಳಾದಳೆಂತಲೂ ಹೇಳತಕ್ಕದ್ದು. ಆಯಾಯ ರಾಶಿಗಳ ನವಾಂಶಗಳಲ್ಲಿ ಆಯಾಯ ದಿಕ್ಕುಗಳಲ್ಲಿ ಸೂತಿಕಾಗೃಹವೆಂದೂ ತಿಳಿಯತಕ್ಕದ್ದು ಕೆಲವರಲ್ಲಿ ಮನೆಯೊಳಗೆ ಹೆರಿಗೆ ಯನ್ನು ಮಾಡುವ ಕ್ರಮವಿಲ್ಲ. ಹಾಗಿದ್ದರೆ ಮನೆಯ ಹೊರಭಾಗದಲ್ಲಿ ಮೇಲೆ ಹೇಳಲ್ಪಟ್ಟ ದಿಕ್ಕು ಗಳಲ್ಲಿ ಸೂತಿಕಾಗೃಹವೆಂದು ತಿಳಿಯತಕ್ಕದ್ದು

**|| ಸೂತಿಕಾ ಗೃಹದಲ್ಲಿ ಪ್ರಸೂತಿ ಸ್ಥಳಜ್ಞಾನ ||**

| ಜನ್ಮ ಲಗ್ನ ಅಥವಾ ನವಾಂಶಗಳು | ಮನೆಯಲ್ಲಿ ಸೂತಿಕಾ ಇರುವ ದಿಕ್ಕು |
|---|---|
| ಮೇಷ, ಕರ್ಕಾಟಕ, ತುಲಾ, ವೃಶ್ಚಿಕ, ಕುಂಭ | ಪೂರ್ವ ದಿಕ್ಕು |
| ಧನು, ಮೀನ, ಮಿಥುನ, ಕನ್ಯಾ | ಉತ್ತರ ದಿಕ್ಕು |
| ವೃಷಭ | ಪಶ್ಚಿಮ ದಿಕ್ಕು |
| ಮಕರ, ಸಿಂಹ | ದಕ್ಷಿಣ ದಿಕ್ಕು |

**ಪ್ರಾಚ್ಯಾದಿ ಗೃಹೇ ಕ್ರಿಯಾದಯೋ ದ್ವೌ ದ್ವೌ**
**ಕೋಣಗತಾ`ದ್ವಿಮೂರ್ತಯಃ ||**
**ಶಯ್ಯಾಸ್ವಪಿ ವಾಸ್ತು ವದ್ವದೇತ್ಪಾದ್ಯೈಃ**
**ಷಟ್ ತ್ರಿನವಾಂತ್ಯ ಸಂಸ್ಥಿತೈಃ ||೨೧||**

ಜನ್ಮಕಾಲದಲ್ಲಿ ಮೇಷ ವೃಷಭ ಲಗ್ನ ಅಥವಾ ನವಾಂಶವಾಗಿದ್ದರೆ ಮನೆಯೊಳಗೆ ಪೂರ್ವ ಭಾಗ ದಲ್ಲಿಯೂ, ಮಿಥುನವಾಗಿದ್ದರೆ ಆಗ್ನೇಯದಲ್ಲಿಯೂ, ಕರ್ಕಾಟಕ ಸಿಂಹವಾಗಿದ್ದರೆ ದಕ್ಷಿಣದಲ್ಲಿಯೂ, ಕನ್ಯಾ ನೈಋತ್ಯದಲ್ಲಿಯೂ, ತುಲಾ ವೃಶ್ಚಿಕ ಪಶ್ಚಿಮದಲ್ಲಿಯೂ, ಧನು ವಾಯುವ್ಯದಲ್ಲಿಯೂ, ಮಕರ ಕುಂಭ ಉತ್ತರದಲ್ಲಿಯೂ, ಮೀನ ಈಶಾನ್ಯದಲ್ಲಿಯೂ ಮನೆಯೊಳಗೆ ಸೂತಿಕಾಶಯನ ವನ್ನು ಹೇಳತಕ್ಕದ್ದು. ತೃತೀಯ, ಷಷ್ಠ, ನವಮ, ದ್ವಾದಶ ಈ ಭಾವರಾಶಿಗಳಿಂದ ಸೂತಿಕಾ ಮಂಚದ ಕಾಲುಗಳನ್ನು ಹೇಳತಕ್ಕದ್ದು.

|| ಸೂತಿಕಾ ಶಯನ ಸ್ಥಳ ||

| ಈಶಾನ್ಯ | | ಪೂರ್ವ | | ಆಗ್ನೇಯ |
|---|---|---|---|---|
| ಮೀನ | ಮೇಷ | ವೃಷಭ | ಮಿಥುನ | |
| ಉತ್ತರ ಕುಂಭ | ರಾಶಿ ಚಕ್ರ | | ಕರ್ಕಾಟಕ ದಕ್ಷಿಣ | |
| ಮಕರ | | | ಸಿಂಹ | |
| ಧನು | ವೃಶ್ಚಿಕ | ತುಲಾ | ಕನ್ಯಾ | |
| ವಾಯುವ್ಯ | | ಪಶ್ಚಿಮ | | ನೈಋತ್ಯ |

ಚಂದ್ರ ಲಗ್ನಾಂತರ ಗತೈರ್ಗ್ರಹೈಃ ಸ್ಯುರುಪಸೂತಿಕಾಃ ।
ಬಹಿರಂತಶ್ಚ ಚಕ್ರಾರ್ಧೇ ದೃಶ್ಯಾದೃಶೇಽನ್ಯಥಾಽಪರೇ ॥೨೨॥

ಜನ್ಮಲಗ್ನಕ್ಕೂ ಚಂದ್ರನಿಗೂ ಮಧ್ಯವಿರುವ ಗ್ರಹಗಳಿಂದ ಸೂತಿಕಾ ಸಮೀಪದಲ್ಲಿರುವ ಸ್ತ್ರೀಯರು ಅಂದರೆ ಉಪಸೂತಿಕರೆಂದು ಆಗುತ್ತಾರೆ ಅದು ಲಗ್ನ ಮತ್ತು ಚಂದ್ರರ ಮಧ್ಯ ಎಷ್ಟು ಗ್ರಹಗಳು ಇರುತ್ತವೆಯೋ ಅಷ್ಟು ಜನ ಉಪಸೂತಿಕೆಯನ್ನು ಹೇಳತಕ್ಕದ್ದು. ರಾಶಿಚಕ್ರದ ಉತ್ತರಾರ್ಧ ವೆಂದರೆ ಚತುರ್ಥ ಸ್ಫುಟದಿಂದ ದಶಮ ಸ್ಫುಟದವರೆಗೆ ಇರುವ ಗ್ರಹಗಳ ಸಂಖ್ಯೆಯಷ್ಟು ಜನರನ್ನು ಸೂತಿಕಾಗೃಹದ ಒಳಗೂ ರಾಶಿಚಕ್ರದ ಪೂರ್ವಾರ್ಧವೆಂದರೆ ದಶಮ ಸ್ಫುಟದಿಂದ ಚತುರ್ಥ ಸ್ಫುಟದ ವರೆಗೆ ಇರುವ ಗ್ರಹಗಳ ಸಂಖ್ಯೆಯಷ್ಟು ಜನರು ಹೊರಗೆ ಇದ್ದರೆಂದೂ ಹೇಳತಕ್ಕದ್ದು. ಚಕ್ರಾರ್ಧಗಳಲ್ಲಿರುವ ಶುಭಾಶುಭ ಗ್ರಹರಿಂದ ಉಪಸೂತಿಕೆಯರ ರೂಪ, ವರ್ಣ, ಲಕ್ಷಣ, ವಯಸ್ಸು, ಜಾತಿ, ಸೌಮಾಂಗಲ್ಯಾದಿಗಳನ್ನೂ ಗ್ರಹರು ಉಚ್ಚದಲ್ಲಿದ್ದರೆ ಒಂದಕ್ಕೆ ಮೂರು, ಸ್ವಕ್ಷೇತ್ರಕ್ಕೆ ಎರಡು ಹೀಗೆ ಗ್ರಹರಿಂದ ಸಂಖ್ಯೆಯನ್ನೂ ವಿಚಾರಪೂರ್ವಕವಾಗಿ ಹೇಳತಕ್ಕದ್ದು.

ಲಗ್ನ ನವಾಂಶಪ ತುಲ್ಯತನುಃ ಸ್ಯಾ ।
ದ್ವೀರ್ಯಯುತ ಗ್ರಹ ತುಲ್ಯ ತನುರ್ವಾ ॥

ಚಂದ್ರ ಸಮೇತ ನವಾಂಶಪ ವರ್ಣಃ ।
ಕಾದಿವಿಲಗ್ನ ವಿಭಕ್ತ ಭಗಾತ್ರಃ ॥೨೩॥

ಜನ್ಮಕಾಲದಲ್ಲಿ ಲಗ್ನನವಾಂಶಾಧಿಪತಿಗೆ ಸಮಾನವಾದ ಶರೀರ ಉಳ್ಳವನೂ ಅಥವಾ ಎಲ್ಲಾ ಗ್ರಹರಲ್ಲಿ ಬಲಶಾಲಿಯಾದ ಗ್ರಹಕ್ಕೆ ಹೇಳಿದ ಸಮಾನ ಶರೀರವನ್ನು "ಮಧುಪಿಂಗಳದೃಕ್" ಎಂಬಂತೆ ಆಯಾಯ ಗ್ರಹರಿಗೆ ಹೇಳಿದ ರೂಪವನ್ನು ಹೇಳಬೇಕು. ಚಂದ್ರನವಾಂಶಕ್ಕೆ ಸರಿಯಾಗಿ "ರಕ್ತಶ್ಯಾಮೋಭಾಸ್ಕರೋ" ಎಂಬಂತೆ ಶರೀರ ವರ್ಣವನ್ನು ಹೇಳತಕ್ಕದ್ದು. "ಕಾಲಾಂಗಾನಿವ ರಾಂಗ" ಎಂಬಂತೆ ಹನ್ನೆರಡು ಭಾವಗಳಿಂದ ಅವಯವಗಳ ಹ್ರಸ್ವ ದೀರ್ಘಾದಿಗಳನ್ನು ಹೇಳ ತಕ್ಕದ್ದು.

ಕಂದೃಕ್ ಶ್ರೋತ್ರನಸಾ ಕಪೋಲಹನವೋ ವಕ್ತ್ರಂ ಚ ಹೋರಾದಯ ।
ಸ್ತೇ ಕಂಠಾಂಸಕ ಬಾಹುಪಾರ್ಶ್ವ ಹೃದಯ ಕ್ರೋಡಾನಿ ನಾಭಿಸ್ತತಃ ॥
ವಸ್ತಿಃ ಶಿಶ್ನಗುದೇ ತತಶ್ಚ ವೃಷಣಾವೂರೂ ತತೋ ಜಾನುನೀ ।
ಜಂಘೇಽಂಘ್ರೀತ್ಯುಭಯತ್ರ ವಾಮ ಮುದಿತೈರ್ದ್ರೇಕ್ಕಾಣಭಾಗೈಸ್ತ್ರಿಧಾ ॥೨೪॥

ಜನ್ಮಕಾಲದಲ್ಲಿ ಲಗ್ನದಿಂದ ಹಿಂದಿನ ರಾಶಿಗಳು ಉದಿತ ದೇಹದ ಎಡಭಾಗವೆಂತಲೂ ಲಗ್ನದಿಂದ ಮುಂದಿನ ರಾಶಿಗಳು ಅನುದಿತ ದೇಹ ಬಲಭಾಗವೆಂತಲೂ ಲಗ್ನ ಭಾವದಿಂದ ಸಪ್ತಮ ಭಾವದ ವರೆಗೆ ಲಗ್ನದಲ್ಲಿರುವ ಮೂರು ದ್ರೇಕ್ಕಾಣಗಳಿಂದ ಕ್ರಮವಾಗಿ ತಿಳಿಯತಕ್ಕದ್ದು. ಲಗ್ನದಲ್ಲಿ ಪ್ರಥಮ ದ್ರೇಕ್ಕಾಣವಾದರೆ ಲಗ್ನ, ಶಿರಸ್ಸು, ದ್ವಿತೀಯ ಬಲಕಣ್ಣು, ದ್ವಾದಶ ಎಡಕಣ್ಣು, ಹೀಗೆ ತೃತೀಯ ಏಕಾದಶ ಕಿವಿಗಳು, ಚತುರ್ಥ ದಶಮ ಮೂಗು, ಪಂಚಮ ನವಮ ಕೆನ್ನೆಗಳು, ಷಷ್ಠ ಅಷ್ಟಮ ದವಡೆಗಳು, ಸಪ್ತಮ ಬಾಯಿ, ಎಂತಲೂ ಮಧ್ಯ ದ್ರೇಕ್ಕಾಣವಾದರೆ ಲಗ್ನವೇ·ಕಂಠ, ದ್ವಿತೀಯ ದ್ವಾದಶ ಭುಜಗಳು, ತೃತೀಯ ಏಕಾದಶ ಬಾಹುಗಳು, ಚತುರ್ಥ ದಶಮ ಪಾರ್ಶ್ವ ಅಂದರೆ ಬದಿಗಳು, ಪಂಚಮ ನವಮ ಹೃದಯ, ಷಷ್ಠ ಅಷ್ಟಮ ಹೊಟ್ಟೆಯೂ, ಸಪ್ತಮ ಹೊಕ್ಕಳು ಎಂತಲೂ, ಅಂತ್ಯ ದ್ರೇಕ್ಕಾಣವಾದರೆ ಲಗ್ನವೇ ನಾಭಿಯ ಕೆಳಗಿನ ಪ್ರದೇಶ (ಕೆಳಗಿನ ಹೊಟ್ಟೆ) ದ್ವಿತೀಯ ದ್ವಾದಶ ಶಿಶ್ನ, ಗುದ, (ಸ್ತ್ರೀ ಪುರುಷ ಚಿಹ್ನೆ, ಮಲದ್ವಾರ) ಪ್ರದೇಶ, ತೃತೀಯ ಏಕಾದಶ ವೃಷಣ (ತರಡುಗಳು), ಚತುರ್ಥ ದಶಮ ತೊಡೆಗಳು, ಪಂಚಮ ನವಮ ಮೊಣಕಾಲುಗಳು, ಷಷ್ಠ ಅಷ್ಟಮ, ಜಂಘೆಗಳು, ಸಪ್ತಮ ಪಾದಗಳು ಎಂತಲೂ ದ್ರೇಕ್ಕಾಣ ಅಂಗವಿಭಾಗಗಳೆಂದು ತಿಳಿಯತಕ್ಕದ್ದು.

## ॥ ದ್ರೇಕ್ಕಾಣ ಅಂಗವಿಭಾಗಗಳು ॥

| ಭಾವರಾಶಿ | ಲಗ್ನ | ದ್ವಿತೀಯ | ತೃತೀಯ | ಚತುರ್ಥ | ಪಂಚಮ | ಷಷ್ಠ | ಸಪ್ತಮ |
|---|---|---|---|---|---|---|---|
| ಪ್ರಥಮ ದ್ರೇಕ್ಕಾಣ—ದೇಹ ಬಲಭಾಗ | ಶಿರ | ಬಲಕಣ್ಣು | ಬಲಕಿವಿ | ಮೂಗಿನ ಬಲಸೊಳ್ಳೆ | ಬಲಕೆನ್ನೆ | ಬಲದವಡೆ | ಬಾಯಿ |
| ದ್ವಿತೀಯ ದ್ರೇಕ್ಕಾಣ—ದೇಹ ಬಲಭಾಗ | ಕಂಠ | ಬಲಭುಜ | ಬಲಬಾಹು | ಬಲಪಾರ್ಶ್ವ | ಬಲಹೃದಯ | ಬಲಹೊಟ್ಟೆ | ನಾಭಿ |
| ತೃತೀಯ ದ್ರೇಕ್ಕಾಣ—ದೇಹ ಬಲಭಾಗ | ವಸ್ತಿ | ಲಿಂಗ, ಗುದ | ಬಲವೃಷಣ | ಬಲತೊಡೆ | ಬಲ ಮೊಣಕಾಲು | ಬಲಜಂಘೆ | ಎರಡೂ ಪಾದಗಳು |
| ಭಾವರಾಶಿ | ಲಗ್ನ | ದ್ವಾದಶ | ಏಕಾದಶ | ದಶಮ | ನವಮ | ಅಷ್ಟಮ | ಸಪ್ತಮ |
| ಪ್ರಥಮ ದ್ರೇಕ್ಕಾಣ—ದೇಹ ಎಡಭಾಗ | ಶಿರ | ಎಡಕಣ್ಣು | ಎಡಕಿವಿ | ಮೂಗಿನ ಎಡಸೊಳ್ಳೆ | ಎಡಕೆನ್ನೆ | ಎಡದವಡೆ | ಬಾಯಿ |
| ದ್ವಿತೀಯ ದ್ರೇಕ್ಕಾಣ—ದೇಹ ಎಡಭಾಗ | ಕಂಠ | ಎಡಭುಜ | ಎಡಬಾಹು | ಎಡಪಾರ್ಶ್ವ | ಎಡಹೃದಯ | ಎಡಹೊಟ್ಟೆ | ನಾಭಿ |
| ತೃತೀಯ ದ್ರೇಕ್ಕಾಣ—ದೇಹ ಎಡಭಾಗ | ವಸ್ತಿ | ಲಿಂಗ, ಗುದ | ಎಡವೃಷಣ | ಎಡತೊಡೆ | ಎಡ ಮೊಣಕಾಲು | ಎಡಜಂಘೆ | ಎರಡೂ ಪಾದಗಳು |

ವಿ ಸೂ : ಲಗ್ನದ ಭೋಗ್ಯಾಂಶದಿಂದ ಸಪ್ತಮದ ಭುಕ್ತಾಂಶವರೆಗೆ ದೇಹದ ಬಲಭಾಗವೆಂದೂ ಸಪ್ತಮ ಭೋಗ್ಯಾಂಶದಿಂದ ಲಗ್ನದ ಭುಕ್ತಾಂಶದವರೆಗೆ ದೇಹದ ಎಡಭಾಗವೆಂದೂ ತಿಳಿಯತಕ್ಕದ್ದು

**ತಸ್ಮಿನ್ ಪಾಪಯುತೇ ವ್ರಣಂ ಶುಭಯುತೇ ದೃಷ್ಟೇ ಚ ಲಕ್ಷ್ಮಾದಿಶೇ ।**
**ತ್ಸ್ವರ್ಕ್ಷಾಂಶೇ ಸ್ಥಿರ ಸಂಯುತೇ ಚ ಸಹಜಃ ಸ್ಯಾದನ್ಯಥಾಽಗಂತುಕಃ ॥**
**ಮಂದೇಽಶ್ಮಾ ನಿಲಜೋಗ್ನಿ ಶಸ್ತ್ರವಿಷಜೋ ಭೌಮೇ ಬುಧೇ ಭೂಭವಃ ।**
**ಸೂರ್ಯೇಃಕಾಷ್ಠ ಚತುಷ್ಪದೇನ ಹಿಮಗೌ ಶೃಂಗ್ಯಬ್ಜ ಜೋಽನ್ಯೈಃ ಶುಭಂ ॥೨೫॥**

ಜನ್ಮಕಾಲದಲ್ಲಿ ಹಿಂದೆ ಹೇಳಿದಂತೆ ಲಗ್ನಾದಿ ದ್ವಾದಶ ರಾಶಿಗಳು ಯಾವ ಅಂಗ ವಿಭಾಗ ವಾಗುವುದೋ ಆ ಅಂಗದಲ್ಲಿ ಪಾಪಗ್ರಹರಿದ್ದರೆ ಹುಣ್ಣನ್ನು ಹೇಳತಕ್ಕದ್ದು. ಶುಭಗ್ರಹಯುಕ್ತ ಅಥವಾ ದೃಷ್ಟಿ ಇದ್ದರೆ ಆ ಅವಯವಗಳಲ್ಲಿ ಮಚ್ಚೆಯನ್ನು ಹೇಳತಕ್ಕದ್ದು. ವ್ರಣ ಮಚ್ಚೆಯನ್ನು ಕೊಡುವ ಗ್ರಹಗಳು ಸ್ಥಿರರಾಶಿ, ಸ್ಥಿರನವಾಂಶ, ಸ್ವನವಾಂಶವಾಗಿದ್ದರೆ ಚಿಹ್ನೆಗಳು ಹುಟ್ಟು ವಾಗಲೇ ಇರುವುದೆಂತಲೂ, ಹಾಗಿಲ್ಲದೆ ಚರರಾಶಿ, ಚರನವಾಂಶ, ಪರನವಾಂಶವಾಗಿದ್ದರೆ ವ್ರಣ ಮಚ್ಚೆಗಳು ಆಯಾಯ ದಶಾಭುಕ್ತಿ ಕಾಲದಲ್ಲಿ ಉತ್ಪನ್ನವಾಗುವುದೆಂತಲೂ ಶಾಶ್ವತ ವಾಗಿ ಉಳಿಯತಕ್ಕದ್ದೆಂತಲೂ, ಹೇಳತಕ್ಕದ್ದು. ವ್ರಣಮಶಕಾದಿಗಳನ್ನುಂಟುಮಾಡುವ ಗ್ರಹ ಶನಿಯಾದರೆ ಕಲ್ಲುಪೆಟ್ಟಿ ನಿಂದ ಅಥವಾ ವಾತವ್ಯಾಧಿಯಿಂದಲೂ, ಕುಜನಾದರೆ ಬೆಂಕಿಯಿಂದ, ಕತ್ತಿ, ಮುಂತಾದ ಶಸ್ತ್ರದಿಂದ ವಿಷಜಂತುವಿನಿಂದಲೂ ಪಾಪಯುಕ್ತ ಬುಧನಾದರೆ, ನೆಲದಲ್ಲಿ ಜಾರಿ ಬೀಳುವುದರಿಂದ ವ ಮಣ್ಣಿನ ಗಡ್ಡೆಯಿಂದಲೂ, ರವಿಯಾದರೆ ಕಟ್ಟಿಗೆ ಯಾ ಚತುಷ್ಪದ ಜಂತುಗಳಿಂದಲೂ, ಕ್ಷೀಣಚಂದ್ರನಾದರೆ ಜಲಚರ ವ ಕೊಂಬುಳ್ಳ ಪ್ರಾಣಿಗಳಿಂದಲೂ ವ್ರಣಮಶ ಕಾದಿಗಳನ್ನು ಹೇಳತಕ್ಕದ್ದು ಶುಭಗ್ರಹಗಳಾದರೆ ವ್ರಣಮಶಕಾದಿಗಳಾಗದೆ ದೃಢಕಾಯವಿರುವು ದೆಂದು ಶುಭ ಫಲವನ್ನು ಹೇಳತಕ್ಕದ್ದು.

**ಸಮನು ಪತಿತಾ ಯಸ್ಮಿನ್ ಭಾಗೇತ್ರಯಃ ಸ ಬುಧಾ ಗ್ರಹಾ ಭವತಿ ।**
**ನಿಯಮಾತ್ತಸ್ಯಾವಾಪ್ತಿಃ ಶುಭೇಷ್ವಶುಭೇಷುವಾ ॥**
**ವ್ರಣಕೃದಶುಭಃ ಷಷ್ಠೇ ದೇಹೇ ತನೋರ್ಭ ಸಮಾಶ್ರಿತೇ ।**
**ತಿಲಕಮಶಕೈರ್ದೃಷ್ಟಃ ಸೌಮ್ಯೈರ್ಯುತಶ್ಚ ಸ ಲಕ್ಷ್ಮವಾನ್ ॥೨೬॥**

**॥ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಜನ್ಮಲಕ್ಷಣ ನಿರೂಪಣಂ ನಾಮ ಪಂಚಮೋಧ್ಯಾಯಃ ॥**

ಜನ್ಮಕಾಲದಲ್ಲಿ ಒಂದೇ ರಾಶಿಯಲ್ಲಿ ಬುಧನಿಂದ ಕೂಡಿಕೊಂಡು ಶುಭವಾಗಲಿ ಅಶುಭವಾಗಲಿ ಮೂರು ಗ್ರಹಗಳಿದ್ದರೆ ಶುಭಾತಿಶುಭಾತ್ಮಕವಾದ ಪುಣ್ಯಮಚ್ಚೆಗಳನ್ನು ನಿಶ್ಚಯವಾಗಿಯೂ ಉಂಟುಮಾಡುತ್ತಾರೆ. ಷಷ್ಠದಲ್ಲಿ ಪಾಪಗ್ರಹರಿದ್ದರೆ "ಕಾಲಾಂಗಾನಿ ವರಾಂಗ" ಎಂಬಂತೆ ಆ ಅವಯವದಲ್ಲಿ ವ್ರಣಗಳನ್ನುಂಟು ಮಾಡುತ್ತಾರೆ. ಆದರೆ ಅಲ್ಲಿ ಶುಭಗ್ರಹರಿಂದ ಕೂಡಿದ್ದರೂ ಅಥವಾ ದೃಷ್ಟಿ ಇದ್ದರೂ ಮಚ್ಚೆಯನ್ನುಂಟುಮಾಡುತ್ತಾರೆಂದು ತಿಳಿಯತಕ್ಕದ್ದು.

॥ ಜನ್ಮಲಕ್ಷಣವೆಂಬ ಐದನೇಯ ಅಧ್ಯಾಯವು ॥

ಅಧ್ಯಾಯ ೬

## ॥ ಅರಿಷ್ಟಾಧ್ಯಾಯಃ ॥

ಸಂಧ್ಯಾಯಾಂ ಹಿಮದೀಧಿತಿ ಹೋರಾ ।
ಪಾಪೈರ್ಭಾಂತಗತೈರ್ನಿಧನಾಯ ॥
ಪ್ರತ್ಯೇಕಂ ಶಶಿ ಪಾಪಸಮೇತೈಃ ।
ಕೇಂದ್ರೈರ್ವಾಸ ವಿನಾಶ ಮುಪೈತಿ ॥೧॥

ಸಂಧ್ಯಾ ಕಾಲದಲ್ಲಿ (ಸೂರ್ಯನು ಬೆಳಿಗ್ಗೆ ಅರ್ಧೋದಯವಾಗುವ ಕಾಲ ಮತ್ತು ಸಾಯಂಕಾಲ ಅರ್ಧಾಸ್ತವಾಗುವ ಕಾಲಕ್ಕೆ ಹಿಂದೆ ಮುಂದೆ ಅರ್ಧ ಘಟಿಗಳು) ಜನ್ಮವಾಗಿ ಲಗ್ನವು ಚಂದ್ರ ಹೋರೆಯಲ್ಲಿದ್ದು ಪಾಪಗಳು ಯಾವ ರಾಶಿಯಲ್ಲಾದರೂ ರಾಶಿಯ ಅಂತ್ಯ ನವಾಂಶವಾಗಿದ್ದರೆ ಹುಟ್ಟಿದ ಮಗುವು ಬದುಕುವುದಿಲ್ಲವೆಂತಲೂ ಚಂದ್ರನು ಪಾಪಸಮೇತನಾಗಿ, ಲಗ್ನ, ಚತುರ್ಥ, ಸಪ್ತಮ, ದಶಮದಲ್ಲಿ ಎಲ್ಲಿಯಾದರಿದ್ದು, ಪಾಪಗ್ರಹರು ಪ್ರತ್ಯೇಕವಾಗಿ ಮೂರು ಸ್ಥಾನಗಳಲ್ಲಿದ್ದರೆ ಹುಟ್ಟಿದ ಶಿಶುವು ಬದುಕುವುದಿಲ್ಲವೆಂದು ತಿಳಿಯತಕ್ಕದ್ದು. ಈ ವಿಷಯಗಳು ರೋಗಪ್ರಶ್ನೆ ಕೇಳಿದಾಗ ಅತೀ ಉಪಯೋಗವಾಗುವುದು.

ಚಕ್ರಸ್ಯ ಪೂರ್ವಾಪರ ಭಾಗಗೇಷು ।
ಕ್ರೂರೇಷು ಸೌಮ್ಯೇಷು ಚ ಕೀಟಲಗ್ನೇ ॥
ಕ್ಷಿಪ್ರಂವಿನಾಶಂ ಸ ಮುಪೈತಿ ಜಾತಃ ।
ಪಾಪೈರ್ವಿಲಗ್ನಾಸ್ತಮಯಾ ಭಿತಶ್ಚ ॥೨॥

ಚಕ್ರ ಪೂರ್ವಾರ್ಧವೆಂದರೆ ದಶಮ ಸ್ಫುಟದಿಂದ ಚತುರ್ಥ ಸ್ಫುಟದ ಒಳಗೆ ಪಾಪಗ್ರಹರಿದ್ದು, ಚಕ್ರಾಪರಾರ್ಧವೆಂದರೆ ಚತುರ್ಥ ಸ್ಫುಟದಿಂದ ದಶಮ ಸ್ಫುಟದ ಒಳಗೆ ಶುಭಗ್ರಹರಿದ್ದು (ಲಗ್ನ ದಲ್ಲಿ ಸಂದ ಭಾಗದಿಂದ ಎಣಿಸಿದರೆ ಸಾಕು) ವೃಶ್ಚಿಕ ಅಥವಾ ಕರ್ಕಾಟಕ ಜನ್ಮಲಗ್ನವಾಗಿದ್ದರೆ ಹುಟ್ಟಿದ ಮಗುವು ಶೀಘ್ರವೇ ಸಾಯುವುದೆಂತಲೂ ಲಗ್ನಕ್ಕೆ ದ್ವಿತೀಯ ವ್ಯಯದಲ್ಲಿ ಸಪ್ತಮಕ್ಕೆ ಷಷ್ಠ ಅಷ್ಟಮದಲ್ಲಿ ಎಲ್ಲಾ ಪಾಪಗ್ರಹರಿದ್ದು ಶುಭಗ್ರಹಯುಕ್ತರಾಗದಿದ್ದರೆ ಹುಟ್ಟಿದ ಶಿಶುವು ಮರಣ ವಾಗುವುದೆಂದು ತಿಳಿಯತಕ್ಕದ್ದು.

ಪಾಪಾ ಉದಯಾಸ್ತಗತೌ ಕ್ರೂರೇಣ ಯುತಶ್ಚ ಶಶೀ ।
ದೃಷ್ಟಶ್ಚ ಶುಭೈರ್ನಯದಾ ಮೃತ್ಯುಶ್ಚ ಭವೇದಚಿರಾತ್ ॥೩॥

ಜನ್ಮಕಾಲದ ಲಗ್ನದಲ್ಲಿ ಮತ್ತು ಸಪ್ತಮದಲ್ಲಿ ಪಾಪಗ್ರಹರಿದ್ದು, ಚಂದ್ರನು ಯಾವ ರಾಶಿಯಲ್ಲಾ ದರೂ ಪಾಪಗ್ರಹಯುಕ್ತನಾಗಿ ಶಭಗ್ರಹರ ದೃಷ್ಟಿ ಇಲ್ಲದಿದ್ದರೆ ಹುಟ್ಟಿದ ಮಗುವು ಶೀಘ್ರವೇ ಮರಣವಾಗುವುದು.

ಕ್ಷೀಣೇ ಹಿಮಗೌ ವ್ಯಯಗೇ ಪಾಪೈ ರುದಯಾಷ್ಟಮಗೈಃ ।
ಕೇಂದ್ರೇಷು ಶುಭಾಶ್ಚ ನ ಚೇತ್ ಕ್ಷಿಪ್ರಂ ನಿಧನಂ ಪ್ರವದೇತ್ ॥೪॥

ಜನ್ಮಕಾಲದಲ್ಲಿ ಕ್ಷೀಣಚಂದ್ರನು ವ್ಯಯದಲ್ಲಿದ್ದು ಲಗ್ನ ಮತ್ತು ಅಷ್ಟಮದಲ್ಲಿ ಪಾಪಗ್ರಹರಿದ್ದರೆ ಕೇಂದ್ರವಾದ ಒಂದು, ನಾಲ್ಕು, ಏಳು, ಹತ್ತರಲ್ಲಿ ಶುಭಗ್ರಹರು ಇಲ್ಲದಿದ್ದರೆ ಆ ಕಾಲದಲ್ಲಿ ಹುಟ್ಟಿದ ಮಗುವು ಕೂಡಲೇ ಮರಣವಾಗುವುದೆಂದು ತಿಳಿಯತಕ್ಕದ್ದು.

ಕ್ರೂರೇಣ ಸಂಯುತಃ ಶಶೀ ಸ್ಮರಾಂತ್ಯ ಮೃತ್ಯು ಲಗ್ನಗಃ ।
ಕಂಟಕಾದ್ಬಹಿಃ ಶುಭೈರವೀಕ್ಷಿತಶ್ಚ ಮೃತ್ಯುದಃ ॥೫॥

ಜನ್ಮಕಾಲದಲ್ಲಿ ಪಾಪಗ್ರಹರಿಂದ ಕೂಡಿದ ಚಂದ್ರನು ಸಪ್ತಮ, ವ್ಯಯ, ಅಷ್ಟಮ, ಲಗ್ನದಲ್ಲಿ ಎಲ್ಲಿಯಾದರೂ ಇದ್ದರೆ ಶುಭಗ್ರಹರು ಒಂದು, ನಾಲ್ಕು, ಏಳು, ಹತ್ತು ಈ ಸ್ಥಾನಗಳನ್ನು ಬಿಟ್ಟು ಚಂದ್ರನ ಮೇಲೆ ಶುಭದೃಷ್ಟಿ ಇಲ್ಲದಿದ್ದರೆ ಶಿಶುವಿಗೆ ಶೀಘ್ರವಾಗಿ ಮರಣವನ್ನು ಹೇಳತಕ್ಕದ್ದು (ಚಂದ್ರನ ಮೇಲೆ ಶುಭಗ್ರಹರ ದೃಷ್ಟಿ ಇದ್ದರೂ ಕೇಂದ್ರದಲ್ಲಿ ಶುಭಗ್ರಹರಿದ್ದರೂ ಈ ಅರಿಷ್ಟವನ್ನು ಹೇಳಕೂಡದು.)

ಶಶಿನ್ಯರಿ ವಿನಾಶಗೇ ನಿಧನಮಾಶು ಪಾಪೇಕ್ಷಿತೇ ।
ಶುಭೈರಥ ಸಮಾಷ್ಟಕಂ ದಲಮತಶ್ಚಮಿಶ್ರೈಃ ಸ್ಥಿತಿಃ ॥
ಅಸದ್ಭಿರವಲೋಕಿತೇ ಬಲಿಭಿರತ್ರ ಮಾಸಂ ಶುಭೇ ।
ಕಳತ್ರ ಸಹಿತೇ ಚ ಪಾಪವಿಜಿತೇ ವಿಲಗ್ನಾಧಿಪೇ ॥೬॥

ಜನ್ಮಕಾಲದಲ್ಲಿ ಚಂದ್ರನು ಷಷ್ಠ ಅಷ್ಟಮದಲ್ಲಿದ್ದು, ಪಾಪಗ್ರಹರಿಂದ ನೋಡಲ್ಪಟ್ಟರೆ ಹುಟ್ಟಿದ ಮಗುವು ತತ್ಕಾಲವೇ ಮರಣವಾಗುವುದು. ಶುಭಗ್ರಹರ ದೃಷ್ಟಿ ಇದ್ದರೆ ಎಂಟು ವರ್ಷಗಳ ಕಾಲ ಬದುಕುವುದು. ಮಿಶ್ರವಾಗಿ ಶುಭ ಪಾಪಗ್ರಹರಿಂದ ನೋಡಲ್ಪಟ್ಟರೆ ನಾಲ್ಕು ವರ್ಷಗಳ ವರೆಗೆ ಬದುಕುವುದು. (ಚಂದ್ರನ ಮೇಲೆ ಯಾವ ಗ್ರಹರ ದೃಷ್ಟಿಯೂ ಇಲ್ಲದಿದ್ದರೆ ಈ ಅರಿಷ್ಟ ಭಂಗವೆಂತ ತಿಳಿಯಬೇಕು.) ಷಷ್ಠ ಅಷ್ಟಮ ಸ್ಥಾನಗಳಲ್ಲಿ ಶುಭಗ್ರಹರಿದ್ದು ಪಾಪಗ್ರಹರಿಂದ ನೋಡಲ್ಪಟ್ಟರೆ, ಒಂದು ತಿಂಗಳು ಜೀವಿಸುವುದೆಂದೂ, ಲಗ್ನಾಧಿಪತಿ ಸಪ್ತಮದಲ್ಲಿದ್ದು ಪಾಪ ಗ್ರಹರಿಂದ ಪರಾಜಿತ (ಗ್ರಹಯುದ್ಧದಲ್ಲಿ ಸೋತವನು)ನಾದರೂ ಒಂದು ತಿಂಗಳು ಬದುಕುವು ದೆಂದು ಹೇಳಬೇಕು. ಅಂದರೆ ಅದಕ್ಕೂ ಹೆಚ್ಚಿಗೆ ಬದುಕುವುದಿಲ್ಲವೆಂತ ತಿಳಿಯತಕ್ಕದ್ದು.

ಲಗ್ನೇ ಕ್ಷೀಣೆ ಶಶಿನಿ ನಿಧನಂ ರಂಧ್ರಕೇಂದ್ರೇಷು ಪಾಪೈಃ ।
ಪಾಪಾಂತಸ್ಥೇ ನಿಧನ ಹಿಬುಕ ದ್ಯೂನಯುಕ್ತೇಚ ಚಂದ್ರೇ ॥
ಏವಂ ಲಗ್ನೇ ಭವತಿ ಮದನಚ್ಛಿದ್ರ ಸಂಸ್ಥೈಶ್ಚ ಪಾಪೈ ।
ರ್ಮಾತ್ರಾಸಾರ್ಧಂ ಯದಿ ಚ ನ ಶುಭೈರ್ವೀಕ್ಷಿತಃ ಶಕ್ತಿಮದ್ಭಿಃ ॥೭॥

ಜನ್ಮಕಾಲದಲ್ಲಿ ಕ್ಷೀಣಚಂದ್ರನು ಲಗ್ನದಲ್ಲಿದ್ದು ಅಷ್ಟಮ ಮತ್ತು ಕೇಂದ್ರ ಸ್ಥಾನಗಳಲ್ಲಿ ಪಾಪಗ್ರಹರಿದ್ದರೆ ಶಿಶುವಿಗೆ ಮರಣ ಉಂಟಾಗುವುದು. ಅಷ್ಟಮ, ಚತುರ್ಥ, ಸಪ್ತಮ ಈ ಸ್ಥಾನಗಳಲ್ಲಿ ಚಂದ್ರನು ಪಾಪಗ್ರಹರ ಮಧ್ಯ (ಹಿಂದೆ ಮುಂದೆ)ದಲ್ಲಿದ್ದರೂ ಶಿಶುವು ಮರಣ ಹೊಂದುವುದು ಪಾಪಗ್ರಹರ ಮಧ್ಯದಲ್ಲಿರುವ ಚಂದ್ರನು ಲಗ್ನದಲ್ಲಿದ್ದು ಪಾಪಗ್ರಹರು ಸಪ್ತಮ ಅಥವಾ ಅಷ್ಟಮದಲ್ಲಿದ್ದರೆ ಚಂದ್ರನ ಮೇಲೆ ಬಲವತ್ತರವಾದ ಶುಭಗ್ರಹರ ದೃಷ್ಟಿ ಇಲ್ಲದಿದ್ದರೆ ಹುಟ್ಟಿದ ಮಗುವು ತಾಯಿಯ ಸಹಿತವಾಗಿ ಮರಣವನ್ನು ಹೊಂದುವುದು ಇಲ್ಲಿ ಬಲಯುಕ್ತವಾದ ಶುಭಗ್ರಹಗಳಿಂದ ಚಂದ್ರನು ನೋಡಲ್ಪಟ್ಟರೆ ಶಿಶುವಿಗೂ ತಾಯಿಗೂ ವ್ಯಾಧಿಯುಂಟಾಗುವುದು ಮರಣವಾಗುವುದಿಲ್ಲವೆಂತ ಅನುಭವಕ್ಕೆ ಬರುವುದು

**ರಾಶ್ಯಂತಗೆ ಸದ್ಭಿರ ವೀಕ್ಷ್ಯಮಾಣೇ ।**
**ಚಂದ್ರೇ ತ್ರಿಕೋಣೋ ಪಗತೈಶ್ಚ ಪಾಪೈಃ ॥**
**ಪ್ರಾಣೈಃ ಪ್ರಯಾತ್ಯಾಶು ಶಿಶುರ್ವಿಯೋಗ ।**
**ಮಸ್ತೇ ಚ ಪಾಪೈಸ್ತುಹಿನಾಂಶು ಲಗ್ನೇ ॥೮॥**

ಜನ್ಮಕಾಲದಲ್ಲಿ ಶುಭದೃಷ್ಟಿಯಿಲ್ಲದ ಚಂದ್ರನು ರಾಶಿಯ ಅಂತ್ಯ ನವಾಂಶದಲ್ಲಿದ್ದು, ಪಂಚಮ ನವಮಗಳಲ್ಲಿ ಪಾಪಗ್ರಹಗಳಿದ್ದರೆ ಅಥವಾ ಲಗ್ನದಲ್ಲಿ ಚಂದ್ರನಿದ್ದು, ಸಪ್ತಮದಲ್ಲಿ ಪಾಪಗ್ರಹ ಗಳಿದ್ದರೂ ಹುಟ್ಟಿದ ಮಗುವು ಶೀಘ್ರವೇ ಮರಣ ಹೊಂದುವುದು.

**ಅಶುಭ ಸಹಿತೇಗ್ರಸ್ತೇ ಚಂದ್ರೇ ಕುಜೇ ನಿಧನಾಶ್ರಿತೇ ।**
**ಜನನಿ ಸುತಯೋರ್ಮೃತ್ಯುರ್ಲಗ್ನೇ ರವೌತು ಸ ಶಸ್ತ್ರಜಃ ॥**
**ಉದಯತಿ ರವೌ ಶೀತಾಂಶೌವಾ ತ್ರಿಕೋಣ ವಿನಾಶಗೈ ।**
**ರ್ನಿಧನಮಶುಭೈರ್ವೀರ್ಯೋಪೇತೈಃ ಶುಭೈರ್ನಯುತೇಕ್ಷಿತೇ ॥೯॥**

ಜನ್ಮಕಾಲದಲ್ಲಿ ಚಂದ್ರನು ಶನಿಯಿಂದ ಕೂಡಿ ಲಗ್ನದಲ್ಲಿದ್ದು ರಾಹು ಅಥವಾ ಕೇತುವಿನಿಂದ ಗ್ರಸ್ತವಾಗಿ ಅಷ್ಟಮದಲ್ಲಿ ಕುಜನಿದ್ದರೆ ತಾಯಿ ಸಹಿತವಾಗಿ ಮಗುವಿಗೆ ಮರಣ ಉಂಟಾಗುವು ದೆಂದೂ, ಹಾಗೆಯೇ ರವಿಯು ಶನಿಯಿಂದ ಕೂಡಿ ಲಗ್ನದಲ್ಲಿದ್ದು ರಾಹು ಅಥವಾ ಕೇತುವಿನಿಂದ ಗ್ರಸ್ತನಾಗಿ ಅಷ್ಟಮದಲ್ಲಿ ಕುಜನಿದ್ದರೆ ತಾಯಿ ಮತ್ತು ಮಗುವಿಗೆ ಶಸ್ತ್ರಚಿಕಿತ್ಸೆಯಿಂದುಂಟಾದ ಮರಣವು ಸಂಭವಿಸುವುದು. ಲಗ್ನದಲ್ಲಿ ರವಿಯಾಗಲಿ ಚಂದ್ರನಾಗಲಿ ಬಲವಂತರಾದ ಶುಭಗ್ರಹ ರಿಂದ ಕೂಡಲ್ಪಡದೆ ಅಥವಾ ನೋಡಲ್ಪಡದೆ ಇದ್ದು ಪಂಚಮ ನವಮ ಅಷ್ಟಮಗಳಲ್ಲಿ ಪಾಪ ಗ್ರಹಗಳಿದ್ದರೆ, ಹುಟ್ಟಿದ ಮಗುವಿಗೆ ಮರಣವನ್ನು ಹೇಳತಕ್ಕದ್ದು.

**ಅಸಿತರವಿ ಶಶಾಂಕ ಭೂಮಿಜೈ ರ್ವ್ಯಯನವಮೋದಯ ನೈಧನಾಶ್ರಿತೈಃ ।**
**ಭವತಿ ಮರಣಮಾಶು ದೇಹಿನಾಂ ಯದಿ ಬಲಿನಾ ಗುರುಣಾ ನ ವೀಕ್ಷಿತಾಃ ॥೧೦॥**

ಜನ್ಮಕಾಲದಲ್ಲಿ ಲಗ್ನದಿಂದ ವ್ಯಯದಲ್ಲಿ ಶನಿ, ನವಮದಲ್ಲಿ ರವಿ, ಲಗ್ನದಲ್ಲಿ ಚಂದ್ರ, ಅಷ್ಟಮದಲ್ಲಿ ಕುಜ ಹೀಗಿದ್ದು ಬಲವಂತನಾದ ಗುರುವಿನ ದೃಷ್ಟಿ ಇಲ್ಲದಿದ್ದರೆ, ಹುಟ್ಟಿದ ಮಗುವಿಗೆ ತತ್ಕಾಲ ಮರಣ ಉಂಟಾಗುವುದು.

ಸುತಮದನ ನವಾಂತ್ಯ ಲಗ್ನರಂಧ್ರೇಷ್ವ ।
ಶುಭಯುತೋ ಮರಣಾಯ ಶೀತರಶ್ಮಿಃ ॥
ಭೃಗುಸುತ ಶಶಿಪುತ್ರ ದೇವಪೂಜ್ಯೈರ್ಯದಿ ।
ಬಲಿಭಿರ್ನಯುತೋಽವಲೋಕಿತೋವಾ ॥೧೧॥

ಜನ್ಮಕಾಲದಲ್ಲಿ ಚಂದ್ರನು ಪಾಪಯುಕ್ತನಾಗಿ ಪಂಚಮ, ಸಪ್ತಮ, ನವಮ, ದ್ವಾದಶ, ಲಗ್ನ, ಅಷ್ಟಮದಲ್ಲಿ ಎಲ್ಲಿಯಾದರೂ ಒಂದು ರಾಶಿಯಲ್ಲಿದ್ದು, ಬಲಶಾಲಿಗಳಾದ ಶುಕ್ರ, ಬುಧ, ಗುರುಗಳಲ್ಲಿ ಯಾವುದಾದರೂ ಗ್ರಹರಿಂದ ನೋಡಲ್ಪಡದೆ ಯಾ ಕೂಡಲ್ಪಡದೆ ಇದ್ದರೆ ಹುಟ್ಟಿದ ಮಗುವಿಗೆ ಮರಣ ಉಂಟಾಗುವುದು

ಯೋಗೇ ಸ್ಥಾನಂ ಗತವತಿ ಬಲಿನ ।
ಶ್ಚಂದ್ರೇಸ್ವಂ ವಾ ತನುಗ್ರಹ ಮಥವಾ ॥
ಪಾಪೈರ್ದೃಷ್ಟೇ ಬಲವತಿ ಮರಣಂ ।
ವರ್ಷಸ್ಯಾಂತೇ ಕಿಲಮುನಿ ಗದಿತಂ ॥೧೨॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಬಾಲಾರಿಷ್ಟ ನಿರೂಪಣಂ ನಾಮ ಷಷ್ಠೋಧ್ಯಾಯಃ ॥

ಜನ್ಮಕಾಲದಲ್ಲಿ ಅರಿಷ್ಟಯೋಗವನ್ನುಂಟುಮಾಡುವ ಬಲಿಷ್ಠರಾದ ಪಾಪಗ್ರಹರಿರುವ ರಾಶಿಗೆ ಚಂದ್ರನು ಯಾವಾಗ ಬರುವನೋ ಅಥವಾ ಜನ್ಮಕಾಲದ ಚಂದ್ರ ಇಲ್ಲದಿದ್ದರೆ ಲಗ್ನರಾಶಿಗೆ ಚಂದ್ರನು ಬಂದು ಬಹಳ ಪಾಪಗ್ರಹರ ಬಲವತ್ತರವಾದ ದೃಷ್ಟಿ ಇರುವ ಕಾಲದಲ್ಲಿ ಒಂದು ವರ್ಷದೊಳಗೆ ಮಗುವಿಗೆ ಮರಣವುಂಟಾಗುವುದೆಂದು ಋಷಿಗಳಿಂದ ಹೇಳಲ್ಪಟ್ಟಿದೆ.

॥ ಬಾಲಾರಿಷ್ಟವೆಂಬ ಆರನೆಯ ಅಧ್ಯಾಯವು ॥

## ॥ ಆಯುರ್ದಾಯಾಧ್ಯಾಯಃ ॥

**ಮಯಯವನ ಮಣಿತ್ಥ ಶಕ್ತಿ ಪೂರ್ವೈರ್ದಿವಸ ಕರಾದಿಷು ವತ್ಸರಾಃ ಪ್ರದಿಷ್ಟಾಃ ॥**
**ನವತಿಥಿ ವಿಷಯಾಶ್ವಿ ಭೂತರುದ್ರೈರ್ದಶ ಸಹಿತಾ ದಶಭಿಃ ಸ್ವ ತುಂಗಗೇಷು ॥೧॥**

ಮಯ, ಯವನ, ಮಣಿತ್ಥ, ಪರಾಶರಾದಿ ಆಚಾರ್ಯರುಗಳಿಂದ ಸೂರ್ಯಾದಿ ಗ್ರಹರಿಗೆ ಪರಮೋಚ್ಚ ಭಾಗದಲ್ಲಿರುವಾಗ ಆಯುಷ್ಯದ ಪ್ರಮಾಣ ವರ್ಷಗಳು ಹೇಳಲ್ಪಟ್ಟಿವೆ. ಅದು ಕ್ರಮ ವಾಗಿ (ಸೂರ್ಯಾದಿ ಗ್ರಹರಿಗೆ ೯-೧೫-೫-೨-೫-೧೧-೧೦ ಈ ಸಂಖ್ಯೆಗಳಿಗೆ ೧೦ ಕೂಡಿಸು ವುದು). ಸೂರ್ಯನಿಗೆ ೧೯, ಚಂದ್ರನಿಗೆ ೨೫, ಕುಜನಿಗೆ ೧೫, ಬುಧನಿಗೆ ೧೨, ಗುರುವಿಗೆ ೧೫, ಶುಕ್ರನಿಗೆ ೨೧, ಶನಿಗೆ ೨೦ ಹೀಗೆ ೧೨೭ ವರ್ಷಗಳ ಪರಮಾಯುಸ್ಸನ್ನು ಕೊಡುತ್ತಾರೆ ಎಂದು ಹೇಳಲ್ಪಟ್ಟಿದೆ

**ನೀಚೇಚಾರ್ಧಂ ಹ್ರಸತಿಹಿ ತತಶ್ಚಾಂತರಸ್ಥೇನು ಪಾತೋ ।**
**ಹೋರಾತ್ವಂಶ ಪ್ರತಿಮ ಮಪರೇರಾಶಿ ತುಲ್ಯಂವದಂತಿ ॥**
**ಹಿತ್ವಾವಕ್ರಂ ರಿಪು ಗ್ರಹಗತೇ ಹ್ರೀಯತೇ ಸ್ವತ್ರಿಭಾಗಃ ।**
**ಸೂರ್ಯಾಚ್ಛನ್ನ ದ್ಯುತಿಷು ಚ ದಲಂ ಪ್ರೋಜ್ಝ್ಯ ಶುಕ್ರಾರ್ಕ ಪುತ್ರೌ ॥೨॥**

ಗ್ರಹರು ಪರಮನೀಚದಲ್ಲಿದ್ದರೆ ಹಿಂದೆ ಹೇಳಿದ ಪರಮ ಆಯುಸ್ಸಿನಲ್ಲಿ ಅರ್ಧವನ್ನು (ಹ್ರಾಸ) ಕಡಿಮೆ ಮಾಡುವರು. ಅಂದರೆ ರವಿಗೆ ೯ ವರ್ಷ ೬ ತಿಂಗಳು, ಚಂದ್ರನಿಗೆ ವರ್ಷ ೧೨.೬, ಕುಜನಿಗೆ ವರ್ಷ ೭.೬, ಬುಧನಿಗೆ ವರ್ಷ ೬.೦, ಗುರುವಿಗೆ ವರ್ಷ ೭ ೬, ಶುಕ್ರನಿಗೆ ವರ್ಷ ೧೦ ೬, ಶನಿಗೆ ವರ್ಷ ೧೦.೦ ಆಗುವುದು ಗ್ರಹರ ಉಚ್ಛ ಮತ್ತು ನೀಚಕ್ಕೆ ೬ ರಾಶಿಗಳ ಅಂತರ ವಾಗುವುದು. ಅದನ್ನು ಅನುಪಾತದಿಂದ ತರುವುದು. ಲಗ್ನಗತ ನವಾಂಶದಷ್ಟು ವರ್ಷಗಳು ಉಳಿದ ಅಂಶ ಕಲಾದಿಗಳಿಂದ ಮಾಸ, ದಿನ, ಘಟ್ಯಾದಿಗಳನ್ನು ತಂದಲ್ಲಿ ಲಗ್ನಾಯುಸ್ಸು ಆಗುವುದು. ಕೆಲವರು ಕಳೆದ ರಾಶಿಗಳಷ್ಟು ವರ್ಷಗಳೆಂತ ಹೇಳುತ್ತಾರೆ. ವಕ್ರಿಯಾದ ಗ್ರಹವನ್ನು ಬಿಟ್ಟು (ಇಲ್ಲಿ ಕೆಲವರು ವಕ್ರಂ ಎಂದರೆ ಕುಜನು ಎಂತ ಹೇಳುತ್ತಾರೆ). ಉಳಿದ ಗ್ರಹರು ಶತ್ರುಕ್ಷೇತ್ರದಲ್ಲಿದ್ದರೆ ಅವರಿಗೆ ಬಂದ ಆಯುಸ್ಸಿನಲ್ಲಿ ಮೂರನೆ ಒಂದಂಶವನ್ನೂ, ಶನಿ ಶುಕ್ರರನ್ನು ಬಿಟ್ಟು ಬಾಕಿ ಉಳಿದ ಗ್ರಹಗಳು ಅಸ್ತರಾಗಿದ್ದರೆ, ಅವರಿಗೆ ಬಂದ ಆಯುಸ್ಸಿನಲ್ಲಿ ಅರ್ಧವೂ (ಹ್ರಾಸ) ಕಡಿಮೆಯಾಗುವು ದೆಂದು ಹೇಳಲ್ಪಟ್ಟಿದೆ.

**॥ ಗ್ರಹರು ಉಚ್ಚನೀಚಾದಿಗಳಲ್ಲಿರುವಾಗ ಆಯುರ್ವರ್ಷಗಳ ಸ್ಪಷ್ಟಾರ್ಥ ಕೋಷ್ಟಕ ॥**

| ಗ್ರಹರು | ಉಚ್ಚ ರಾಶ್ಯಾದಿ | | ಉಚ್ಚ ವರ್ಷಾದಿ | | ನೀಚ ರಾಶ್ಯಾದಿ | | ನೀಚ ವರ್ಷಾದಿ | |
|---|---|---|---|---|---|---|---|---|
| | ರಾಶಿ | ಭಾಗ | ವರ್ಷ | ಮಾಸ | ರಾಶಿ | ಭಾಗ | ವರ್ಷ | ಮಾಸ |
| ರವಿ | ೦ | ೧೦ | ೧೯ | ೦೦ | ೬ | ೧೦ | ೯ | ೬ |
| ಚಂದ್ರ | ೧ | ೩ | ೨೫ | ೦೦ | ೭ | ೩ | ೧೨ | ೬ |
| ಕುಜ | ೯ | ೨೮ | ೧೫ | ೦೦ | ೩ | ೨೮ | ೭ | ೬ |
| ಬುಧ | ೫ | ೧೫ | ೧೨ | ೦೦ | ೧೧ | ೧೫ | ೬ | ೦೦ |
| ಗುರು | ೩ | ೫ | ೧೫ | ೦೦ | ೯ | ೫ | ೭ | ೬ |
| ಶುಕ್ರ | ೧೧ | ೨೭ | ೨೧ | ೦೦ | ೫ | ೨೭ | ೧೦ | ೬ |
| ಶನಿ | ೬ | ೨೦ | ೨೦ | ೦೦ | ೦ | ೨೦ | ೧೦ | ೦೦ |

## ॥ ಗಣಿತ ಕ್ರಮ ॥

ಗ್ರಹದ ಅತ್ಯುಚ್ಚ ಬಿಂದುವಿನಿಂದ ಗ್ರಹವನ್ನು ಕಳೆದು ೬ ರಾಶಿಗಿಂತ ಕಡಿಮೆ ಇದ್ದರೆ ೧೨ ರಾಶಿಯಲ್ಲಿ ಕಳೆದು ೬ ರಾಶಿಗಿಂತ ಹೆಚ್ಚಾಗಿದ್ದರೆ ಹಾಗೆಯೇ ಇಟ್ಟು ಕಲೆಗಳನ್ನಾಗಿ ಮಾಡಿ ಆ ಗ್ರಹಕ್ಕೆ ಹೇಳಿದ ವರ್ಷ ಸಂಖ್ಯೆಯಿಂದ ಗುಣಿಸಿ ಕಲಾ ೨೧೬೦೦ರಿಂದ ಭಾಗಿಸಿ ಬಂದ ಲಬ್ಧವು ಪಿಂಡಾಯುವೆಂದು ಹೇಳಲ್ಪಟ್ಟು ವರ್ಷ ಮಾಸಾದಿಗಳನ್ನು ತೋರಿಸುತ್ತದೆ. ಮುಂದಿನ ಕ್ರಮದಲ್ಲಿ ಗುಣಿಸಿದರೆ ಅತೀ ಸೂಕ್ಷ್ಮವಾಗುವುದು.

ಉಚ್ಚ ಮತ್ತು ನೀಚದಲ್ಲಿರುವ ಗ್ರಹರ ಆಯುರ್ದಾಯವರ್ಷ ಪ್ರಮಾಣಗಳು ಹೇಳಲ್ಪಟ್ಟಿದೆ. ಉಚ್ಚ ನೀಚ ಈ ಎರಡರ ಮಧ್ಯದಲ್ಲಿರುವ ಗ್ರಹರ ಆಯುರ್ದಾಯ ವರ್ಷಾದಿಗಳನ್ನು ತ್ರೈರಾಶಿಕದಿಂದ ತರಬೇಕಾಗುವುದು. ಉಚ್ಚ ಮತ್ತು ನೀಚದ ಅಂತರ ಆರುರಾಶಿ ಎಂದರೆ ಭಗಣಾರ್ಧ. ಇದನ್ನು ಕಲೆಗಳನ್ನಾಗಿ ಮಾಡಿದರೆ ೧೦೮೦೦ ಆಗುವುದು. ಉಚ್ಚದಿಂದ ಮುಂದೆ ಗ್ರಹರಿದ್ದರೆ ಗ್ರಹರ ಸ್ಫುಟದಲ್ಲಿ ಉಚ್ಚವನ್ನು ಕಳೆದು, ಉಳಿದುದನ್ನು ಕಲೆಗಳನ್ನಾಗಿ ಮಾಡುವುದು. ಹಾಗೆಯೇ ಸ್ವನೀಚದಿಂದ ಮುಂದೆ ಗ್ರಹರಿದ್ದರೆ ಗ್ರಹಸ್ಫುಟದಲ್ಲಿ ನೀಚವನ್ನು ಕಳೆದು, ಉಳಿದುದನ್ನು ಕಲೆಗಳನ್ನಾಗಿ ಮಾಡುವುದು. ಇದಕ್ಕೆ ಭುಕ್ತಕಲೆಗಳೆಂತ ಹೇಳುವರು ಇದನ್ನು ಆಯಾಯ ಗ್ರಹರ ನೀಚಕ್ಕೆ ಹೇಳಿದ ವರ್ಷ ಮಾಸಗಳನ್ನು ಮಾಸ ಮಾಡಿಕೊಂಡು, ಇದರಿಂದ ಆಯಾಯ ಗ್ರಹರ ಭುಕ್ತ ಕಲೆಗಳನ್ನು ಆಯಾಯ ಗ್ರಹರ ನೀಚಕ್ಕೆ ಹೇಳಿದ ಮಾಸಗಳಿಂದ ಗುಣಿಸಿ ಭಗಣಾರ್ಧ ೧೦೮೦೦ ಕಲೆಗಳಿಂದ ಭಾಗಿಸಿದಲ್ಲಿ ಆ ಗ್ರಹದ ಮಾಸಾದಿಗಳು ಸಿಕ್ಕುವುದು. ಶೇಷವನ್ನು ೩೦ರಿಂದ ಗುಣಿಸಿ ಭಗಣಾರ್ಧದಿಂದ ಭಾಗಿಸಿದಲ್ಲಿ ದಿನಗಳೂ ಶೇಷವನ್ನು ೬೦ರಿಂದ ಗುಣಿಸಿ ಹಿಂದಿನಂತೆ ಭಾಗಿಸಿದರೆ ಘಟಿಗಳೂ, ಪುನಃ ಶೇಷಕ್ಕೆ ೬೦ರಿಂದ ಗುಣಿಸಿ ಹಿಂದಿನಂತೆ ಭಾಗಿಸಿದಲ್ಲಿ ವಿಘಟಿಗಳೂ ಸಿಕ್ಕುವುದು. ಆಗ ಮಾಸಾದಿ ಆ ಗ್ರಹವು ಕೊಟ್ಟ ಆಯುಃಪ್ರಮಾಣವಾಗುವುದು. ಮಾಸಗಳನ್ನು ೧೨ರಿಂದ ಭಾಗಿಸಿದರೆ ಲಬ್ಧಿಯು ವರ್ಷಗಳೆಂತಲೂ ಉಳಿದ ಶೇಷಮಾಸಗಳೆಂತಲೂ ತಿಳಿಯತಕ್ಕದ್ದು. ಈ ಪ್ರಕಾರ ತಂದ ವರ್ಷಾದಿಗಳನ್ನು ಗ್ರಹಸ್ಫುಟದಲ್ಲಿ ಉಚ್ಚವನ್ನು ಕಳೆದು ತಂದದ್ದಿದ್ದರೆ ಆ ಗ್ರಹದ ಉಚ್ಚಕ್ಕೆ ಹೇಳಿದ ವರ್ಷಗಳಲ್ಲಿ ಕಳೆಯುವುದು. ಗ್ರಹರ ಸ್ಫುಟದಲ್ಲಿ ಸ್ವನೀಚವನ್ನು ಕಳೆದು ತಂದದ್ದಿದ್ದರೆ ಆ ಗ್ರಹದ ನೀಚಕ್ಕೆ ಹೇಳಿದ ವರ್ಷಾದಿಗಳಿಗೆ ಕೂಡಿಸುವುದು. ಆಗ ಆ ಗ್ರಹವು ಕೊಟ್ಟ ಆಯುರ್ವರ್ಷಗಳಾಗುವುದು. (ಇಲ್ಲಿ ಭಗಣಾರ್ಧ ಕಲೆಗಳನ್ನು ವಿಕಲೆಗಳನ್ನಾಗಿ ಮಾಡಿದರೆ ೧೦೮೦೦×೬೦= ೬೪೮೦೦೦ ಆಗುವುದು, ಇದರಿಂದ ಗ್ರಹರ ಭುಕ್ತಕಲೆಗಳನ್ನು ವಿಕಲೆಗಳನ್ನಾಗಿ ಮಾಡಿ ಮೊದಲಿನಂತೆ ಗುಣಿಸಿ ಭಗಣಾರ್ಧ ವಿಕಲೆಗಳಿಂದ ಭಾಗಿಸಿದಲ್ಲಿ ಅತೀ ಸೂಕ್ಷ್ಮವಾಗುವುದು.)

## ಉದಾಹರಣೆ

ಶ್ರೀ ಗಣಾಧಿಪತಯೇ ನಮಃ ॥ ಸ್ವಸ್ತಿ ಶ್ರೀ ವಿಜಯಾಭ್ಯುದಯ ಶ್ರೀಮನ್ನೃಪ ಶಾಲಿವಾಹನ ಶಕ ವರ್ಷ ೧೯೦೧ ಸಿದ್ಧಾರ್ಥನಾಮ ಸಂ।ರದ ಉತ್ತರಾಯಣ ಗ್ರೀಷ್ಮ ಋತು ಜ್ಯೇಷ್ಠ ಶುಕ್ಲ ೧೫ ಯು ರವಿವಾರ ಘಟಿ ೨೮ ವಿ. ೩೨ ಜ್ಯೇಷ್ಠ ನಿತ್ಯನಕ್ಷತ್ರ ಘ. ೪೭ ವಿ. ೩೫ ಸಾಧ್ಯನಾಮ ಯೋಗ ಘ ೩೮ ವಿ ೨ ಭದ್ರಾಕರಣ ಘ. ೦ ವಿ ೫೨ ದಿವಾ ಪ್ರಮಾಣ ಘ. ೩೨.೦೦ ರಾತ್ರಿ ಮಾನ ೨೮.೦೦ ಅಯನಾಂಶ ೨೩ ೩೪.೧೦ ಏವಂ ಉದಯ ಪಂಚಾಂಗ ಶುದ್ಧಿಃ ಅಕ್ಷಾಂಶ ೧೨.೫೨ ರೇಖಾಂಶ ೭೪.೫೦.

### ॥ ನವೀನ ದೃಕ್‌ಸಿದ್ಧಾಂತ ಪ್ರಕಾರ ಗ್ರಹರ ಸ್ಫುಟಾದಿಗಳು ॥

| ಗ್ರಹರ ಸ್ಫುಟಾದಿಗಳು | | | | | |
|---|---|---|---|---|---|
| ಗ್ರಹರು | ರಾಶಿ | ಭಾಗ | ಕಲಾ | ವಿಕಲಾ | ದಿನಗತಿ ಕಲಾ |
| ರವಿ | ೧ | ೨೫ | ೧೪ | ೧೦ | ೫೭ |
| ಚಂದ್ರ | ೭ | ೨೮ | ೧೬ | ೨೩ | ೮೫೦ |
| ಕುಜ | ೦ | ೨೫ | ೧೯ | ೩೪ | ೪೪ |
| ಬುಧ | ೨ | ೯ | ೧೩ | ೫೫ | ೧೧೮ |
| ಗುರು | ೩ | ೧೩ | ೨೦ | ೧೯ | ೧೧ |
| ಶುಕ್ರ | ೧ | ೫ | ೩ | ೩೪ | ೭೩ |
| ಶನಿ | ೪ | ೧೪ | ೨೩ | ೧೨ | ೩ |
| ರಾಹು | ೪ | ೧೯ | ೧೧ | ೩ | ೩ |
| ಕೇತು | ೧೦ | ೧೯ | ೧೧ | ೩ | ೩ |
| ಲಗ್ನಂ | ೮ | ೧೩ | ೧೯ | ೨೪ | ೦ |
| ಮಾಂದಿ | ೯ | ೨೩ | ೪೫ | ೨೬ | ೦ |

### ॥ ಲಗ್ನಾದಿ ಭಾವಸ್ಫುಟ ಮತ್ತು ಭಾವ ಸಂಧಿಸ್ಫುಟ ॥

| ಲಗ್ನಾದಿ ಭಾವಸ್ಫುಟಗಳು | | | | | ಲಗ್ನಾದಿ ಭಾವ ಸಂಧಿಸ್ಫುಟಗಳು | | | | |
|---|---|---|---|---|---|---|---|---|---|
| ಭಾವ | ರಾಶಿ | ಭಾಗ | ಕಲಾ | ವಿಕಲಾ | ಭಾವ ಸಂಧಿ | ರಾಶಿ | ಭಾಗ | ಕಲಾ | ವಿಕಲಾ |
| ಲಗ್ನ | ೮ | ೧೩ | ೧೯ | ೦ | ಲಗ್ನ ದ್ವಿತೀಯ | ೮ | ೨೯ | ೩೩ | ೦ |
| ದ್ವಿತೀಯ | ೯ | ೧೫ | ೪೭ | ೦ | ದ್ವಿತೀಯ ತೃತೀಯ | ೧೦ | ೨ | ೧ | ೦ |
| ತೃತೀಯ | ೧೦ | ೧೮ | ೧೫ | ೦ | ತೃತೀಯ ಚತುರ್ಥ | ೧೧ | ೪ | ೨೬ | ೧ |
| ಚತುರ್ಥ | ೧೧ | ೨೦ | ೪೨ | ೦ | ಚತುರ್ಥ ಪಂಚಮ | ೦ | ೪ | ೨೬ | ೦ |
| ಪಂಚಮ | ೦ | ೧೮ | ೧೫ | ೦ | ಪಂಚಮ ಷಷ್ಠ | ೧ | ೨ | ೧ | ೦ |
| ಷಷ್ಠ | ೧ | ೧೫ | ೪೭ | ೦ | ಷಷ್ಠ ಸಪ್ತಮ | ೧ | ೨೯ | ೩೩ | ೦ |
| ಸಪ್ತಮ | ೨ | ೧೩ | ೧೯ | ೦ | ಸಪ್ತಮಾಷ್ಟಮ | ೨ | ೨೯ | ೩೩ | ೦ |
| ಅಷ್ಟಮ | ೩ | ೧೫ | ೪೭ | ೦ | ಅಷ್ಟಮ ನವಮ | ೪ | ೨ | ೧ | ೦ |
| ನವಮ | ೪ | ೧೮ | ೧೫ | ೦ | ನವಮ ದಶಮ | ೫ | ೪ | ೨೬ | ೦ |
| ದಶಮ | ೫ | ೨೦ | ೪೨ | ೦ | ದಶಮೈಕಾದಶ | ೬ | ೪ | ೨೬ | ೦ |
| ಏಕಾದಶ | ೬ | ೧೮ | ೧೫ | ೦ | ಏಕಾದಶ ವ್ಯಯ | ೭ | ೨ | ೧ | ೦ |
| ದ್ವಾದಶ | ೭ | ೧೫ | ೪೭ | ೦ | ವ್ಯಯ ಲಗ್ನಂ | ೮ | ೪ | ೩೩ | ೦ |

| ೦ | ಕುಜ ೮ | ರವಿ ೫<br>ಶುಕ್ರ ೧೧ | ಬುಧ ೯ |
|---|---|---|---|
| ಕೇತು ೧೨ | ಶ್ರೀ<br>ನವಾಂಶಯುಕ್ತ<br>ಗ್ರಹಚಕ್ರಂ | | ಗುರು ೭ |
| ಮಾಂದಿ ೫ | | | ಶನಿ ೫<br>ರಾಹು ೬ |
| ಲಗ್ನಂ ೪ | ಚಂದ್ರ ೧೨ | ೦ | ೦ |

## ರವಿ ಬಗ್ಗೆ ಉದಾಹರಣೆ

ಪೂರ್ವೋಕ್ತ ಉದಾಹರಣೆ ಕುಂಡಲಿಯ ಪ್ರಕಾರ ರವಿಸ್ಫುಟ ರಾಶಿ ೧.೨೫ ೧೪.೧೦ ರವಿಯ ಉಚ್ಚ ರಾ. ೦.೧೦.೦ ೦ ರವಿ ನೀಚ ರಾ. ೬ ೧೦ ೦ ೦ ಸ್ಪಷ್ಟ ರವಿಯಲ್ಲಿ ರವಿ ಉಚ್ಚವನ್ನು ಕಳೆದದ್ದು ೧ ೨೫ ೧೪ ೧೦—೦ ೧೦ ೦ ೦ ಲಬ್ಧಿ ರಾಶಿ ೧.೧೫ ೧೪ ೧೦ ಇದನ್ನು ವಿಕಲೆ ಮಾಡಿದ್ದು ರಾಶಿ ೧×೩೦+೧೫=೪೫×೬೦=೨೭೦೦+೧೪=೨೭೧೪×೬೦=೧೬೨೮೪೦+೧೦= ಲಬ್ಧಿ ೧೬೨೮೫೦ ವಿಕಲೆಗಳು, ನೀಚ ಮತ್ತು ಉಚ್ಚದ ಅಂತರ ೬ ರಾಶಿಗಳು. ಇದನ್ನು ವಿಕಲೆ ಮಾಡಿದ್ದು, ೬×೩೦=೧೮೦×೬೦=೧೦೮೦೦×೬೦ ಲಬ್ಧಿ ೬೪೮೦೦೦ ವಿಕಲೆಗಳು. ರವಿ ಉಚ್ಚದಲ್ಲಿದ್ದರೆ ೧೯ ವರುಷಗಳು, ನೀಚದಲ್ಲಿದ್ದರೆ ಇದರ ಅರ್ಧ ಅಂದರೆ ೯ ವರ್ಷ ೬ ಮಾಸ ಗಳು. ಇದನ್ನು ಮಾಸ ಮಾಡಿದ್ದು ೧೯×೧೨=೨೨೮ ನೀಚಕ್ಕೆ ೯×೧೨+೬ ೧೧೪ ಅಂದರೆ ೨೨೮—೧೧೪=ಅನುಪಾತ ಕ್ರಮ. ರವಿಯ ಉಚ್ಚ ಮತ್ತು ಗ್ರಹದ ಅಂತರ ವಿಕಲಾ ೧೬೨೮೫೦ ಆಯುರ್ದಾಯ ಮಾಸಾಂತರ ೧೧೪. ಇದರಿಂದ ಗುಣಿಸಿದ್ದು ೧೬೨೮೫೦×೧೧೪ ಲಬ್ಧಿ ೧೮೫೬೪೯೦೦ ಬಾಗಿಸು—೬೪೮೦೦೦ ಲಬ್ಧಿ ೨೮ ಶೇಷ ೪೨೧೯೦೦×೩೦ ಲಬ್ಧಿ ೧೨೬೨೭೦೦೦—೬೪೮೦೦೦ ಲಬ್ಧಿ ೧೯ ಶೇಷ ೩೧೫೦೦೦×೬೦ ಲಬ್ಧಿ ೧೮೯೦೦೦೦೦—೬೪೮೦೦೦ ಲಬ್ಧಿ ೨೯ ಶೇಷ ೧೦೮೦೦೦×೬೦ ಲಬ್ಧಿ ೬೪೮೦೦೦೦—೬೪೮೦೦೦ ಲಬ್ಧಿ ೧೦. ಪೂರ್ವದಲ್ಲಿ ಮಾಸ ೨೮—೧೨ ಲಬ್ಧಿ ವರ್ಷ ೨ ಮಾಸ ೪ ದಿನ ೧೯ ಘಟಿ ೨೯ ವಿಘಟಿ ೧೦ ಆಯ್ತು. ಇದನ್ನು ರವಿಯ ಉಚ್ಚ ವರ್ಷ ೧೯ರಲ್ಲಿ ಕಳದದ್ದು ವರ್ಷ ೧೯.೦.೦.೦.೦—೨.೪.೧೯.೨೯ ೧೦ ಲಬ್ಧಿ ರವಿಯು ಕೊಟ್ಟ ಸ್ಪಷ್ಟಾಯುರ್ವರ್ಷಾದಿಗಳು. ೧೬.೭.೧೦.೩೦.೫೦ ಆಗುವುದು

ವಿ ಸೂ.. ಇದನ್ನು ಸುಲಭದಲ್ಲಿ ತರುವ ಕ್ರಮ. ಗ್ರಹರ ಪರಮೋಚ್ಚದಲ್ಲಿ ಗ್ರಹರ ಸ್ಫುಟವನ್ನು ಕಳೆದು ೬ ರಾಶಿಗಳಿಗೆ ಕಡಿಮೆಯಾಗಿದ್ದರೆ ೧೨ ರಾಶಿಯಲ್ಲಿ ಕಳೆದು ಉಳಿದ ರಾಶಿ ಭಾಗಾದಿಗಳಿಗೆ ಗ್ರಹರ ಪರಮಾಯುರ್ವರ್ಷಗಳಿಂದ ಗುಣಿಸಿದರೆ ಆ ಗ್ರಹವು ಕೊಟ್ಟ ಮಾಸಾದಿ ಆಯುರ್ವರ್ಷಗಳಾಗುವುದೆಂದು ತಿಳಿಯತಕ್ಕದ್ದು

## ಸುಲಭದಲ್ಲಿ ತರುವ ಕ್ರಮ

ಸ್ಪಷ್ಟ ರವಿ ರಾ ೧ ೨೫.೧೪ ೧೦ ರವಿ ಉಚ್ಚ ರಾ ೦ ೧೦ ೦ ೦ ಇದರಲ್ಲಿ ಕಳದದ್ದು ರಾ ೦.೧೦.೦ ೦—೧ ೨೫ ೧೪ ೧೦ ಲಬ್ಧಿ ರಾ ೧೦ ೧೪ ೪೫ ೫೦ ರವಿಯ ಪರಮಾಯುರ್ವರ್ಷ ೧೯ರಿಂದ ಗುಣಿಸಿದ್ದು ೧೦ ೧೪ ೪೫ ೫೦×೧೯ ಲಬ್ಧಿ ವರ್ಷಾದಿ ೧೬ ೭ ೧೦ ೩೦ ೫೦ ಇದೇ ರವಿಯು ಕೊಟ್ಟ ಆಯುರ್ವರ್ಷಗಳು

## ಚಂದ್ರನ ಬಗ್ಗೆ ಉದಾಹರಣೆ

ಚಂದ್ರಸ್ಪುಟ ರಾ ೭.೨೮ ೧೬ ೨೩ ಚಂದ್ರನ ನೀಚರಾಶಿ ೭ ೩ ೦ ೦ ಕಳದದ್ದು ರಾ ೭.೨೮ ೧೬.೨೩—ರಾ ೭ ೩ ೦.೦ ಲಬ್ಧಿ ರಾ. ೦ ೨೫ ೧೬ ೩೨ ಇದನ್ನು ವಿಕಲೆ ಮಾಡಿದ್ದು ಭಾಗ ೨೫×೬೦+೧೬=೧೫೧೬×೬೦+೨೩ ಲಬ್ಧಿ ೯೦೯೮೩ ಚಂದ್ರನ ನೀಚ ವರ್ಷಾದಿ ಮಾಸ ಮಾಡಿ ೧೫೦ರಿಂದ ಗುಣಿಸಿದ್ದು ೯೦೯೮೩×೧೫೦ ಲಬ್ಧಿ ೧೩೬೪೭೪೫೦—೬೪೮೦೦೦ ಲಬ್ಧಿ ೨೧ ಶೇಷ ೩೯೪೫೦×೩೦ ಲಬ್ಧಿ ೧೧೮೩೫೦೦—೬೪೮೦೦೦ ಲಬ್ಧಿ ೧ ಶೇಷ ೫೩೫೫೦೦×೬೦ ಲಬ್ಧಿ ೩೨೧೩೦೦೦೦—೬೪೮೦೦೦ ಲಬ್ಧಿ ೪೯ ಶೇಷ ೩೭೮೦೦೦×೬೦ ಲಬ್ಧಿ ೨೨೬೮೦೦೦೦—೬೪೮೦೦೦ ಲಬ್ಧಿ ೩೫ ಹಿಂದೆ ತಂದ ಮಾಸ ೨೧—೧೨ ಲಬ್ಧಿ ವರ್ಷ ೧.೯ ೧ ೪೯.೩೫ ಆಯ್ತು ಇದನ್ನು ಚಂದ್ರನ ನೀಚಕ್ಕೆ ಹೇಳಿದ ವರ್ಷಗಳಿಗೆ ಕೂಡಿಸುವುದು ವರ್ಷ ೧೨ ೬ ೦ ೦ ೦ + ೧ ೯ ೧ ೪೯ ೩೫ ಲಬ್ಧಿ ವರ್ಷ ೧೪ ಮಾಸ ೩ ದಿನ ೧ ಘ ೪೯ ವಿ ೩೫ ಆಯಿತು ಇದು ಚಂದ್ರನು ಕೊಟ್ಟ ಆಯುರ್ವರ್ಷಗಳು

## ಸುಲಭ ರೀತಿ

ಚಂದ್ರಸ್ಪುಟ ರಾ ೭ ೨೮ ೧೬ ೨೩ ಇದನ್ನು ಚಂದ್ರನ ಉಚ್ಚದಲ್ಲಿ ಕಳದದ್ದು ರಾ ೧ ೩ ೦.೦ — ೭.೨೮.೧೬.೨೩ ಲಬ್ಧಿ ರಾ ೫ ೪ ೪೩ ೩೭ ಇದು ೬ ರಾಶಿಗೂ ಕಡಿಮೆ ಇರುವುದರಿಂದ ಚಕ್ರ ಶುದ್ಧ ಮಾಡಿದ್ದು ರಾಶಿ ೧೨ ೦ ೦ ೦ ೦—೫ ೪.೪೩.೩೭ ಲಬ್ಧಿ ೬ ೨೫ ೧೬ ೨೩×೨೫ ಚಂದ್ರನ ಉಚ್ಚಕ್ಕೆ ಹೇಳಿದ ವರ್ಷದಿಂದ ಗುಣಿಸಿದ್ದು. ಲಬ್ಧಿ ವರ್ಷ ೧೪ ಮಾಸ ೩ ದಿನ ೧ ಘ. ೪೯ ವಿ ೩೫ ಇದು ಚಂದ್ರನು ಕೊಟ್ಟ ಆಯುರ್ವರ್ಷಾದಿಗಳು

## ಕುಜನ ಬಗ್ಗೆ ಉದಾಹರಣೆ

ಸ್ಪಷ್ಟ ಕುಜ ರಾ. ೦.೨೫ ೧೯ ೩೪ ಕುಜನ ಉಚ್ಚ—ರಾ ೯ ೨೮.೦ ೦ ಲಬ್ಧಿ ರಾ ೨ ೨೭ ೧೯.೩೪ ಇದನ್ನು ವಿಕಲೆ ಮಾಡಿದ್ದು ರಾ. ೨×೩೦+೨೭ ಲಬ್ಧಿ. ೮೭×೬೦+೧೯ ಲಬ್ಧಿ ೫೨೩೯×೬೦+೩೪ ೩೧೪೩೭೪×೯೦ ಕುಜನ ನೀಚಕ್ಕೆ ಹೇಳಿದ ಮಾಸದಿಂದ ಗುಣಿಸಿದ ಲಬ್ಧಿ. ೨೮೨೯೩೬೬೦—೬೪೮೦೦೦ ಲಬ್ಧಿ ೪೩ ಶೇಷ ೪೨೯೬೬೦×೩೦ ಲಬ್ಧಿ ೧೨೮೮೯೮೦೦—೬೪೮೦೦೦ ಲಬ್ಧಿ ೧೯ ಶೇಷ ೫೭೭೮೦೦×೬೦ ಲಬ್ಧಿ. ೩೪೬೬೮೦೦೦—೬೪೮೦೦೦ ಲಬ್ಧಿ ೫೩ ಶೇಷ ೩೨೪೦೦೦×೬೦ ಲಬ್ಧಿ ೧೯೪೪೦೦೦೦ — ೬೪೮೦೦೦ ಲಬ್ಧಿ, ೩೦ ಹಿಂದೆತಂದ ಮಾಸ ೪೩ — ೧೨ ಲಬ್ಧಿ ವರ್ಷ ೩.೭ ೧೯.೫೩ ೩೦ ಕುಜನ ಉಚ್ಚಕ್ಕೆ ಹೇಳಿದ ವರ್ಷ ೧೫.೦.೦ ೦ ೦—೩ ೭.೧೯.೫೩.೩೦ ಲಬ್ಧಿ ವರ್ಷ ೧೧ ಮಾಸ ೪ ದಿನ ೧೦ ಘ. ೬ ವಿ ೩೦. ಇದು ಕುಜನು ಕೊಟ್ಟ ಆಯುರ್ವರ್ಷಗಳು.

## ಸುಲಭ ರೀತಿ

ಕುಜನ ಸ್ಫುಟ ರಾ ೦ ೨೫ ೧೯ ೩೪ ಕುಜನ ಉಚ್ಛ ರಾಶಿ ೯ ೨೮ ೦.೦—೦ ೨೫ ೧೯.೩೪. ಲಬ್ಧಿ ರಾ ೯ ೨ ४೦ ೨೬ ಕುಜನ ಉಚ್ಛಕ್ಕೆ ಹೇಳಿದ ವರ್ಷ ೧೫ರಿಂದ ಗುಣಿಸಿದ್ದು ೯ ೨ ४೦ ೨೬X೧೫ ಲಬ್ಧಿ ವರ್ಷ ೧೧ ಮಾಸ ४ ದಿನ ೧೦ ಘ. ೬ ವಿ ೩೦ ಇದು ಕುಜನು ಕೊಟ್ಟ ಆಯುರ್ವರ್ಷಗಳು

## ಬುಧನ ಬಗ್ಗೆ ಉದಾಹರಣೆ

ಬುಧನ ಸ್ಫುಟ ರಾ ೨ ೯ ೧೩ ೫೫ ಬುಧನ ನೀಚ—ರಾ ೧೧ ೧೫ ೦ ೦ ಲಬ್ಧಿ ರಾಶ್ಯಾದಿ ೨.೨४.೧೩.೫೫ ವಿಕಲೆ ಮಾಡಿದ್ದು. ರಾಶಿ ೨X೩೦+೨४ ಲಬ್ಧಿ ೮४X೬೦+೧೩ ಲಬ್ಧಿ ೫೦೫೩X೬೦+೫೫ ಲಬ್ಧಿ ೩೦೩೨೩೫Xಬುಧನ ನೀಚಕ್ಕೆ ಹೇಳಿದ ಮಾಸ ೭೨ರಿಂದ ಗುಣಿಸಿದ್ದು ೩೦೩೨೩೫X೭೨ ಲಬ್ಧಿ ೨೧೮೩೨೯೨೦—೬४೮೦೦೦ ಲಬ್ಧಿ ೩೩ ಶೇಷ ४४೮೯೨೦X೩೦ ಲಬ್ಧಿ ೧೩४೬೭೬೦೦—೬४೮೦೦೦ ಲಬ್ಧಿ ೨೦ ಶೇಷ ೫೦೭೬೦೦X೬೦ ಲಬ್ಧಿ—೩೦४೫೬೦೦೦—೬४೮೦೦೦ ಲಬ್ಧಿ ४೭ ಶೇಷ ಇಲ್ಲ. ಹಿಂದೆತಂದ ಮಾಸ ೩೩—೧೨ ಲಬ್ಧಿ ವರ್ಷ ೨ ಮಾಸ ೯ ದಿನ ೨೦ ಘ ४೭ ವಿ ೦ ಬುಧನ ನೀಚಕ್ಕೆ ಹೇಳಿದ ವರ್ಷ+೬ ಕೂಡಿಸಿ ವರ್ಷ ೮ ಮಾಸ ೯ ದಿನ ೨೦ ಘ ४೭ ವಿ ೦ ಇದು ಬುಧನು ಕೊಟ್ಟ ಆಯುರ್ವರ್ಷಗಳು

## ಸುಲಭ ರೀತಿ

ಬುಧಸ್ಫುಟ ರಾ ೨.೯.೧೩ ೫೫ ಬುಧನ ಉಚ್ಛ ರಾಶಿ ೫ ೧೫ ೦.೦—೨ ೯ ೧೩.೫೫ ಲಬ್ಧಿ ರಾಶಿ ೩ ೫ ४೬ ೫. ಚಕ್ರಶುದ್ಧ ಮಾಡಿದ್ದು ರಾ. ೧೨ ೦.೦.೦—೩ ೫ ४೬ ೫ ಲಬ್ಧಿ ೮ ೨४.೧೩.೫೫ ಬುಧನ ಉಚ್ಛಕ್ಕೆ ಹೇಳಿದ ವರ್ಷ ೧೨ರಿಂದ ಗುಣಿಸಿದ್ದು ೮ ೨४ ೧೩ ೫೫X೧೨ ಲಬ್ಧಿ ವರ್ಷಾದಿ. ೮.೯ ೨೦ ४೭ ೦ ಇದೇ ಬುಧನು ಕೊಟ್ಟ ಆಯುರ್ವರ್ಷಗಳು

## ಗುರುವಿನ ಬಗ್ಗೆ ಉದಾಹರಣೆ

ಸ್ಪಷ್ಟ ಗುರು ರಾ ೩.೧೩.೨೦ ೧೯. ಇದರಲ್ಲಿ ಗುರು ಉಚ್ಛವನ್ನು ಕಳದದ್ದು ೩ ೧೩.೨೦.೧೯—೩ ೫.೦ ೦ ಲಬ್ಧಿ ೦ ೮.೨೦ ೧೯. ವಿಕಲಾ ಮಾಡಿದ್ದು ರಾ. ೦.೮X೬೦+೨೦ ಲಬ್ಧಿ ೫೦೦X೬೦+೧೯ ಲಬ್ಧಿ ೩೦೦೧೯ ಗುರುವಿನ ನೀಚಕ್ಕೆ ಹೇಳಿದ ಮಾಸ ೯೦ರಿಂದ ಗುಣಿಸಿದ್ದು. ೩೦೦೧೯X೯೦ ಲಬ್ಧಿ ೨೭೦೧೭೧೦—೬४೮೦೦೦ ಲಬ್ಧಿ ४ ಶೇಷ ೧೦೯೭೧೦X೩೦. ಲಬ್ಧಿ ೩೨೯೧೩೦೦—೬४೮೦೦೦ ಲಬ್ಧಿ ೫ ಶೇಷ ೫೧೩೦೦X೬೦ ಲಬ್ಧಿ ೩೦೭೮೦೦೦—೬४೮೦೦೦ ಲಬ್ಧಿ ४ ಶೇಷ ४೮೬೦೦೦X೬೦ ಲಬ್ಧಿ ೨೯೧೬೦೦೦೦—೬४೮೦೦೦ ಲಬ್ಧಿ ४೫ಕ್ಕೆ ಶೇಷ ಇಲ್ಲ ೦ . ಹಿಂದೆತಂದ ಮಾಸು ४ ವರ್ಷ ೦ ४.೫ ४ ४೫ ಗುರುವಿನ ಉಚ್ಛಕ್ಕೆ ಹೇಳಿದ ವರ್ಷ ೧೫ರಲ್ಲಿ ಕಳದದ್ದು ವರ್ಷ ೧೫.೦.೦.೦ ೦—೦ ४.೫ ४ ४೫. ಲಬ್ಧಿ ವರ್ಷ ೧४ ಮಾಸ ೭ ದಿನ ೨४ ಘಟಿ ೫೫ ವಿ ೧೫. ಇದು ಗುರು ಕೊಟ್ಟ ಆಯುರ್ವರ್ಷಗಳು.

## ಸುಲಭ ರೀತಿ

ಸ್ಪಷ್ಟ ಗುರು ರಾ ೩ ೧೩.೨೦.೧೯. ಗುರುವಿನ ಉಚ್ಚ ರಾ ೩ ೫ ೦ ೦—೩ ೧೩ ೨೦.೧೯ ಲಬ್ಧಿ ೧೧.೨೧ ೩೯.೪೧ ಗುರುವಿಗೆ ಉಚ್ಚಕ್ಕೆ ಹೇಳಿದ ವರ್ಷ ೧೫ರಿಂದ ಗುಣಿಸಿದ್ದು. ರಾಶಿ ೧೧.೨೧ ೩೯.೪೧×೧೫ ಲಬ್ಧಿ ವರ್ಷಾದಿ ೧೪ ೭ ೨೪ ೫೫ ೧೫ ಇದು ಗುರುವು ಕೊಟ್ಟ ಆಯುರ್ವರ್ಷಗಳು.

## ಶುಕ್ರನ ಬಗ್ಗೆ ಉದಾಹರಣೆ

ಶುಕ್ರಸ್ಫುಟ ರಾ ೧.೫.೩.೩೪ ಶುಕ್ರನ ಉಚ್ಚವನ್ನು ಕಳದದ್ದು ರಾ ೧.೫ ೩ ೩೪—ರಾ ೧೧.೨೭.೦ ೦ ಲಬ್ಧಿ ರಾ ೧ ೮.೩ ೩೪. ವಿಕಲೆ ಮಾಡಿದ್ದು ೧×೩೦+೮ ಲಬ್ಧಿ ೩೮×೬೦+೩ ಲಬ್ಧಿ ೨೨೮೩×೬೦+೩೪ ಲಬ್ಧಿ ೧೩೭೦೧೪ ಶುಕ್ರನ ನೀಚಕ್ಕೆ ಹೇಳಿದ ಮಾಸ ೧೨೬ದಿಂದ ಗುಣಿಸಿದ್ದು ೧೩೭೦೧೪×೧೨೬ ಲಬ್ಧಿ ೧೭೨೬೩೭೬೪—೬೪೮೦೦೦ ಲಬ್ಧಿ ೨೬ ಶೇಷ ೪೧೫೭೬೪×೩೦ ಲಬ್ಧಿ ೧೨೪೭೨೯೨೦—೬೪೮೦೦೦ ಲಬ್ಧಿ ೧೯ ಶೇಷ ೧೬೦೯೨೦×೬೦ ಲಬ್ಧಿ ೯೬೫೫೨೦೦—೬೪೮೦೦೦ ಲಬ್ಧಿ ೧೪ ಶೇಷ ೫೮೩೨೦೦×೬೦ ಲಬ್ಧಿ ೩೪೯೯೨೦೦೦—೬೪೮೦೦೦ ಲಬ್ಧಿ ೫೪. ಹಿಂದೆತಂದ ಮಾಸ ೨೬—೧೨ ಲಬ್ಧಿ ವರ್ಷ ೨.೨ ೧೯.೧೪ ೫೪ ಶುಕ್ರನಿಗೆ ಉಚ್ಚಕ್ಕೆ ಹೇಳಿದ ವರ್ಷದಲ್ಲಿ ಕಳೆದದ್ದು ವರ್ಷ ೨೧.೦.೦.೦.೦—೨.೨.೧೯.೧೪.೫೪ ಲಬ್ಧಿ ವರ್ಷ ೧೮ ೯.೧೦.೪೫ ೬. ಇದು ಶುಕ್ರನು ಕೊಟ್ಟ ಆಯುರ್ವರ್ಷಗಳು

## ಸುಲಭ ರೀತಿ

ಶುಕ್ರಸ್ಫುಟ ರಾ ೧ ೫ ೩ ೩೪ ಇದನ್ನು ಶುಕ್ರನ ಉಚ್ಚದಲ್ಲಿ ಕಳೆದದ್ದು ೧೧.೨೭.೦.೦—೧.೫ ೩.೩೪ ಲಬ್ಧಿ ೧೦.೨೧.೫೬.೨೬. ಶುಕ್ರೋಚ್ಚ ವರ್ಷ ೨೧ರಿಂದ ಗುಣಿಸಿದ್ದು ೧೦.೨೧.೫೬.೨೬×೨೧ ಲಬ್ಧಿ ವರ್ಷದಿ ಮಾಡಿ, ವರ್ಷ ೧೮.೯.೧೦.೪೫.೬. ಇದು ಶುಕ್ರನು ಕೊಟ್ಟ ಆಯುರ್ವರ್ಷಗಳು.

## ಶನಿಯ ಬಗ್ಗೆ ಉದಾಹರಣೆ

ಸ್ಪಷ್ಟ ಶನಿ ರಾ. ೪.೧೪.೨೩.೧೨ ಶನಿಯ ನೀಚವನ್ನು ಕಳದದ್ದು ೪.೧೪.೨೩ ೧೨—೦ ೨೦.೦.೦. ಲಬ್ಧಿ ೩.೨೪.೨೩.೧೨. ವಿಕಲೆ ಮಾಡಿದ್ದು ರಾಶಿ ೩×೩೦+೨೪ ಲಬ್ಧಿ ೧೧೪×೬೦+೨೩ ಲಬ್ಧಿ ೬೮೬೩×೬೦+೧೨ ಲಬ್ಧಿ ೪೧೧೭೯೨×೧೨೦ ಶನಿಯ ನೀಚಕ್ಕೆ ಹೇಳಿದ ಮಾಸದಿಂದ ಗುಣಿಸಿದ ಲಬ್ಧಿ ೪೯೪೧೫೦೪೦—೬೪೮೦೦೦ ಲಬ್ಧಿ ೭೬ ಶೇಷ ೧೬೭೦೪೦×೩೦ ಲಬ್ಧಿ ೫೦೧೧೨೦೦—೬೪೮೦೦೦ ಲಬ್ಧಿ ೭ ಶೇಷ ೪೭೫೨೦೦×೬೦ ಲಬ್ಧಿ ೨೮೫೧೨೦೦೦—೬೪೮೦೦೦ ಲಬ್ಧಿ ೪೪ ಶೇಷ ಇಲ್ಲ.೦|ವಿಕಲಾ ಹಿಂದೆ ತಂದಮಾಸ ೭೬—೧೨ ಲಬ್ಧಿ ವರ್ಷ ೬.೪.೭.೪೪.೦ ಶನಿ ನೀಚಕ್ಕೆ ಹೇಳಿದ ವರ್ಷ ೧೦ ಕೂಡಿಸಿ ವರ್ಷ ೧೬.೪.೭.೪೪.೦. ಇದು ಶನಿಯು ಕೊಟ್ಟ ಆಯುರ್ವರ್ಷಗಳು.

## ಸುಲಭ ರೀತಿ

ಸ್ಪಷ್ಟ ಶನಿ ರಾ. ೪.೧೪.೨೩.೧೨. ಶನಿಯ ಉಚ್ಚದಲ್ಲಿ ಕಳದದ್ದು ರಾ. ೬.೨೦.೦.೦—

೪.೧೪.೨೩ ೧೨ ಲಬ್ಧಿ ೨ ೫ ೩೬.೪೮ ಇದು ೬ ರಾಶಿಗೆ ಕಡಿಮೆ ಇದೆ ಚಕ್ರ ಶುದ್ಧ ಮಾಡಿದ್ದು ರಾ ೧೨.೦ ೦ ೦ —೨ ೫ ೩೬ ೪೮ ಲಬ್ಧಿ ೯ ೨೪.೨೩ ೧೨Xಶನಿ ಉಚ್ಚಕ್ಕೆ ಹೇಳಿದ ವರ್ಷ ೨೦ರಿಂದ ಗುಣಿಸಿದ್ದು ೯ ೨೪.೨೩.೧೨X೨೦ ಲಬ್ಧಿ ವರ್ಷ ಮಾಡಿದ್ದು ವರ್ಷ ೧೬.೪.೭ ೪೪ ೦. ಇದು ಶನಿಯು ಕೊಟ್ಟ ಆಯುರ್ವರ್ಷಗಳು.

## ಲಗ್ನಾಯುರ್ದಾಯ ಉದಾಹರಣೆ

ಲಗ್ನಸ್ಫುಟ ರಾ. ೮.೧೩.೧೯.೨೪. ಇದು ಧನುರಾಶಿಯಲ್ಲಿ ೩ ನವಾಂಶಗಳು ಕಳೆದುದರಿಂದ ಲಗ್ನಾಯುರ್ವರ್ಷ ೩ ವರ್ಷ ಶೇಷ ಭಾಗ ೩ ೧೯ ೨೪ ಇದನ್ನು ವಿಕಲೆ ಮಾಡಿದ್ದು ೩X೬೦+೧೯ ಲಬ್ಧಿ ೧೯೯X೬೦+೨೪ ಲಬ್ಧಿ ೧೧೯೬೪. ವಿಕಲೆಗಳು ಪ್ರತಿಯೊಂದು ನವಾಂಶಕ್ಕೆ ೨೦೦ ಕಲೆಗಳು ವಿಕಲೆ ಮಾಡಿ ೨೦೦X೬೦ ಲಬ್ಧಿ ೧೨೦೦೦ ನವಾಂಶ ಖಂಡದ ವಿಕಲೆಗಳನ್ನು ಮಾಸದ ಬಗ್ಗೆ ೧೨ರಿಂದ ಗುಣಿಸಿದ್ದು ೧೧೯೬೪X೧೨ ಲಬ್ಧಿ ೧೪೩೫೬೮—೧೨೦೦೦ ಲಬ್ಧಿ ೧೧ ಮಾಸ ಶೇಷ ೧೧೫೬೮X೩೦ ಲಬ್ಧಿ ೩೪೭೦೪೦—೧೨೦೦೦ ಲಬ್ಧಿ ೨೮ ಶೇಷ ೧೧೦೪೦X೬೦ ಲಬ್ಧಿ. ೬೬೨೪೦೦—೧೨೦೦೦ ಲಬ್ಧಿ ೫೫ ಶೇಷ ೨೪೦೦X೬೦ ಲಬ್ಧಿ ೧೪೪೦೦೦—೧೨೦೦೦ ಲಬ್ಧಿ. ೧೨ ಆಯ್ತು ಹಿಂದೆ ಕಳದ ನವಾಂಶದ ವರ್ಷ ೩. ಮಾಸ ೧೧ ದಿನ ೨೮ ಘಟಿ ೫೫ ವಿ ೧೨ ಇದು ಲಗ್ನದಿಂದ ಬಂದ ಆಯುಸ್ಸಿನ ವರ್ಷಗಳು. ವರ್ಷ ೩.೧೧ ೨೮ ೫೫.೧೨ ಆಯ್ತು.

## ಅನ್ಯಮತದಂತೆ ಉದಾಹರಣೆ

ಕೆಲವರ ಮತ ಪ್ರಕಾರ ಲಗ್ನದಿಂದ ಹಿಂದೆ ಸಂದ ರಾಶಿಗಳಷ್ಟು ವರ್ಷಗಳು ರಾಶಿ ೮ ಕಳೆದುದರಿಂದ ೮ ವರ್ಷ ಶೇಷ ಅಂಶಾದಿ ೧೩ ೧೯.೨೪ ಇದನ್ನು ವಿಕಲೆ ಮಾಡಿದ್ದು ೧೩X೬೦+೧೯ ಲಬ್ಧಿ ೭೯೯X೬೦+೨೪ ಲಬ್ಧಿ ೪೭೯೬೪X೧೨ ಲಬ್ಧಿ ೫೭೫೫೬೮ ವಿಕಲೆಯಾಯ್ತು. ಒಂದು ರಾಶಿಗೆ ೧೮೦೦ ಕಲೆಗಳು ವಿಕಲೆ ಮಾಡಿದ್ದು ೧೮೦೦X೬೦ ಲಬ್ಧಿ ೧೦೮೦೦೦ ಭಾಗಿಸಿದ್ದು ೫೭೫೫೬೮—೧೦೮೦೦೦ ಲಬ್ಧಿ ಮಾಸ ೫ ಶೇಷ ೩೫೫೬೮X೩೦ ಲಬ್ಧಿ. ೧೦೬೭೦೪೦—೧೦೮೦೦೦ ಲಬ್ಧಿ ೯ ದಿನ ಶೇಷ ೯೫೦೪೦X೬೦ ಲಬ್ಧಿ ೫೭೦೨೪೦೦—೧೦೮೦೦೦ ಲಬ್ಧಿ ೫೨ ಘಟಿ ಶೇಷ ೮೬೪೦೦X೬೦ ಲಬ್ಧಿ ೫೧೮೪೦೦೦—೧೦೮೦೦೦ ಲಬ್ಧಿ ೪೮ ವಿಘಟಿ. ಲಗ್ನಾಯುರ್ದಾಯ ವರ್ಷಾದಿ ೮ ೫.೯.೫೨ ೪೮ ಆಯ್ತು.

ವಿ.ಸೂ.: ಇಲ್ಲಿ ಲಗ್ನಾಯುಸ್ಸನ್ನು ಎರಡು ಕ್ರಮದಿಂದ ಗುಣಿಸಲ್ಪಟ್ಟಿದೆ ಇದರಲ್ಲಿ "ಹೋರಾ ಸ್ವಾಮಿ ಗುರುಜ್ಞ ವೀಕ್ಷಿತ" ಎಂಬಂತೆ ಲಗ್ನಾಧಿಪತಿಗೆ ಬಲ ಹೆಚ್ಚಾಗಿದ್ದರೆ ರಾಶಿ ಸಮಾನ ವರ್ಷಗಳೆಂತಲೂ ನವಾಂಶಾಧಿಪತಿ ಬಲವಂತನಾಗಿದ್ದರೆ ನವಾಂಶ ಸಮಾನ ವರ್ಷಗಳೆಂತಲೂ ತಿಳಿಯತಕ್ಕದ್ದು

**ಸರ್ವಾರ್ಧ ತ್ರಿಚರಣ ಪಂಚ ಷಷ್ಠ ಭಾಗಾಃ ।**
**ಕ್ಷೀಯಂತೇ ವ್ಯಯಭವನಾದ ಸತ್ಸುವಾಮಮ್ ॥**
**ಸತ್ಸ್ವರ್ಧಂ ಹೃಸತಿ ತಥೈಕ ರಾಶಿಗಾ ।**
**ನಾಮೇಕೋಂಶಂ ಹರತಿ ಬಲೀ ತಥಾಹ ಸತ್ಯಃ ॥೩॥**

## ॥ ಪೂರ್ವಗಣಿತ ಸಾರ ॥

| ಗ್ರಹದತ್ತಾಯುರ್ವರ್ಷಗಳು | | | | | |
|---|---|---|---|---|---|
| ಗ್ರಹರು | ವರ್ಷ | ಮಾಸ | ದಿನ | ಘಟಿ | ವಿಘಟಿ |
| ರವಿದತ್ತಾಯುಃ | ೧೬ | ೭ | ೧೦ | ೩೦ | ೫೦ |
| ಚಂದ್ರದತ್ತಾಯುಃ | ೧೪ | ೩ | ೧ | ೪೯ | ೩೫ |
| ಕುಜದತ್ತಾಯುಃ | ೧೧ | ೪ | ೧೦ | ೬ | ೩೦ |
| ಬುಧದತ್ತಾಯುಃ | ೮ | ೯ | ೨೦ | ೪೭ | ೦ |
| ಗುರುದತ್ತಾಯುಃ | ೧೪ | ೭ | ೨೪ | ೫೫ | ೧೫ |
| ಶುಕ್ರದತ್ತಾಯುಃ | ೧೮ | ೯ | ೧೦ | ೪೫ | ೬ |
| ಶನಿದತ್ತಾಯುಃ | ೧೬ | ೪ | ೭ | ೪೪ | ೦ |
| ಲಗ್ನದತ್ತಾಯುಃ | ೩ | ೧೧ | ೧೮ | ೫೫ | ೧೨ |
| ಎಲ್ಲವನ್ನು ಕೂಡಿಸಿ | ೧೦೪ | ೯ | ೨೫ | ೩೩ | ೨೮ |

## ॥ ಶತ್ರುಕ್ಷೇತ್ರ ಅಸ್ತಂಗತಹರಣ ಕೋಷ್ಟಕ ॥

| ಗ್ರಹರು | ಗ್ರಹದತ್ತಾಯುನಲ್ಲಿ ಹರಣ |
|---|---|
| ವಕ್ರಿಯಾದ ಗ್ರಹರನ್ನು ಬಿಟ್ಟು ಶತ್ರುಕ್ಷೇತ್ರದಲ್ಲಿದ್ದ ಗ್ರಹರಿಗೆ | ೩ನೇ ೧ ಭಾಗ ಹರಣವಾಗುವುದು |
| ಶುಕ್ರ ಮತ್ತು ಶನಿಯನ್ನು ಬಿಟ್ಟು ಅಸ್ತರಾದ ಗ್ರಹರಿಗೆ | ೨ನೇ ೧ ಭಾಗ ಹರಣವಾಗುವುದು |

ಪಾಪಗ್ರಹರು ವ್ಯಯಸ್ಥಾನದಿಂದ ವ್ಯುತ್ಕ್ರಮವಾಗಿ ಸಪ್ತಮ ಸ್ಥಾನ ಪರ್ಯಂತರವಾಗಿದ್ದರೆ ಕೆಳಗಿನಂತೆ ಆಯುಷ್ಯವು ಕ್ಷೀಣವಾಗುವುದು. ಲಗ್ನಕ್ಕೆ ವ್ಯಯದಲ್ಲಿ ಪಾಪ ಗ್ರಹವಿದ್ದರೆ ಆ ಗ್ರಹವು ಕೊಟ್ಟ ಪೂರ್ಣ ಆಯುಸ್ಸು ಕ್ಷಯಿಸುವುದು. ಏಕಾದಶದಲ್ಲಿದ್ದರೆ ಅರ್ಧ ಭಾಗವೂ, ದಶಮ ದಲ್ಲಿದ್ದರೆ ಮೂರನೆಯ ಒಂದಂಶವೂ, ನವಮದಲ್ಲಿದ್ದರೆ ನಾಲ್ಕನೆಯ ಒಂದಂಶವೂ, ಅಷ್ಟಮ ದಲ್ಲಿದ್ದರೆ ಐದನೆಯ ಒಂದಂಶವೂ, ಸಪ್ತಮದಲ್ಲಿದ್ದರೆ ಆರನೆಯ ಒಂದಂಶವೂ ಕಡಿಮೆಯಾಗುವುದು. ಶುಭಗ್ರಹಗಳಿದ್ದರೆ ಪಾಪಗ್ರಹರಿಗೆ ಹೇಳಿದುದರಲ್ಲಿ ಅರ್ಧಭಾಗ ಕ್ಷಯಿಸುವುದು. ಅಂದರೆ ಲಗ್ನಕ್ಕೆ ವ್ಯಯದಲ್ಲಿ ಶುಭಗ್ರಹವಿದ್ದರೆ ಅರ್ಧಭಾಗವೂ, ಏಕಾದಶದಲ್ಲಿದ್ದರೆ ನಾಲ್ಕನೆಯ ಒಂದಂಶವೂ, ದಶಮದಲ್ಲಿದ್ದರೆ ಆರನೆಯ ಒಂದಂಶವೂ, ನವಮದಲ್ಲಿದ್ದರೆ ಎಂಟನೆಯ ಒಂದಂಶವೂ, ಅಷ್ಟಮ ದಲ್ಲಿದ್ದರೆ ಹತ್ತನೆಯ ಒಂದಂಶವೂ, ಸಪ್ತಮದಲ್ಲಿದ್ದರೆ ಹನ್ನೆರಡನೆಯ ಒಂದಂಶವೂ ಕಡಿಮೆ ಯಾಗುವುದು. ಹಾಗೆಯೇ ಒಂದು ರಾಶಿಯಲ್ಲಿ ಅನೇಕ ಗ್ರಹಗಳಿದ್ದರೆ ಅದರಲ್ಲಿ ಬಲವಂತನಾದ ಒಂದು ಗ್ರಹಕ್ಕೆ ಮಾತ್ರ ತನ್ನ ಆಯುಷ್ಯದಲ್ಲಿ ಹಿಂದೆ ಹೇಳಿದಂತೆ ಆಯುಷ್ಯವು ಕಡಿಮೆಯಾಗುವುದು. ಬಾಕಿ ಉಳಿದ ಗ್ರಹರಿಗೆ ಹರಣ ಮಾಡಕೂಡದು. ಸತ್ಯಾಚಾರ್ಯರ ಮತದಲ್ಲಿಯೂ ಸಹಾ ಹೀಗೆಯೇ ಹೇಳಿರುತ್ತಾರೆ.

### ॥ ವ್ಯಯಾದಿ ಶುಭ ಪಾಪಗ್ರಹರ ಹರಣಕೋಷ್ಟಕ ॥

| ಯಾವ್ಯಾವ ಭಾವದಲ್ಲಿದ್ದರೆ | ಪಾಪಗ್ರಹರ ದತ್ತಾಯು ಹರಣ | ಶುಭಗ್ರಹರ ದತ್ತಾಯು ಹರಣ |
|---|---|---|
| ವ್ಯಯ ಭಾವದಲ್ಲಿದ್ದರೆ | ೧ ಭಾಗ ಸಂಪೂರ್ಣ | ೨ನೇ ೧ ಭಾಗ |
| ಏಕಾದಶದಲ್ಲಿದ್ದರೆ | ೨ನೇ ೧ ಭಾಗ | ೪ನೇ ೧ ಭಾಗ |
| ದಶಮದಲ್ಲಿದ್ದರೆ | ೩ನೇ ೧ ಭಾಗ | ೬ನೇ ೧ ಭಾಗ |
| ನವಮದಲ್ಲಿದ್ದರೆ | ೪ನೇ ೧ ಭಾಗ | ೮ನೇ ೧ ಭಾಗ |
| ಅಷ್ಟಮದಲ್ಲಿದ್ದರೆ | ೫ನೇ ೧ ಭಾಗ | ೧೦ನೇ ೧ ಭಾಗ |
| ಸಪ್ತಮದಲ್ಲಿದ್ದರೆ | ೬ನೇ ೧ ಭಾಗ | ೧೨ನೇ ೧ ಭಾಗ |

### ಗ್ರಹರ ಶತ್ರುಕ್ಷೇತ್ರಾದಿ ಹರಣಕ್ರಮ

೧. ರವಿಯು ಶತ್ರು ಕ್ಷೇತ್ರದಲ್ಲಿರುವುದರಿಂದ ೩ನೇ ೧ ಭಾಗ ಹರಣವಾಗುವುದು. ರವಿ ದತ್ತಾಯುಃ ವರ್ಷ ೧೬.೭ ೧೦ ೩೦.೫ ಮೂರನೇ ಒಂದಂಶ ಕಳೆಯುವುದು—೫.೬.೧೩.೩೦.೧೭. ಲಬ್ಧಿ ರವಿಯ ಸ್ಪಷ್ಟಾಯುರ್ವರ್ಷ ೧೧.೦ ೨೭ ೦ ೩೩ ಆಗುವುದು.

೨. ಚಂದ್ರನು ಪಕ್ಷಬಲ ಇದ್ದು ಶುಭನಾಗಿ ಸಮಗ್ರಹದಲ್ಲಿದ್ದರೂ ವ್ಯಯ ಭಾವದಲ್ಲಿರುವುದರಿಂದ ಹಿಂದೆ ತಂದ ಆಯುರ್ವರ್ಷ ೧೪.೩.೧.೪೯ ೩೫ ಸಂಪೂರ್ಣ ಕ್ಷಯವಾಯಿತು. ಚಂದ್ರ ಸ್ಪಷ್ಟಾಯುರ್ವರ್ಷ ೦.೦.೦.೦ ೦.

೩. ಕುಜ ಮೂಲತ್ರಿಕೋಣದಲ್ಲಿದ್ದು ಅಸ್ತದೋಷವಿಲ್ಲ ಕುಜ ದತ್ತಾಯುರ್ವರ್ಷ ೧೧ ೪ ೧೦.೬.೩೦ ಇದೇ ಸ್ಪಷ್ಟ ಕುಜ ದತ್ತಾಯುರ್ವರ್ಷ ೧೧.೪.೧೦.೬.೩೦.

೪. ಬುಧನು ಸ್ವಕ್ಷೇತ್ರದಲ್ಲಿದ್ದರೆ ಅಸ್ತದೋಷವಿಲ್ಲ. ಸಪ್ತಮದಲ್ಲಿರುವುದರಿಂದ ೬ನೇ ೧ ಅಂಶ ಹರಣವಾಗುವುದು ಬುಧ ದತ್ತಾಯುಃ ವ. ೮.೯ ೨೦.೪೭.೦ ವ ೧.೧೧.೩೩.೭.೫ ಲಬ್ಧಿ ಸ್ಪಷ್ಟಾಯುರ್ವರ್ಷ ೬.೯ ೧೭.೩೯.೧೦.

೫. ಗುರು ಉಚ್ಚದಲ್ಲಿದ್ದು ಅಸ್ತದೋಷವಿಲ್ಲ ನವಮ ಭಾವದಲ್ಲಿರುವುದರಿಂದ ೫ನೇ ೧ ಅಂಶ ನಾಶವಾಗುವುದು. ಗುರು ದತ್ತಾಯುಃ ವ. ೧೪.೭ ೨೪.೫೫.೧೫—ವ.೨ ೧೧.೪.೫೯.೩ ಲಬ್ಧಿ ಸ್ಪಷ್ಟಾಯುರ್ವರ್ಷ ೧೧.೮.೧೯.೪೬.೧೨.

೬. ಶುಕ್ರ ಸ್ವಕ್ಷೇತ್ರ ವ್ಯಯಾದಿ ದೋಷವಿಲ್ಲವಾದುದರಿಂದ ಶುಕ್ರ ದತ್ತಾಯುಃವರ್ಷಗಳಲ್ಲಿ ಹರಣವಿಲ್ಲ ಸ್ಪಷ್ಟಾಯುಃ ವರ್ಷ ೧೮.೯.೧೦ ೪೫ ೬

೭. ಶನಿ ಶತ್ರು ಕ್ಷೇತ್ರವಾದರೂ ತತ್ಕಾಲ ಮಿತ್ರವಾದುದರಿಂದ ಸಮ. ನವಮದಲ್ಲಿರುವುದರಿಂದ ಆಯುವಿನಲ್ಲಿ ೪ನೇ ೧ ಅಂಶ ಹರಣವಾಗುವುದು. ದತ್ತಾಯುಃ ವ ೧೬.೪.೭.೪೪ ೦— ವ. ೪.೧.೧.೫೬ ೦ ಸ್ಪಷ್ಟಾಯುರ್ವರ್ಷ ೧೨.೩.೫.೪೮.೦.

ವಿ ಸೂ ಲಗ್ನಾಧಿಪತಿ ಅಷ್ಟಮ ಅಂಶಾಧಿಪತಿಗೆ ಗುರು ದೃಷ್ಟಿ ಇದ್ದರೂ ವ್ಯಯದಲ್ಲಿ ನೀಚದಲ್ಲಿದ್ದುದರಿಂದ ಇಬ್ಬರಿಗೂ ಬಲವಿಲ್ಲ ಆದರೆ ಗುರುದೃಷ್ಟಿ ಇದೆ ಎಂತ ನವಾಂಶತುಲ್ಯ ಲಗ್ನಾದತ್ತಾಯುಸ್ಸೆಂತ ತಿಳಿಯತಕ್ಕದ್ದು

ಗ್ರಹರಿಂದ ವ್ಯಯಾದಿ ಹರಣವಾದ ಆಯುಃವರ್ಷಗಳು ೨೮ ೯ ೨೫.೩೨.೪೫

ಲಗ್ನದಲ್ಲಿ ಪಾಪಗ್ರಹ (ರವಿ, ಕುಜ, ಶನಿ)ಗಳಿಲ್ಲವಾದುದರಿಂದ ಕ್ರೂರೋದಯ ಹರಣವಿಲ್ಲ.

ಸಾರ್ಧೋದಿತೋದಿತ ನವಾಂಶ ಹತಾತ್ಸಮಸ್ತಾ ।
ದ್ಭಾಗೋಽಷ್ಟಯುಕ್ತ ಶತಸಂಖ್ಯ ಮುಪೈತಿನಾಶಮ್ ॥
ಕ್ರೂರೇ ವಿಲಗ್ನ ಸಹಿತೇ ವಿಧಿನಾತ್ವನೇನ ।
ಸೌಮ್ಯೇಕ್ಷಿತೇ ದಲಮತಃ ಪ್ರಲಯಂ ಪ್ರಯಾತಿ ॥೪॥

ಲಗ್ನದಲ್ಲಿ ಪಾಪಗ್ರಹಗಳಾದ ರವಿ, ಕುಜ, ಶನಿಗಳಲ್ಲಿ ಯಾರಾದರೂ ಇದ್ದರೆ "ಸಾರ್ಧೋದಿ ತೋದಿತ ನವಾಂಶ" ಎಂದರೆ ಲಗ್ನದಲ್ಲಿದ್ದ ಗತ ನವಾಂಶಗಳಿಗೆ ವರ್ತಮಾನ ನವಾಂಶ ದಲ್ಲಿ ಉಳಿದ ಕಲೆಗಳನ್ನು ತ್ರೈರಾಶಿಕದಿಂದ ಗತ ನವಾಂಶಗಳಿಗೆ ಕೂಡಿಸಿದರೆ ಸಾರ್ಧೋದಿ ತೋದಿತ ನವಾಂಶವಾಗುವುದು ಇದರಿಂದ ಚಕ್ರಾರ್ಧ, ಅಸ್ತ, ಶತ್ರುಕ್ಷೇತ್ರ ಹರಣ ಮಾಡಿದ ಲಗ್ನಾಯುಃ ಸಹಿತ ಸರ್ವಗ್ರಹರು ಕೊಟ್ಟ ಆಯುಸ್ಸನ್ನು ಗುಣಿಸಿ ೧೦೮ರಿಂದ ಭಾಗಿಸಿ ಬಂದ ಲಬ್ಧಿ ವರ್ಷಾದಿಗಳನ್ನು ಲಗ್ನಾಯುಸ್ಸಹಿತ ಸರ್ವ ಗ್ರಹರು ಕೊಟ್ಟ ಶುದ್ಧಾಯುಸ್ಸಿ ನಲ್ಲಿ ಕಳೆದರೆ ಸ್ಪಷ್ಟ ಆಯುರ್ದಾಯ ವರ್ಷಗಳಾಗುವುದು. ಶ್ಲೋಕದಲ್ಲಿ ಹೇಳಿದ ಪ್ರಕಾರ ಎಲ್ಲಾ ಗ್ರಹರು ಕೊಟ್ಟಿರುವ ಆಯುಸ್ಸಿನ ಸಂಖ್ಯೆಯಲ್ಲಿ ಒಂದೇ ಸಲ ಹರಣ ಮಾಡುವು ದೆಂತ ಹೇಳಲ್ಪಟ್ಟಿದೆ. ಇದರಿಂದ ಸಮಸ್ತ ಗ್ರಹರ ದಶಗಳಿಗೆ ಪಾಲಾಗುವುದು ಇದು ಸ್ಥೂಲ ಗುರು ದಶಾಭುಕ್ತಿಗಳಲ್ಲಿ ನ್ಯೂನಾಧಿಕ್ಯ ಬರಲು ಸಾಧ್ಯತೆ ಇರುವುರಿಂದ ಆಯಾಯ ಗ್ರಹರ ದತ್ತಾಯುಸ್ಸನ್ನು ಗುಣಿಸಿಕೊಂಡು ಆಯಾಯ ಗ್ರಹರಲ್ಲಿ ಹರಣ ಮಾಡಿದರೆ ಸೂಕ್ಷ್ಮ ವಾಗುವುದು ಈ ಮಾರ್ಗವನ್ನು ವಿದ್ವಾಂಸರು ಒಪ್ಪುತ್ತಾರೆ. ಪಾಪಗ್ರಹರು (ರವಿ, ಕುಜ, ಶನಿ) ಲಗ್ನದಲ್ಲಿದ್ದರೆ ಸಾರ್ಧೋಧಿತೋದಿತ ನವಾಂಶದಿಂದ ಗುಣಿಸಿ ೧೦೮ರಿಂದ ಭಾಗಿಸಿ ಬಂದ ಲಬ್ಧಿ ವರ್ಷಾದಿಗಳನ್ನು ಪಾಪಗ್ರಹದಲ್ಲಿ ಕಳೆದು ಪಾಪೋದಯ ಹರಣ ಮಾಡು ವುದು. ಲಗ್ನದಲ್ಲಿ ಶುಭಗ್ರಹರಿದ್ದರೆ ಅಥವಾ ನೋಡಲ್ಪಟ್ಟರೆ ಅದರಲ್ಲಿ ಅರ್ಧವನ್ನು ಕಳೆಯು ವುದು. ಲಗ್ನದಲ್ಲಿ ಒಂದಕ್ಕೂ ಹೆಚ್ಚಿಗೆ ಶುಭಗ್ರಹರು ಪಾಪಗ್ರಹರಿದ್ದರೆ ಆಗ ಉದಿತ ನವಾಂಶಕ್ಕೆ ಅತೀ ಹತ್ತಿರವಿರುವ ಒಂದು ಪಾಪಗ್ರಹಕ್ಕೆ ಮಾತ್ರ ಹರಣ ಮಾಡುವುದು. ಕೆಲವು ಗ್ರಂಥಗಳಲ್ಲಿ ಲಗ್ನ ಸ್ಫುಟ ರಾಶ್ಯಾದಿಯನ್ನು ಕಲೆಗಳನ್ನಾಗಿ ಮಾಡಿ ಗ್ರಹ ದತ್ತಾಯು ವನ್ನು ಗುಣಿಸಿ ೨೧೬೦೦ರಿಂದ ಭಾಗಿಸಿ ಬಂದ ಲಬ್ಧಿಯನ್ನು ವರ್ಷಾದಿಯಾಗಿ ಕ್ರೂರೋದಯ ಹರಣ ಮಾಡುವುದೆಂದು ಹೇಳಲ್ಪಟ್ಟಿದೆ.

**ಉದಾಹರಣೆ**

ಸಾರ್ಧೋದಿತೋದಿತ ನವಾಂಶ ಹಿಂದೆ ಗುಣಿಸಿ ತಂದ ಲಗ್ನಸ್ಫುಟ ರಾ ೮.೧೩.೪೫.೨೬ ಇದರ ರಾಶಿ ಬಿಟ್ಟು ಭಾಗಾದಿಗಳನ್ನು ಕಲೆ ಮಾಡಿದ್ದು ೧೩×೬೦+೪೫ ಲಬ್ಧಿ ೮೨೫ ಒಂದು ನವಾಂಶಕ್ಕೆ ೨೦೦ ಕಲಾ ಇದರಿಂದ ಭಾಗಿಸಿದ್ದು ೮೨೫—೨೦೦ ಲಬ್ಧಿ ೪ ಕಳೆದ ನವಾಂಶವಾಯ್ತು. ಶೇಷ ೨೫×೧೨ ಲಬ್ಧಿ ೩೦೦—೨೦೦ ಲಬ್ಧಿ ೧ ಶೇಷ ೧೦೦×೩೦ ಲಬ್ಧಿ ೩೦೦೦—೨೦೦ ಲಬ್ಧಿ ೧೫ ಉದಿತ ನವಾಂಶ ೧.೧೫+ಸಾರ್ಧೋದಿತೋದಿತ ನವಾಂಶ ೪ ೧.೧೫ ಆಯಿತು. ಚಕ್ರಾರ್ಧ, ಅಸ್ತ, ಶತ್ರು ಕ್ಷೇತ್ರಾದಿ ಹರಣ ಮಾಡಿದ ಲಗ್ನ ಸಹಿತ ಗ್ರಹದತ್ತಾಯುರ್ವರ್ಷ ೭೬.೦ ೦.೦.೪೩× ೪ ೧.೧೫. ಲಬ್ಧಿ ೩೧೩.೬ ೦ ೨ ೫೨ ೫೩.೪೫—೧೦೮. ಲಬ್ಧಿ ವರ್ಷ ೨.೧೦ ೨೫ ೫೫.೩೪ ಆಯಿತು.

(ಗೋಮೂತ್ರಿಕಾ ಗಣಿತ) ವರ್ಷ ೭೬.೦.೦.೦ ೪೩×೪.೧.೧೫
ದಿನಾದಿ ೧೧೪೦.೦.೦.೦.೬೪೫
ಮಾಸಾದಿ ೭೬.೦.೦.೦.೪೩
ವರ್ಷಾದಿ ೩೦೪.೦.೦.೦.೧೭೨

ಎಲ್ಲವನ್ನು ಕೂಡಿಸಿ ಬಂದ ವರ್ಷ ೩೧೩.೬ ೦ ೨ ೫೨.೫೩.೪೫—೧೦೮ ಲಬ್ಧಿ ವರ್ಷ ೨.೧೦.೨೫.೫೫ ೩೪.

ಕೆಲವರು ಉದಿತ ನವಾಂಶವನ್ನು ಕಳೆದ ನವಾಂಶಗಳಿಗೆ ಕೂಡಿಸಿ ಸಾರ್ಧೋದಿತೋದಿತ ನವಾಂಶವೆಂದು ಹೇಳುತ್ತಾರೆ. ಕಳೆದ ನವಾಂಶ ೪ ಉದಿತ ೧ ಕೂಡಿಸಿ ೫ ಇದರಿಂದ ಗುಣಿಸಿದ್ದು. ವರ್ಷಾದಿಗಳು ೭೬.೦.೦.೦.೪೩×೫ ಲಬ್ಧಿ ೩೮೦ ೦ ೦.೩.೩೫—೧೦೮ ಲಬ್ಧಿ ವರ್ಷ ೩.೬.೩ ೧೩.೨೨ ಆಯ್ತು. ಸ್ವಲ್ಪ ಅಂತರವಾಗುತ್ತದೆ

**ಪೂರ್ವ ಗಣಿತಗಳ ಸಾರ**

| | |
|---|---|
| ಗ್ರಹ ದತ್ತಾಯುರ್ವರ್ಷಗಳು | ೧೦೪.೯ ೨೫.೩೩.೨೮ |
| ಗ್ರಹರಿಂದ ವ್ಯಯಾದಿ ಹರಣ ವರ್ಷಗಳನ್ನು ಕಳದದ್ದು | ೨೮.೯:೨೫.೩೨.೪೫ |
| ವರ್ಷಗಳು | ೭೬.೦.೦.೦.೪೩ |
| ಅರ್ಧೋದಿತ ನವಾಂಶದಿಂದ ತಂದ ಹರಣ ವರ್ಷಾದಿ ಕಳದದ್ದು | ೨.೧೦.೨೫ ೫೫.೩೪ |
| ಶುದ್ಧ ಸ್ಪಷ್ಟಾಯುರ್ವರ್ಷಗಳು | ೭೩.೧ ೪.೫.೯ |

ಅಸ್ತ, ಶತ್ರುಗ್ರಹಗತ ಮತ್ತು ಚಕ್ರಾರ್ಧ ಹರಣ, ಅರ್ಧೋದಿತ ನವಾಂಶಾದಿ ಹರಣ ಮಾಡಿದ ಶುದ್ಧ ಲಗ್ನಸಹಿತ ಗ್ರಹದತ್ತಾಯುಃ ವರ್ಷಗಳು.

॥ ಅಸ್ತ ಶತ್ರುಗ್ರಹ ಚಕ್ರಾರ್ಧಹರಣ ಗ್ರಹದತ್ತಾಯುಃ ॥

| ಗ್ರಹರು | ವರ್ಷ | ಮಾಸ | ದಿನ | ಘಟಿ | ವಿಘಟಿ |
|---|---|---|---|---|---|
| ರವಿ | ೧೧ | ೦ | ೨೭ | ೦ | ೩೩ |
| ಚಂದ್ರ | ೦ | ೦ | ೦ | ೦ | ೦ |
| ಕುಜ | ೧೧ | ೪ | ೧೦ | ೬ | ೩೦ |
| ಬುಧ | ೬ | ೯ | ೧೭ | ೩೯ | ೧೦ |
| ಗುರು | ೧೧ | ೮ | ೧೯ | ೪೬ | ೧೨ |
| ಶುಕ್ರ | ೧೮ | ೯ | ೧೦ | ೪೫ | ೬ |
| ಶನಿ | ೧೨ | ೩ | ೫ | ೪೮ | ೦ |
| ಲಗ್ನ | ೩ | ೧೧ | ೨೮ | ೫೫ | ೧೨ |
| ಕೂಡಿಸಿ | ೭೬ | ೦ | ೦ | ೦ | ೪೩ |
| ಅರ್ಧೋದಿತ ನವಾಂಶದಿಂದ ಹರಣ ವರ್ಷಾದಿ | ೨ | ೧೦ | ೨೫ | ೫೫ | ೩೪ |
| ಸ್ಪಷ್ಟಾಯುರ್ವರ್ಷಾದಿ | ೭೩ | ೧ | ೪ | ೫ | ೯ |

ಸಮಾಃ ಷಷ್ಠಿರ್ದ್ವಿಘ್ನಾ ಮನುಜ ಕರಿಣಾಂ ಪಂಚ ಚ ।
ನಿಶಾಹಯಾನಾಂ ದ್ವಾತ್ರಿಂಶತ್ ಖರಕರಭಯೋಃ ಪಂಚಕ ಕೃತಿಃ ॥
ವಿರೂಪಾಸಾಪ್ಯಾ ಯುರ್ವೃಷ ಮಹಿಷಯೋರ್ದ್ವಾದಶ ಶುನಾಂ ।
ಸ್ಮೃತಂ ಛಾಗಾದೀನಾಂ ದಶಕ ಸಹಿತಾಃ ಷಟ್ ಚ ಪರಮಮ್ ॥೫॥

ಮನುಷ್ಯರಿಗೆ ಮತ್ತು ಆನೆಗಳಿಗೆ ೧೨೦ ವರ್ಷ ೦ ಮಾಸ ೫ ದಿವಸಗಳು. ಅಶ್ವಗಳಿಗೆ ೩೨ ವರ್ಷಗಳು, ಕತ್ತೆ ಮತ್ತು ಒಂಟೆಗಳಿಗೆ ೨೫ ವರ್ಷಗಳು, ಗೋವು, ಎಮ್ಮೆಗಳಿಗೆ ೨೪ ವರ್ಷಗಳು, ನಾಯಿಗಳಿಗೆ ೧೨ ವರ್ಷಗಳು, ಆಡು, ಕುರಿ, ಜಿಂಕೆಗಳಿಗೆ ೧೬ ವರ್ಷಗಳು ಪರಮಾಯುಸ್ಸೆಂದು ಹೇಳಲ್ಪಟ್ಟಿದೆ. ಮನುಷ್ಯರಿಗೆ ಗ್ರಹರು ಪರಮೋಚ್ಚದಲ್ಲಿರುವಾಗ ಕೊಡುವ ಪರಮಾಯುಸ್ಸನ್ನು ಅಶ್ವಾದಿಗಳ ಪರಮಾಯುಸ್ಸಿನಿಂದ ಗುಣಿಸಿ ಮನುಷ್ಯರ ಪರಮಾಯುರ್ವರ್ಷ ೧೨೦ರಿಂದ ಭಾಗಿಸಿದಲ್ಲಿ ಆಯಾಯ ಗ್ರಹರು ಪರಮೋಚ್ಚದಲ್ಲಿದ್ದಾಗ ಅಶ್ವಾದಿಗಳಿಗೆ ಕೊಡುವ ಪರಮಾಯುಸ್ಸು ಬರುವುದು. ಅದೇ ಗ್ರಹರು ನೀಚದಲ್ಲಿದ್ದಾಗ ಅದರ ಅರ್ಧವೆಂತ ತಿಳಿಯತಕ್ಕದ್ದು. ಹಾಗೆಯೇ ಮಧ್ಯದಲ್ಲಿದ್ದರೆ ಪ್ರಾಣಿಗಳ ಆಯುಸ್ಸನ್ನು ಗುಣಿಸಿ ತಂದು ಆಯುರ್ನಿರ್ಣಯ ಮಾಡತಕ್ಕದ್ದು.

## ಉದಾಹರಣೆ

ಅಶ್ವಕ್ಕೆ ರವಿಯು ಪರಮೋಚ್ಚದಲ್ಲಿದ್ದಾಗ ಪರಮಾಯುಸ್ಸು ಎಷ್ಟೆಂತ ತಿಳಿಯಬೇಕು. ಅಶ್ವಕ್ಕೆ ೩೨×೧೯ ಲಬ್ಧಿ ೬೦೮—೧೨೦ ಲಬ್ಧಿ ವರ್ಷ ೫ ಶೇಷ ೮×೧೨ ಲಬ್ಧಿ ೯೬—೧೨೦ ಲಬ್ಧಿ ೦ ಶೇಷ ೯೬×೩೦ ಲಬ್ಧಿ ೨೮೮೦—೧೨೦ ಲಬ್ಧಿ ೨೪ ಅಶ್ವಕ್ಕೆ ರವಿಯು ಪರಮೋಚ್ಚ ಭಾಗ ದಲ್ಲಿರುವಾಗ ಕೊಡುವ ಪರಮಾಯುರ್ವರ್ಷಗಳು-೫.೦.೨೪ ಆಗುವುದು. ಹೀಗೆಯೇ ಎಲ್ಲಾ ಗ್ರಹರು ಕೊಡುವ ಆಯುಸ್ಸನ್ನು ಮತ್ತು ಎಲ್ಲಾ ಪ್ರಾಣಿಗಳ ಆಯುಸ್ಸನ್ನು ಗುಣಿಸಿ ತರುವುದು.

ಗ್ರಹರು ನೀಚದಲ್ಲಿದ್ದರ ಇದರ ಅರ್ಧವಾಗುವುದು. ಮಧ್ಯದಲ್ಲಿದ್ದರೆ ತ್ರೈರಾಶಿಕ ಕ್ರಮ ಪ್ರಕಾರ ಆಯುಸ್ಸನ್ನು ತಂದು ಹರಣಭರಣಾದಿಗಳನ್ನು ಮಾಡಿ ಆಯುರ್ನಿರ್ಣಯ ಮಾಡತಕ್ಕದ್ದು.

**ಅನಿಮಿಷ ಪರಮಾಂಶಕೇ ವಿಲಗ್ನೇ ।**
**ಶಶಿತನಯೇ ಗವಿ ಪಂಚವರ್ಗಲಿಪ್ತೇ ॥**
**ಭವತಿ ಹಿ ಪರಮಾಯುಷಃ ಪ್ರಮಾಣಂ ।**
**ಯದಿ ಸಕಲಾಃ ಸಹಿತಾಃ ಸ್ವತುಂಗಭೇಷು ॥೬॥**

ಜನ್ಮಕಾಲದಲ್ಲಿ ಮೀನಲಗ್ನವರ್ಗೋತ್ತಮ ನವಾಂಶವಾಗಿ ಬುಧನು ವೃಷಭ ರಾಶಿ ೨೫ನೇ ಕಲೆಯಲ್ಲಿದ್ದು ಬಾಕಿ ಎಲ್ಲಾ ಗ್ರಹರು ತಮ್ಮ ತಮ್ಮ ಪರಮೋಚ್ಚ ಸ್ಥಾನಗಳಲ್ಲಿರುವಾಗ ಹುಟ್ಟಿದವನು ೧೨೦ ವರ್ಷ ೦ ಮಾಸ ೫ ದಿನಗಳ ಪರಮಾಯುಸ್ಸುಳ್ಳವನಾಗಿರುತ್ತಾನೆ.

**ಉದಾಹರಣೆ**

ರವಿ ರಾ ೦ ೯.೫೯.೨ ವರ್ಷ ೧೯.೦.೦ ೦.೦ ಚಂದ್ರ ರಾ ೧.೨ ೫೮.೫೨ ವರ್ಷ ೨೫ ೦.೦.೦.೦ ಕುಜನ ಸ್ಫುಟ ೯ ೨೭.೫೫ ೧೦ ವರ್ಷ ೧೫ರಲ್ಲಿ ಏಕಾದಶದಲ್ಲಿರುವುದರಿಂದ ಅರ್ಧ ಹಾನಿಯಾಗಿ ವರ್ಷ ೭.೬.೦.೦.೦ ಸ್ಪಷ್ಟಾಯು ಬುಧ ಸ್ಪಷ್ಟ ರಾ ೧.೦.೨೫.೦ ಬುಧನ ನೀಚ—೧೧.೧೫.೦.೦ ಲಬ್ಧಿ ರಾ ೧.೧೫.೨೫.೦ ಕಲೆ ಮಾಡಿ ೨೭೨೫X೭೨ ಲಬ್ಧಿ ೧೯೬೨೦೦—೧೦೮೦೦ ಲಬ್ಧಿ ಮಾಸ ೧೮ ಶೇಷ ೧೮೦೦X೩೦ ಲಬ್ಧಿ. ೫೪೦೦೦—೧೦೮೦೦ ಲಬ್ಧಿ ದಿನ ೫ ಆಯಿತು. ಮಾಸ ೧೮—೧೨ ಲಬ್ಧಿ ವರ್ಷ ೧ ಮಾಸ ೬ ದಿನ ೫ ಘ. ೦ ವಿ. ೦+ಬುಧನ ನೀಚಕ್ಕೆ ಹೇಳಿದ ವರ್ಷ ೬ ಕೂಡಿಸಿ ವರ್ಷ ೭.೬ ೫.೦.೦ ಇದೇ ಬುಧನ ಸ್ಪಷ್ಟಾಯು ವರ್ಷ ಶನಿ ಸ್ಪಷ್ಟ ೬.೧೯.೫೬.೩೯ ಪರಮಾಯು ವರ್ಷ ೨೦ ಅಷ್ಟಮದಲ್ಲಿರುವುದರಿಂದ ೫ನೆಯ ೧ ಅಂಶ ವರ್ಷ ೪.೦.೦.೦.೦ ಕಳದು ವರ್ಷ ೧೬.೦.೦.೦.೦ ಸ್ಪಷ್ಟಾಯುವಾಯ್ತು. ಗುರು ಸ್ಪಷ್ಟ ರಾಶಿ ೪.೫೪.೫೦ ವರ್ಷ ೧೫.೦.೦.೦.೦ ಶುಕ್ರ ಸ್ಪಷ್ಟ ೧೧.೨೬.೫೭.೫೫ ವರ್ಷ ೨೧ ೦.೦.೦.೦ ಮತ್ತು ಮೀನ ಲಗ್ನ ರಾ ೧೧ ೨೯.೫೯.೩೦ ಲಗ್ನಾಯು ೯.೦.೦.೦.೦ ಕೂಡಾ ಸ್ಪಷ್ಟಾಯುಃವರ್ಷ ೧೨೦.೦.೫.೦.೦.

**॥ ಸ್ಪಷ್ಟಾಯುರ್ವರ್ಷ ಕೋಷ್ಟಕ ॥**

| ಗ್ರಹರ ಸ್ಫುಟಾದಿಗಳು | | | | | ಸ್ಪಷ್ಟಾಯುರ್ವರ್ಷ | | | | | |
|---|---|---|---|---|---|---|---|---|---|---|
| ಗ್ರಹ | ರಾಶಿ | ಭಾಗ | ಕಲಾ | ವಿಕಲಾ | ಗ್ರಹ | ವರ್ಷ | ಮಾಸ | ದಿನ | ಘಟಿ | ವಿಘಟಿ |
| ರವಿ | ೦ | ೯ | ೫೯ | ೦೨ | ರವಿ | ೧೯ | ೦ | ೦ | ೦ | ೦ |
| ಚಂದ್ರ | ೧ | ೨ | ೫೮ | ೫೨ | ಚಂದ್ರ | ೨೫ | ೦ | ೦ | ೦ | ೦ |
| ಕುಜ | ೯ | ೨೭ | ೫೫ | ೧೦ | ಕುಜ | ೭ | ೬ | ೦ | ೦ | ೦ |
| ಬುಧ | ೧ | ೦ | ೨೫ | ೦ | ಬುಧ | ೭ | ೬ | ೫ | ೦ | ೦ |
| ಗುರು | ೩ | ೪ | ೫೪ | ೫೦ | ಗುರು | ೧೫ | ೦ | ೦ | ೦ | ೦ |
| ಶುಕ್ರ | ೧೧ | ೨೬ | ೫೭ | ೫೫ | ಶುಕ್ರ | ೨೧ | ೦ | ೦ | ೦ | ೦ |
| ಶನಿ | ೬ | ೧೯ | ೫೬ | ೩೯ | ಶನಿ | ೧೬ | ೦ | ೦ | ೦ | ೦ |
| ಲಗ್ನಂ | ೧೧ | ೨೯ | ೫೯ | ೩೦ | ಲಗ್ನಂ | ೯ | ೦ | ೦ | ೦ | ೦ |
| | | | | | ಕೂಡಿಸಿ | ೧೨೦ | ೦ | ೫ | ೦ | ೦ |

| | | | |
|---|---|---|---|
| ಲಗ್ನಂ ೧೨<br>ಶುಕ್ರ ೧೨ | ರವಿ ೩ | ಚಂದ್ರ೧೦<br>ಬುಧ ೧೦ | |
| | ನವಾಂಶಯುಕ್ತ<br>ಗ್ರಹಚಕ್ರಂ | | ಗುರು೫ |
| | | | |
| | | ಶನಿ ೧೨ | |

**ಆಯುರ್ದಾಯಂ ವಿಷ್ಣು ಗುಪ್ತೋಽಪಿ ಚೈವಂ ।**
**ದೇವಸ್ವಾಮೀ ಸಿದ್ಧ ಸೇನಶ್ಚ ಚಕ್ರೇ ॥**
**ದೋಷಶ್ಚೈಷಾಂ ಜಾಯತೇಷ್ಟಾ ವರಿಷ್ಟಂ ।**
**ಹಿತ್ವಾನಾಯುರ್ವಿಂಶತೇಃ ಸ್ಯಾದಧಸ್ತಾತ್ ॥೭॥**

ಆಯುರ್ದಾಯ ವಿಷಯದಲ್ಲಿ ವಿಷ್ಣುಗುಪ್ತ ದೇವಸ್ವಾಮೀ, ಸಿದ್ಧಸೇನ, ಇತ್ಯಾದಿ ಅನೇಕರು ಹೇಳಿದ ಆಯುರ್ದಾಯಗಳಲ್ಲಿ ಎಂಟು ವರ್ಷಗಳ ವರೆಗೆ ಬಾಲಾರಿಷ್ಟವೆಂತ ಹೇಳಿದ್ದಾರೆ. ಅದರ ನಂತರ ೨೦ ವರ್ಷಗಳ ಒಳಗೆ ಆಯುಃ ಸಮಾಪ್ತಿಯಾಗುವವರಿದ್ದಾರೆ ಎಲ್ಲಾ ಗ್ರಹರು ನೀಚದಲ್ಲಿದ್ದರೂ ೨೦ ವರ್ಷಕ್ಕೆ ಕಡಿಮೆ ಆಯುಸ್ಸು ಬರುವುದಿಲ್ಲವಾದುದರಿಂದ ಇದು ಪ್ರತ್ಯಕ್ಷ ವಿರೋಧವೆಂದು ತೋರಿಬರುತ್ತದೆ ಆದರೆ ೨೦ ವರ್ಷಕ್ಕೆ ಕಡಿಮೆಯಾಗಿ ಆಯುರ್ದಾಯವು ಗುಣಿಸಿದಲ್ಲಿ ಬರುವುದರಿಂದ ಮೇಲೆ ಹೇಳಿದ ದೋಷವು ಅಯುಕ್ತವಾಗುವುದು.

**॥ ಉದಾಹರಣೆ ॥**

| ಗ್ರಹರ ಸ್ಫುಟಾದಿಗಳು | | | | | ಸ್ಪಷ್ಟಾಯುಃವರ್ಷಗಳು | | | | | |
|---|---|---|---|---|---|---|---|---|---|---|
| ಗ್ರಹರು | ರಾಶಿ | ಭಾಗ | ಕಲಾ | ವಿಕಲಾ | ಗ್ರಹರು | ವರ್ಷ | ಮಾಸ | ದಿನ | ಘಟಿ | ವಿಘಟಿ |
| ರವಿ | ೦ | ೧೦ | ೦ | ೦ | ರವಿ | ೧೯ | ೧ | ೦ | ೦ | ೦ |
| ಚಂದ್ರ | ೧ | ೩ | ೦ | ೦ | ಚಂದ್ರ | ೨೫ | ೦ | ೦ | ೦ | ೦ |
| ಕುಜ | ೧೦ | ೨೮ | ೦ | ೦ | ಕುಜ | ೧೯ | ೯ | ೦ | ೦ | ೦ |
| ಬುಧ | ೧೧ | ೧೫ | ೦ | ೦ | ಬುಧ | ೭ | ೦ | ೦ | ೦ | ೦ |
| ಗುರು | ೯ | ೫ | ೦ | ೦ | ಗುರು | ೩ | ೯ | ೦ | ೦ | ೦ |
| ಶುಕ್ರ | ೧೧ | ೨೭ | ೦ | ೦ | ಶುಕ್ರ | ೨೧ | ೦ | ೦ | ೦ | ೦ |
| ಶನಿ | ೦ | ೨೦ | ೦ | ೦ | ಶನಿ | ೧೦ | ೦ | ೦ | ೦ | ೦ |
| ಲಗ್ನ | ೧೦ | ೦ | ೧ | ೪ | ಲಗ್ನ | ೦ | ೦ | ೦ | ೦ | ೦ |
| | | | | | ಕೂಡಿಸಿ | ೯೮ | ೭ | ೦ | ೦ | ೦ |

| ಬುಧ ೮<br>ಶುಕ್ರ ೧೨ | ರವಿ೩<br>ಶನಿ ೬ | ಚಂದ್ರ ೧೦ | ಶ್ರೀ |
|---|---|---|---|
| ಲಗ್ನ ೭<br>ಕುಜ ೩ | ನವಾಂಶಯುಕ್ತ<br>ಗ್ರಹಚಕ್ರ | | ಶ್ರೀ |
| ಗುರು ೧೧ | | | ಶ್ರೀ |
| ಶ್ರೀ | ಶ್ರೀ | ಶ್ರೀ | ಶ್ರೀ |

ಇಲ್ಲಿ ವರ್ಷ ೯೮ ೬.೦.೦ ೦ ಬಂದಿದೆ ಸಾರ್ಧೋದಿತೋದಿತ ನವಾಂಶ ೧೦X೯=೯೦ ಉದಿತ+೧ ಲಬ್ಧಿ ೯೧ ಸ್ಪಷ್ಟಾಯುಃ ವರ್ಷ ೯೮ ೬.೦.೦.೦X೯೧ ಲಬ್ಧಿ ೮೯೬೩.೬.೦.೦ ೦— ೧೦೮ ಲಬ್ಧಿ ೮೨ ೧೧ ೨೮.೨೦ ೦ ಸ್ಪಷ್ಟಾಯುರ್ವರ್ಷ ೯೮ ೬ ೦.೦.೦ ೮೨.೧೧.೨೮ ೨೦.೦ ಲಬ್ಧಿ ವರ್ಷ ೧೫.೬.೧ ೪೦.೦ ಶುದ್ಧ ಆಯುರ್ವರ್ಷಗಳಾಯ್ತು. ಪೂರ್ವೋಕ್ತ ೮ ವರ್ಷದ ನಂತರ ೨೦ ವರ್ಷದ ಒಳಗೆ ಆಯುರ್ದಾಯವು ಪ್ರತ್ಯಕ್ಷ ಬರುವುದರಿಂದ "ಆಯುರ್ವಿಂಶತೇಃ ಸ್ಯಾದಧಸ್ಯಾತ್" ಎಂತ ಹೇಳುವುದು ಅಯುಕ್ತವಾಗುವುದು.

ಯಸ್ಮಿನ್‌ಯೋಗೇ ಪೂರ್ಣಮಾಯುಃಪ್ರದಿಷ್ಟಂ ।
ತಸ್ಮಿನ್ ಪ್ರೋಕ್ತಂ ಚಕ್ರವರ್ತಿತ್ವ ಮನ್ಯೈಃ ॥
ಪ್ರತ್ಯಕ್ಷೋಽಯಂ ತೇಷು ದೋಷಃ ಪರೋಽಪಿ ।
ಜೀವಂತ್ಯಾಯುಃ ಪೂರ್ಣಮರ್ಥೈರ್ವಿನಾಽಪಿ ॥೮॥

ಯಾವ ಯೋಗದಲ್ಲಿ ಸಂಪೂರ್ಣವಾದ ಆಯುಷ್ಯವು ಹೇಳಲ್ಪಟ್ಟಿದೆಯೋ ಆ ಯೋಗದಲ್ಲಿ ಪೂರ್ಣಾಯುಷ್ಯಕ್ಕೆ ಕಾರಣ ಗ್ರಹರು ಉಚ್ಚಾದಿಗಳಲ್ಲಿರುವುದರಿಂದ ಚಕ್ರವರ್ತಿತ್ವ ಅಥವಾ ರಾಜಾಧಿರಾಜತ್ವವು ಉಂಟಾಗುವುದೆಂದು ಹೇಳಲ್ಪಟ್ಟಿದೆ. ಆದರೆ ಪೂರ್ಣಾಯುಷ್ಯವಿದ್ದು ಕಡು ದಾರಿದ್ರ್ಯವನ್ನು ಅನುಭವಿಸುವವರೂ ತೋರುವುದರಿಂದ ಇದು ಪ್ರತ್ಯಕ್ಷ ಅನುಭವ ಸಿದ್ಧ ದೋಷ ವಾಗುವುದು.

**ಉದಾಹರಣೆಃ** ರವಿಸ್ಫುಟ ರಾ. ೧.೧೦.೦.೦.೦ ರವಿ ಸ್ಪಷ್ಟಾಯುಃ ವರ್ಷ ೧೭.೫.೦.೦.೦ ಚಂದ್ರಸ್ಫುಟ ರಾ. ೨.೩.೦.೦. ಚಂದ್ರಾಯುಃ ವರ್ಷ ೧೯.೧.೫ ಕುಜಸ್ಫುಟ ರಾ ೧೦.೨೮.೦.೦

ಕುಜಾಯುಃ ೧೩ ೯.೦ ೦ ೦ ಬುಧಸ್ಫುಟ ರಾ ೦ ೧೫ ೦ ೦ ಬುಧಾಯುಃ ವರ್ಷ ೭ ೦.೦.೦ ಗುರುಸ್ಫುಟ ರಾ ೪.೫ ೦ ೦ ಗುರು ಆಯುಃ ವರ್ಷ ೧೨.೦.೧೧ ೧೫ ಶುಕ್ರಸ್ಫುಟ ರಾಶಿ ೨೭ ೨೦.೦ ಶುಕ್ರಾಯುಃ ವರ್ಷ ೧೯ ೨ ೨೬.೩೦ ಶನಿಸ್ಫುಟ ರಾ. ೧೦ ೨೦.೦.೦ ಶನಿ ಆಯುಃ ವರ್ಷ ೧೩.೪ ೦.೦ ೦ ಲಗ್ನಂ ರಾ. ೮.೨೯ ೫೯ ೫೯ ಲಗ್ನಾಯುಃ ವರ್ಷ ೯.೦.೦ ೦. ಎಲ್ಲವನ್ನೂ ಕೂಡಿಸಿದ ವರ್ಷಾದಿಗಳು ೧೧೦.೧೦ ೧೨.೪೫ ೦ ಆಯುರ್ದಾಯವು ಸಿದ್ಧ ವಾಗುತ್ತದೆ

| | | | |
|---|---|---|---|
| ಶ್ರೀ | ಬುಧ ೫<br>ಶುಕ್ರ ೯ | ರವಿ ೧೨ | ಚಂದ್ರ ೭ |
| ಕುಜ ೩<br>ಶನಿ ೧೨ | ನವಾಂಶಯುಕ್ತ ಗ್ರಹಚಕ್ರಂ | | ಶ್ರೀ |
| ಶ್ರೀ | | | ಗುರು ೨ |
| ಶ್ರೀ | ಶ್ರೀ | ಶ್ರೀ | ಶ್ರೀ |

ಈ ಜಾತಕದಲ್ಲಿ "ಹಿತ್ವಾರ್ಕಂ ಸುನಫಾನಫಾ" ಇತ್ಯಾದಿ ಚಾಂದ್ರಯೋಗಾಧ್ಯಾಯದ ೩ನೇ ಶ್ಲೋಕಾನು ಸಾರವಾಗಿ ಚಂದ್ರನಿಗೆ ಹಿಂದೆ ಮುಂದೆ ಗ್ರಹರಿಲ್ಲದಿದ್ದು ಕೇಮದ್ರುಮಯೋಗ (ಕಡು ದಾರಿದ್ರ್ಯ) ವಾಗುವುದರಿಂದ ಪೂರ್ಣಾಯುರ್ಯೋಗದಲ್ಲಿ ದಾರಿದ್ರ್ಯ ಯೋಗವೂ ಪ್ರಾಪ್ತಿಯಾಗುವುದು. ಹೀಗಿರು ವಾಗ ಆಯುರ್ದಾಯ ವಿಷಯದಲ್ಲಿ ದೋಷವನ್ನು ಹೇಳುವುದಕ್ಕೆ ಅವಕಾಶವಿಲ್ಲವೆಂತ ತಿಳಿಯತಕ್ಕದ್ದು.

**ಸ್ವಮತೇನ ಕಿಲಾಹ ಜೀವ ಶರ್ಮಾ ।**
**ಗ್ರಹದಾಯಂ ಪರಮಾಯುಷಃ ಸ್ವರಾಂಶಮ್ ॥**
**ಗ್ರಹಭುಕ್ತ ನವಾಂಶ ರಾಶಿ ತುಲ್ಯಂ ।**
**ಬಹು ಸಾಮ್ಯಂ ಸಮುಪೈತಿ ಸತ್ಯವಾಕ್ಯಮ್ ॥೯॥**

ಜೀವಶರ್ಮರು ತಮ್ಮ ಅಭಿಪ್ರಾಯದಂತೆ ಪರಮಾಯುಸ್ಸು ೧೨೦ ವರ್ಷ ೦ ಮಾಸ ೫ ದಿನಗಳ ಸಪ್ತಮಾಂಶವನ್ನು ಒಂದೊಂದು ಗ್ರಹರು ಕೊಡುವ ಆಯುಷ್ಯವೆಂತ ಹೇಳಿರುತ್ತಾರೆ. ಅಂದರೆ ೧೨೦.೦ ೫—೭ ಲಬ್ಧಿ ೧೭ ವರ್ಷ ೧ ಮಾಸ ೨೨ ದಿನ ೮ ಘಟಿ ೩೪ ವಿಘಟಿ ಆಗುವುದು. ಇದು ಸರ್ವಸಮ್ಮತಿಯಲ್ಲ. ಆದಕ್ಕಾಗಿ ಗ್ರಹಭುಕ್ತ-ನವಾಂಶ ರಾಶಿಗಳಿಗೆ ಸರಿಯಾಗಿ ಆಯುಷ್ಯವೆಂದು ಹೇಳಿರುವ ಸತ್ಯಾಚಾರ್ಯರ ಮತವು ಅನೇಕರು ಹೇಳಿದ ಆಯುರ್ದಾಯಕ್ಕೆ ಸಮಾನವಾಗಿರುವುದ ರಿಂದ ಬಹಳವಾಗಿ ಆಚಾರ್ಯರಿಗೆ ಮಾನ್ಯವಾಗಿರುತ್ತದೆ.

ಸತ್ಯಾಚಾರ್ಯರ ಮತದಂತೆ ಗ್ರಹಭುಕ್ತ ನವಾಂಶ ಅಂದರೆ ಗ್ರಹವು ಯಾವ ರಾಶಿಯಲ್ಲಿರುವುದೋ ಆ ರಾಶಿಯಲ್ಲಿ ಮೇಷಾದಿ ಎಷ್ಟು ನವಾಂಶಗಳು ಕಳೆದಿವೆಯೋ ಅಷ್ಟು ಸಂವತ್ಸರಗಳು ಆ ಗ್ರಹವು ಕೊಡುವ ಆಯುಷ್ಯವೆಂದು ತಿಳಿಯತಕ್ಕದ್ದು.

ಜೀವಶರ್ಮರ ಮತದಂತೆ ಗ್ರಹರು ತಮ್ಮ ತಮ್ಮ ಪರಮೋಚ್ಚದಲ್ಲಿರುವಾಗ ಒಂದೊಂದು ಗ್ರಹರಿಗೆ ೧೭ ವರ್ಷ ೧ ಮಾಸ ೨೨ ದಿನ ೮ ಘಟಿ ೩೪ ವಿಘಟಿಯಾಗುವುದು. ಹಾಗೆಯೇ ಗ್ರಹರು ಪರಮ ನೀಚ ಭಾಗದಲ್ಲಿದ್ದರೆ ಅರ್ಧ ಕಡಿಮೆಯಾಗುವುದು ಅಂದರೆ ವರ್ಷ ೮ ಮಾಸ ೬ ದಿನ ೨೬ ಘಟಿ ೪ ವಿಘಟಿ ೧೭ ಆಗುವುದು ಇದರ ಮಧ್ಯದಲ್ಲಿದ್ದರೆ ತ್ರೈರಾಶಿಕ ಕ್ರಮದಲ್ಲಿ ಗುಣಿಸಿ ಆಯುರ್ದಾಯವನ್ನು ತರುವುದು ಪೂರ್ವೋಕ್ತ ಪ್ರಕಾರ ಚಕ್ರಾರ್ಧ ಹರಣ ಮುಂತಾಗಿ ಎಲ್ಲಾ ಕ್ರಮಗಳಿಂದ ಸ್ಪಷ್ಟಾಯುವನ್ನು ಮಾಡತಕ್ಕದ್ದು. ಗ್ರಹದ ಪರಮೋಚ್ಚ ಭಾಗದಿಂದ ಗ್ರಹವನ್ನು ಕಳೆದಾಗ ೬ ರಾಶಿಗಿಂತ ಕಡಿಮೆ ಇದ್ದರೆ ೧೨ ರಾಶಿಯಲ್ಲಿ ಕಳೆದು ೬ ರಾಶಿಗಿಂತ ಹೆಚ್ಚಾಗಿದ್ದರೆ ಹಾಗೆಯೇ ಕಲೆಗಳನ್ನಾಗಿ ಮಾಡಿದರೆ ಕಲಾಪಿಂಡವಾಗುವುದು. ಕಲಾಪಿಂಡವನ್ನು ೮೬೪೧ರಿಂದ ಗುಣಿಸಿ ೫೦೪ರಿಂದ ಭಾಗಿಸಿದರೆ ಬಂದ ಲಬ್ಧವು ದಿನಾದಿಯಾಗಿ ಜೀವಶರ್ಮಾಯುಸ್ಸನ್ನು ತೋರಿಸುತ್ತದೆ. ದಿನ ಶೇಷವನ್ನು ೬೦ರಿಂದ ಗುಣಿಸಿ ೫೦೪ರಿಂದ ಭಾಗಿಸಿ ಬಂದ ಲಬ್ಧವು ಘಟಿಗಳೂ ಉಳಿದ ಶೇಷವನ್ನು ೬೦ರಿಂದ ಗುಣಿಸಿ ೫೦೪ರಿಂದ ಭಾಗಿಸಿದರೆ ವಿಘಟಿಗಳೂ ಆಗುವುದು. ದಿನಗಳನ್ನು ೩೦ರಿಂದ ಭಾಗಿಸಿದ ಲಬ್ಧಿ ಮಾಸಗಳೂ ಶೇಷದಿನಗಳು. ಮಾಸಗಳನ್ನು ೧೨ರಿಂದ ಭಾಗಿಸಿದ ಲಬ್ಧಿ ವರ್ಷಗಳೂ ಶೇಷಮಾಸಗಳೂ ಆಗುವುದು. ಇದು ೧೭ಕ್ಕೂ ಹೆಚ್ಚಿಗಿದ್ದರೆ ೧೭ರಿಂದ ಭಾಗಿಸಿ ಉಳಿದ ಶೇಷವು ಜೀವಶರ್ಮಾಯುರ್ವರ್ಷಗಳಾಗುವುದು ಇಲ್ಲಿ ಪಿಂಡಾಯುವಿನಲ್ಲಿ ಹೇಳಿದ ಹರಣ ಭರಣಾದಿ ಎಲ್ಲಾ ಸಂಸ್ಕಾರಗಳನ್ನು ಮಾಡತಕ್ಕದ್ದು.

ಜೀವಶರ್ಮ ಆಯುರ್ದಾಯದ ಉಪಪತ್ತಿ. ಪರಮಾಯು ೧೨೦ ವರ್ಷ ೫ ದಿವಸ ಇದರ ದಿನಗಳನ್ನು ಮಾಡಿದ್ದು ೪೩೨೦೫ ಪರಮೋಚ್ಚದಲ್ಲಿರುವ ಏಳು ಗ್ರಹರ ಆಯುಃಪ್ರಮಾಣವಾಯ್ತು. ಗ್ರಹರ ಉಚ್ಚ ಬಿಂದು ೦ ರಾಶಿ ೧೨ ಅಥವಾ ೩೬೦ ಭಾಗಗಳು, ದಿನಗಳು ೪೩೨೦೫—೫ ಲಬ್ಧಿ ೮೬೪೧ ಗುಣಕ ೩೬೦—೫ ಲಬ್ಧಿ ೭೨X೭ ಲಬ್ಧಿ ೫೦೪ ಹಾರಕ. ಉದಾ॥ ರವಿ ಉಚ್ಚ ರಾ. ೦.೧೦.೦.೦—ಸ್ಪಷ್ಟರವಿ ರಾ. ೧.೨೫.೧೪.೧೦ ಲಬ್ಧಿ ರಾ. ೧೦.೧೪ ೪೫.೫೦. ಇದರ ಕಲಾ ೧೮೮೮೫X೮೬೪೧ ಲಬ್ಧಿ ೧೬೩೧೮೫೨೮೫÷೫೦೪ ಲಬ್ಧಿ ದಿನಗಳು ೩೨೩೭೮೦ ಶೇಷ ೧೬೫X೬೦ ಲಬ್ಧಿ ೯೯೦೦—೫೦೪ ಲಬ್ಧಿ ಘಟಿ ೧೯ ಶೇಷ ೩೦೪X೬೦ ಲಬ್ಧಿ ೧೯೪೪೦÷೫೦೪ ಲಬ್ಧಿ ವಿಘಟಿ ೩೮ ಆಯಿತು.

ಹಿಂದೆತಂದ ದಿವಸ ೩೨೩೭೮೦—೩೦ ಲಬ್ಧಿ ಮಾಸ ೧೦೭೯೨ ಶೇಷ ೨೦ ದಿನಗಳು ಮಾಸ ೧೦೭೯೨—೧೨ ಲಬ್ಧಿ ವರ್ಷಗಳು ೮೯೯ ಶೇಷ ಮಾಸ ೪ ವರ್ಷ ೮೯೯—೧೭ ಲಬ್ಧಿ ೫೨ ಶೇಷ ೧೫ ಅಂದರೆ ವರುಷ ೧೫.೪.೨೦.೧೯.೩೮ ಇದಕ್ಕೆ ಪಿಂಡಾಯುವಿನಲ್ಲಿ ಹೇಳಿದ ಹರಣ ಭರಣಾದಿ ಸಂಸ್ಕಾರ ಮಾಡಿದಲ್ಲಿ, ಇದು ರವಿಯಿಂದ ಕೊಡಲ್ಪಟ್ಟ ಆಯುವಾಗುವುದು.

ವಿ.ಸೂ.: ಲಗ್ನವು ಅಧಿಕ ಬಲವಾಗಿದ್ದರೆ ಅಂಶಾಯುವೆಂತಲೂ, ರವಿ ಬಲಿಷ್ಠನಾಗಿದ್ದರೆ ಪಿಂಡಾಯುವೆಂತಲೂ, ಚಂದ್ರನು ಬಲಶಾಲಿಯಾಗಿದ್ದರೆ ನಿಸರ್ಗಾಯುವೆಂತಲೂ ಈ ಮೂರು ಸಮಾನ ಬಲವಾಗಿದ್ದರೆ ಈ ಮೂರನ್ನು ಗುಣಿಸಿ ಕೂಡಿಸಿದ ಮೂರನೆ ಒಂದಂಶವನ್ನೂ, ಇಬ್ಬರು ಬಲವಂತರಾಗಿದ್ದರೆ ಅವರಿಬ್ಬರ ಆಯುವನ್ನು ಗುಣಿಸಿ ಸೇರಿಸಿ ಅದರ ಅರ್ಧವನ್ನು ದಶೆಯಾಗಿ ಗ್ರಹಿಸಬೇಕು ಮೂವರು ಬಲಹೀನರಾಗಿದ್ದರೆ ಜೀವಶರ್ಮಾಯುರ್ದಾಯವನ್ನು ಗುಣಿಸಿ ದಶೆಯನ್ನು ಗ್ರಹಿಸಬೇಕೆಂದು ಗ್ರಂಥಾಂಶದಲ್ಲಿ ಹೇಳಲ್ಪಟ್ಟಿದೆ

ಸತ್ಯೋಕ್ತೇರ್ಗ್ರಹಮಿಷ್ಟಂ ಲಿಪ್ತೀಕೃತ್ವಾಶತ ದ್ವಯೇನಾಪ್ತಂ ।
ಮಂಡಲಭಾಗ ವಿಶುದ್ಧೇಬ್ದಾಃ ಸ್ಯುಃ ಶೇಷಾತ್ತು ಮಾಸಾದ್ಯಾಃ ॥೧೦॥

ಸತ್ಯಾಚಾರ್ಯರ ಮತದಂತೆ ಆಯುರ್ದಾಯದಲ್ಲಿ ತನಗೆ ಬೇಕಾದ ಗ್ರಹಸ್ಫುಟವನ್ನು ಕಲೆಗಳನ್ನಾಗಿ ಮಾಡಿ ೨೦೦ರಿಂದ ಭಾಗಿಸಿ ಬಂದ ಲಬ್ಧಿಯೇ ವರ್ಷಗಳು (ಇದು ೧೨ಕ್ಕೂ ಜಾಸ್ತಿ ಇದ್ದರೆ "ಮಂಡಲ ಭಾಗ ವಿಶುದ್ಧೇ" ೧೨ರಿಂದ ಭಾಗಿಸಿ ಉಳಿದದ್ದು ಆ ಗ್ರಹವು ಕೊಟ್ಟ ಆಯುರ್ವರ್ಷ ಗಳಾಗುವುದು). ಶೇಷವನ್ನು ೧೨ರಿಂದ ಗುಣಿಸಿ ೨೦೦ರಿಂದ ಭಾಗಿಸಿ ಬಂದ ಲಬ್ಧಿ ಮಾಸಗಳು ಶೇಷ ೩೦ರಿಂದ ಗುಣಿಸಿ ೨೦೦ರಿಂದ ಭಾಗಿಸಿ ಬಂದ ಲಬ್ಧಿ ದಿನಗಳು ಶೇಷವನ್ನು ೬೦ರಿಂದ ಗುಣಿಸಿ ೨೦೦ರಿಂದ ಭಾಗಿಸಿ ಬಂದ ಲಬ್ಧಿ ಘಟಿಗಳು ಶೇಷವನ್ನು ಪುನಃ ೬೦ರಿಂದ ಗುಣಿಸಿ ೨೦೦ರಿಂದ ಭಾಗಿಸಿ ಬಂದ ಲಬ್ಧಿ ವಿಘಟಿಗಳೆಂತ ತಿಳಿಯತಕ್ಕದ್ದು

ಸ್ವತುಂಗ ವಕ್ರೋಪಗತೈ ಸ್ತ್ರಿ ಸಂಗುಣಂ ।
ದ್ವಿರುತ್ತಮಸ್ವಾಂಶಕಭ ತ್ರಿಭಾಗಗೈಃ ॥
ಇಯಾನ್ವಿಶೇಷಸ್ತು ಭದತ್ತಭಾಷಿತೇ ।
ಸಮಾನಮನ್ಯತ್ ಪ್ರಥಮೇ ಪ್ಯುದೀರಿತಂ ॥೧೧॥

ಗ್ರಹರು ತನ್ನ ಉಚ್ಛ ಸ್ಥಾನ ಅಥವಾ ವಕ್ರರಾಗಿದ್ದರೆ ಗಣಿತಾಗತವಾಗಿ ಬಂದ ಆಯುಸ್ಸನ್ನು ಮೂರರಿಂದ ಗುಣಿಸಿ ವೃದ್ಧಿ ಮಾಡತಕ್ಕದ್ದು. ಹೀಗೆಯೇ ಸ್ವರಾಶಿ ಸ್ವನವಾಂಶ ವರ್ಗೋತ್ತಮಾಂಶ ಸ್ವದ್ರೇಕ್ಕಾಣದಲ್ಲಿದ್ದ ಗ್ರಹರಿಗೆ ಬಂದ ಆಯುಸ್ಸನ್ನು ಎರಡರಿಂದ ಗುಣಿಸಿ ವೃದ್ಧಿ ಮಾಡತಕ್ಕದ್ದು. ಇದೊಂದು ಸತ್ಯಾಚಾರ್ಯರ ಮತದಲ್ಲಿ ವಿಶೇಷವಾಗಿದೆ. ಬಾಕಿ ಎಲ್ಲಾ ಶತ್ರುಕ್ಷೇತ್ರ ಹರಣಾದಿಗಳು ಹಿಂದೆ ಮಯಯವನಾದಿ ಮತಗಳಲ್ಲಿ ಹೇಳಿದಂತೆ ಸಮಾನವಾಗಿರುವುದೆಂದು ತಿಳಿಯತಕ್ಕದ್ದು.

ಕಿಂತ್ವತ್ರಭಾಂಶ ಪ್ರತಿಮಂದದಾತಿ ।
ವೀರ್ಯಾನ್ವಿತಾ ರಾಶಿ ಸಮಂಚ ಹೋರಾ ॥
ಕ್ರೂರೋದಯೇ ಚಾಪಚಯಸ್ಯನಾತ್ರ ।
ಕಾರ್ಯಂಚನಾಬ್ದೈಃ ಪ್ರಥಮೋಪದಿಷ್ಟೈಃ ॥೧೨॥

ಸತ್ಯಾಚಾರ್ಯ ಮತ ಆಯುರ್ದಾಯದಲ್ಲಿ ಲಗ್ನ ನವಾಂಶಕ್ಕೆ ಸಮಾನವರ್ಷಾದಿಗಳನ್ನು ಕೊಡುವುದು ಲಗ್ನವು ಬಲಶಾಲಿಯಾಗಿದ್ದರೆ ("ಹೋರಾ ಸ್ವಾಮಿ ಗುರುಜ್ಞ ವೀಕ್ಷಿತಯುತಾ" ) ಭುಕ್ತ ರಾಶಿ ಸಂಖ್ಯೆಗೆ ಸಮಾನ ವರ್ಷಗಳು. ಹಾಗೆಯೇ ಲಗ್ನದಲ್ಲಿ ಪಾಪಗ್ರಹರಿದ್ದರೆ ಅನ್ಯ ಮಯಾದಿ ಆಚಾರ್ಯರು ಹೇಳಿದ "ಸಾರ್ಧೋದಿತೋದಿಕ" ವಿಧಿಯಿಂದ ಸತ್ಯಾಚಾರ್ಯರ ಮತದಲ್ಲಿ ಹರಣವಿಲ್ಲ. ಹಾಗೆಯೇ ಪ್ರಥಮದಲ್ಲಿ ಹೇಳಿದ "ನವತಿಥಿವಿಷಯೇತಿ" ಯವನ ಬಾದಾರಾಯಣರು ಹೇಳಿದ ಮತ್ತು ಜೀವಶರ್ಮರು "ಸ್ವರಾಂಶಂ" ಎಂತ ಗ್ರಹಪಿಂಡಕ್ಕೆ ಹೇಳಿದ ಯಾವ ಸಂಸ್ಕಾರ ಗಳನ್ನು ಇಲ್ಲಿ ಮಾಡಕೂಡದು.

## ಉದಾಹರಣೆ

ರವಿಸ್ಫುಟ ರಾ. ೦ ೬ ೪೯.೪೧ ಕಲಾ ಮಾಡಿದ್ದು ೬X೬೦+೪೯ ಲಬ್ಧಿ ೪೦೯.೪೧—೨೦೦ ಲಬ್ಧಿ ೨ ಇದು ೧೨ಕ್ಕೂ ಕಡಿಮೆ ಇರುವುದರಿಂದ ಭಾಗಿಸುವುದು ಬೇಡ. ವರ್ಷ ೨ ಆಯ್ತು. ಶೇಷ ೯.೪೧ X ೧೨ ಲಬ್ಧಿ ೧೧೬.೧೨—೨೦೦ ಲಬ್ಧಿ ೦ ಮಾಸ. ಶೇಷ ೧೧೬.೧೨ X ೩೦ ೩೪೮೬.೦—೨೦೦ ಲಬ್ಧಿ ದಿನ ೧೭ ಶೇಷ ೮೬ X ೬೦ ಲಬ್ಧಿ ೫೧೬೦—೨೦೦ ಲಬ್ಧಿ ಘಟಿ ೨೫ ಶೇಷ ೧೬೦ X ೬೦ ಲಬ್ಧಿ ೯೬೦೦—೨೦೦ ಲಬ್ಧಿ ವಿಘಟಿ ೪೮ ಆಗುವುದು. ಇದೆ ಕ್ರಮದಲ್ಲಿ ಎಲ್ಲಾ ಗ್ರಹರಿಗೂ ಗುಣಿಸಿದಲ್ಲಿ ಯವನೇಶ್ವರ ಸತ್ಯಾಚಾರ್ಯರ ಮತದಂತೆ ಶ್ರೀ ವರಾಹಮಿಹಿರಾಚಾರ್ಯರಿಂದ ಹೇಳಲ್ಪಟ್ಟ ಆಯುರ್ದಾಯವು ನಿರ್ಣಯವಾಗುವುದು.

**ಸತ್ಯೋಪದೇಶೋ ವರಮತ್ರಕಿಂತು ।**
**ಕುರ್ವಂತ್ಯ ಯೋಗ್ಯಂ ಬಹುವರ್ಗಣಾಭಿಃ ॥**
**ಆಚಾರ್ಯಕಂ ತ್ವತ್ರ ಬಹುಘ್ನತಾಯಾ ।**
**ಮೇಕಂತು ಯದ್ಭೂರಿತ ದೇವಕಾರ್ಯಂ ॥೧೩॥**

ಆಯುರ್ದಾಯ ವಿಷಯದಲ್ಲಿ ಹಿಂದೆ ವಿವರಿಸಿದ ಎಲ್ಲಾ ಮತಗಳಲ್ಲಿ ಸತ್ಯಾಚಾರ್ಯರ ಮತವು ಶ್ರೇಷ್ಠವಾದದ್ದು. ಅಂದರೆ ಕೆಲವರು ಬಹುವರ್ಗ ಗುಣಕಗಳಿಂದ ಅಯೋಗ್ಯವಾಗಿರುವುದನ್ನು ಮಾಡುತ್ತಾರೆ. ಪೂರ್ವ ಗ್ರಂಥಾಚಾರ್ಯರ ಸಾಂಪ್ರದಾಯ ಪ್ರಕಾರ ಒಂದು ಗ್ರಹಕ್ಕೆ ಸ್ವಕ್ಷೇತ್ರ ದ್ವಿಗುಣತ್ವ, ಸ್ವನವಾಂಶ ದ್ವಿಗುಣತ್ವ ಅಥವಾ ತ್ರಿಗುಣತ್ವ, ಪ್ರಾಪ್ತಿಯಾದರೆ ಅದರಲ್ಲಿ ಹೆಚ್ಚಿಗಿರುವುದೊಂದನ್ನು ಮಾತ್ರ ಮಾಡತಕ್ಕದ್ದು. ಚಕ್ರಪಾತವಲ್ಲದೆ ಉಳಿದ ಹರಣಗಳಲ್ಲಿ ಅನೇಕ ವಿಧವಾದ ಹರಣಗಳು ಒಂದು ಗ್ರಹಕ್ಕೆ ಸಂಭವಿಸಿದರೆ ಅದರಲ್ಲಿ ಅಧಿಕವಾದ ಒಂದನ್ನು ಮಾತ್ರ ಹರಣ ಮಾಡತಕ್ಕದ್ದು.

**ಗುರುಶಶಿ ಸಹಿತೇ ಕುಳೀರ ಲಗ್ನೇ ।**
**ಶಶಿತನಯೇ ಭೃಗುಜೇ ಚ ಕೇಂದ್ರಯಾತೇ ॥**
**ಭವರಿಪು ಸಹಜೋಪಗೈಶ್ಚ ಶೇಷೈ ।**
**ರಮಿತ ಮಹಾಯುರನು ಕ್ರಮಾದ್ವಿನಾ ಸ್ಯಾತ್ ॥೧೪॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಆಯುರ್ದಾಯ ನಿರೂಪಣಂ ನಾಮ ಸಪ್ತಮೋಧ್ಯಾಯಃ ॥**

ಜನ್ಮಕಾಲ ಲಗ್ನವು ಕರ್ಕಾಟಕವಾಗಿ ಗುರುಚಂದ್ರರಿಂದ ಕೂಡಿದ್ದು, ಬುಧ ಶುಕ್ರರು ಕೇಂದ್ರಸ್ಥಾನದಲ್ಲಿರುವಾಗ ಏಕಾದಶ, ಷಷ್ಠ, ತೃತೀಯ ಸ್ಥಾನಗಳಲ್ಲಿ ಬಾಕಿ ಉಳಿದ ಗ್ರಹಗಳಿರುವಾಗ ಹುಟ್ಟಿದವನಿಗೆ ಗಣಿತ ಕ್ರಮವಿಲ್ಲದೆ ಅಮಿತಾಯುರ್ಯೋಗವಾಗುವುದು.

**॥ ಆಯುರ್ದಾಯ ನಿರೂಪಣವೆಂಬ ಏಳನೇಯ ಅಧ್ಯಾಯವು ॥**

## ॥ ದಶಾಂತರ್ದಶಾಧ್ಯಾಯಃ ॥

ಉದಯರವಿ ಶಶಾಂಕ ಪ್ರಾಣಿ ಕೇಂದ್ರಾದಿ ಸಂಸ್ಥಾಃ।
ಪ್ರಥಮ ವಯಸಿ ಮಧ್ಯೇಂತ್ಯೇ ಚ ದದ್ಯುಃ ಫಲಾನಿ ॥
ನಹಿ ನ ಫಲವಿಪಾಕಃ ಕೇಂದ್ರ ಸಂಸ್ಥಾದ್ಯ ಭಾವೇ ।
ಭವತಿ ಹಿ ಫಲ ಪಕ್ತಿಃ ಪೂರ್ವಮಾಪೋಕ್ಲಿಮೇಪಿ ॥೧॥

ಜನ್ಮಕಾಲದಲ್ಲಿ ಲಗ್ನ, ರವಿ, ಚಂದ್ರರುಗಳಲ್ಲಿ ಯಾವುದು ಅಧಿಕ ಬಲಿಷ್ಠವಾಗಿರುವುದೋ ಆ ದಶೆಯೇ ಮೊದಲನೆಯ ದಶೆಯಾಗಿರುವುದು. ಅದರ ನಂತರ ಮೊದಲನೆ ದಶಾಧಿಪತಿಗೆ ಕೇಂದ್ರ ಸ್ಥಾನದಲ್ಲಿರುವ ಗ್ರಹಗಳ ದಶೆಯು ಬರುವುದು. ಆ ನಂತರ ಮೊದಲನೆ ದಶಾನಾಥನಿಗೆ ಪಣಪರ ಸ್ಥಾನದಲ್ಲಿರುವ ಗ್ರಹಗಳ ದಶೆಯು ಬರುವುದು. ಅದರ ಮುಂದೆ ಪ್ರಥಮ ದಶಾಧಿಪತಿಗೆ ಆಪೋಕ್ಲೀಮ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ಬರುವುದೆಂದು ತಿಳಿಯತಕ್ಕದ್ದು. ಮೊದಲನೆ ದಶಾನಾಥನಿಗೆ ಕೇಂದ್ರದಲ್ಲಿ ಗ್ರಹಗಳಿಲ್ಲದಿದ್ದರೆ ಆ ಪ್ರಥಮ ದಶಾಧಿಪತಿಯ ಪಣಪರ ಸ್ಥಾನದಲ್ಲಿರುವ ಗ್ರಹರ ದಶೆಗಳೂ ಅಲ್ಲಿಯೂ ಗ್ರಹರಿಲ್ಲದಿದ್ದರೆ ಮೂಲ ದಶಾಧಿಪನಿಗೆ ಆಪೋಕ್ಲೀಮದಲ್ಲಿರುವ ಗ್ರಹಗಳ ದಶೆ ಬರುವುದೆಂದು ತಿಳಿಯತಕ್ಕದ್ದು.

ಆಯುಃ ಕೃತಂ ಯೇನಹಿ ಯತ್ತದೇವ ।
ಕಲ್ಪ್ಯಾದಶಾಸಾ ಪ್ರಬಲಸ್ಯ ಪೂರ್ವಂ ॥
ಸಾಮ್ಯೇ ಬಹೂನಾಂ ಬಹುವರ್ಷದಸ್ಯ ।
ತೇಷಾಂ ಚ ಸಾಮ್ಯೇ ಪ್ರಥಮೋದಿತಸ್ಯ ॥೨॥

ಯಾವ ಗ್ರಹವು ಎಷ್ಟು ವರ್ಷ, ಮಾಸ, ದಿವಸ, ಘಟಿ, ವಿಘಟಿ ಆಯುರ್ದಾಯವನ್ನು ಕೊಟ್ಟಿರುತ್ತಾನೋ ಅಷ್ಟು ಸಂವತ್ಸರಾದಿಗಳು ಆ ಗ್ರಹದ ದಶಾಕಾಲವೆಂತಲೂ ಆ ಗ್ರಹಗಳು ಕೊಟ್ಟ ದಶೆಗಳಲ್ಲಿ ಬಲಯುಕ್ತವಾದ ಗ್ರಹಕ್ಕೆ ಪ್ರಥಮ ದಶೆ ಎಂತಲೂ, ಅನೇಕ ಗ್ರಹಗಳು ಸಮಾನ ಬಲವಾಗಿದ್ದಲ್ಲಿ ಆ ಗ್ರಹಗಳಲ್ಲಿ ಹೆಚ್ಚಿಗೆ ಆಯುರ್ದಾಯ ಕೊಟ್ಟಿರುವ ಗ್ರಹಕ್ಕೆ ಮೊದಲನೆ ದಶೆ ಎಂತಲೂ, ಆಯುರ್ದಾಯವು ಒಂದೇ ಸಮಾನವಾಗಿದ್ದಲ್ಲಿ ಸೂರ್ಯನಿಗಿಂತ ಪ್ರಥಮ ಉದಯಿಸುವ ಗ್ರಹಕ್ಕೆ ಪ್ರಥಮ ದಶೆ ಎಂತಲೂ ತಿಳಿಯತಕ್ಕದ್ದು.

### ಉದಾಹರಣೆ

ಶ್ರೀ ಶಕ ೧೯೦೩ ದುರ್ಮತಿ ನಾಮ ಸಂ।ರದ ವೈಶಾಖ ಶುಕ್ಲ ೧೫ ಯು ಚಂದ್ರವಾರ ೫೮।।। ವಿಶಾಖಾ ೫೩।। ವರಿಯಾನ್ ೧೮ ೦ ಭದ್ರಾ ೨೫।।। ವಿಷ ೨.೦ ಅಮೃತ ೨೯.೦ ದಿವಾಮಾನ ಘಟಿ ೩೧.೪೦ ಅಕ್ಷಾಂಶ ೧೨.೫೨ ರೇಖಾಂಶ ೭೪.೫೦ ಅಯನಾಂಶ ೨೩.೩೫.೩೪ ಈ ಶುಭದಿವ್ಸ ಸೂರ್ಯೋದಯಾದಿ ಘಟಿ ೪೪.೪೫ಕ್ಕೆ ಮಕರ ಲಗ್ನದಲ್ಲಿ (ತಾ. ೧೮-೫-೧೯೮೧) ಶುಭ ಜನನ

| ೦ | ಕುಜ ೮ | ರವಿ೧೧<br>ಬುಧ ೪<br>ಶುಕ್ರ ೧೦ | ೦ |
|---|---|---|---|
| ೦ | ನವಾಂಶಯುಕ್ತ<br>ಗ್ರಹ ಕುಂಡಲಿ | | ೦ |
| ಲಗ್ನ ೩ | | | ೦ |
| ೦ | ಚಂದ್ರ ೪ | ೦ | ಗುರು ೧೨<br>ಶನಿ ೧೨ |

## ವಿವರಣೆ

ಈ ಕುಂಡಲಿಯಲ್ಲಿ ಲಗ್ನ, ರವಿ, ಚಂದ್ರರಲ್ಲಿ ಲಗ್ನಾಧಿಪತಿ ಉಚ್ಚಾರೋಹಿಯಾದರೂ ವೈರಿ ಕ್ಷೇತ್ರ ದಲ್ಲಿ ಚಂದ್ರನು ನೀಚದಲ್ಲಿ, ರವಿ ಉಚ್ಚ ಬಿಟ್ಟವನಾದರೂ ಆ ಸ್ಥಾನಾಧಿಪತಿ ಶುಕ್ರ ಸ್ವಕ್ಷೇತ್ರದಲ್ಲಿದ್ದು ಗುರು ದೃಷ್ಟಿಯಿರುವುದರಿಂದ ರವಿ ಮಹರ್ದಶೆಯು ಪ್ರಥಮ ದಶೆಯಾಗುವುದು. ರವಿಯ ಸಂಗಡ ಬುಧನಿರುವುದರಿಂದ ಎರಡನೆ ದಶೆಯು ಬುಧನದ್ದಾಗುವುದು. ಶುಕ್ರ ಸ್ವಕ್ಷೇತ್ರದಲ್ಲಿದ್ದರೂ ಅಸ್ತ ನಾಗಿರುವುದರಿಂದ ಸಪ್ತಮದಲ್ಲಿರುವ ಚಂದ್ರದಶೆಯಾಗಿ ನಂತರ ಶುಕ್ರದಶೆಯಾಗುವುದು. ಪಣಪರ, ಆಪೋಕ್ಲಿಮಗಳಲ್ಲಿರುವ ಗ್ರಹರಿಗೂ ಹೀಗೆಯೇ ದಶೆಗಳೆಂದು ತಿಳಿಯತಕ್ಕದ್ದು.

### ॥ ನವೀನ ದೃಕ್ಸಿದ್ಧಾಂತ ಪ್ರಕಾರ ಗ್ರಹಸ್ಫುಟಾದಿಗಳು ಮತ್ತು ಚಕ್ರಾರ್ಧಹಾನಿ ಅಸ್ತಶತ್ರುಕ್ಷೇತ್ರಹರಣ ಮಾಡಿದ ಸ್ಪಷ್ಟಾಯುರ್ವರ್ಷಗಳು ॥

| ಗ್ರಹ ಸ್ಫುಟಾದಿಗಳು | | | | | ಸ್ಪಷ್ಟ ಗ್ರಹ ದತ್ತಾಯುರ್ವರ್ಷಗಳು | | | | | |
|---|---|---|---|---|---|---|---|---|---|---|
| | ರಾಶಿ | ಭಾಗ | ಕಲಾ | ವಿಕಲಾ | | ವರ್ಷ | ಮಾಸ | ದಿನ | ಘಟಿ | ವಿಘಟಿ |
| ರವಿ | ೧ | ೪ | ೯ | ೧೦ | ರವಿ | ೧೧ | ೯ | ೧೭ | ೨೩ | ೩೫ |
| ಚಂದ್ರ | ೭ | ೧ | ೩೮ | ೬ | ಚಂದ್ರ | ೧೨ | ೭ | ೪ | ೭ | ೩೦ |
| ಕುಜ | ೦ | ೨೩ | ೧೫ | ೪ | ಕುಜ | ೧೧ | ೫ | ೧೧ | ೧೪ | ೦ |
| ಬುಧ | ೧ | ೨೩ | ೧೬ | ೯ | ಬುಧ | ೮ | ೩ | ೯ | ೧೩ | ೪೮ |
| ಗುರು | ೫ | ೭ | ೧ | ೨೯ | ಗುರು | ೧೦ | ೧೦ | ೧೦ | ೪೯ | ೨೫ |
| ಶುಕ್ರ | ೧ | ೧ | ೧೪ | ೨೬ | ಶುಕ್ರ | ೧೯ | ೦ | ೦ | ೫೬ | ೫೪ |
| ಶನಿ | ೫ | ೯ | ೪೧ | ೩ | ಶನಿ | ೬ | ೫ | ೬ | ೫೦ | ೩೦ |
| ಲಗ್ನ | ೯ | ೧೮ | ೩೧ | ೫೯ | ಲಗ್ನ | ೫ | ೬ | ೧೯ | ೪೮ | ೦ |
| | | | | | ಒಟ್ಟು ಕೂಡಿಸಿ | ೮೫ | ೧೧ | ೨೦ | ೨೯ | ೦ |

ಏಕರ್ಕ್ಷಗೋರ್ಧಮಪಹೃತ್ಯ ದದಾತಿತು ಸ್ವಂ
ತ್ರ್ಯಂಶಂ ತ್ರಿಕೋಣ ಗೃಹಗಃ ಸ್ಮರಗಃ ಸ್ವರಾಂಶಂ ॥
ಪಾದಂ ಫಲಸ್ಯ ಚತುರಸ್ರ ಗತಃ ಸಹೋರಾ ।
ಸ್ತ್ವೇವಂ ಪರಸ್ಪರ ಗತಾಃ ಪರಿಪಾಚಯಂತಿ ॥೩॥

ದಶಾಧಿಪತಿಯು ತನ್ನ ಸಂಗಡ ಒಂದೇ ರಾಶಿಯಲ್ಲಿರುವ ಗ್ರಹಕ್ಕೆ ತನ್ನ ದಶಾ ವರ್ಷದಲ್ಲಿ ½ ಅರ್ಧವನ್ನು ಅಂತರ್ದಶೆಯನ್ನಾಗಿ ಕೊಡುತ್ತಾನೆ. ದಶಾನಾಥನಿಂದ ನವಮ ಪಂಚಮದಲ್ಲಿರುವ ಗ್ರಹಕ್ಕೆ ⅓ ಮೂರನೆಯ ಒಂದಂಶವನ್ನು ಕೊಡುತ್ತಾನೆ. ದಶಾನಾಥನ ಸಪ್ತಮದಲ್ಲಿರುವ ಗ್ರಹಕ್ಕೆ 1/7 ಏಳನೆಯ ಒಂದಂಶವನ್ನು ಕೊಡುತ್ತಾನೆ. ದಶಾನಾಥನಿಂದ ಚತುರ್ಥ ಅಷ್ಟಮದಲ್ಲಿರುವ ಗ್ರಹಕ್ಕೆ ¼ ನಾಲ್ಕನೆ ಒಂದಂಶವನ್ನು ಅಂತರ್ದಶೆಯನ್ನಾಗಿ ಕೊಡುತ್ತಾನೆ. ಲಗ್ನಕ್ಕೆ ಅಂತರ್ದಶೆ ಯನ್ನು ಗ್ರಹರಿಗೆ ಹೇಳಿದ ಕ್ರಮದಂತೆ ಸಂಸ್ಕಾರ ಮಾಡಿ ತರುವುದು.

ಸ್ಥಾನಾನ್ಯಥೈತಾನಿ ಸವರ್ಣಯಿತ್ವಾ।
ಸರ್ವಾಣ್ಯಧಃಚ್ಛೇದ ವಿವರ್ಜಿತಾನಿ ॥
ದಶಾಬ್ದ ಪಿಂಡೇ ಗುಣಕಾ ಯಥಾಂಶಂ ।
ಭೇದಸ್ತ ದೈಕ್ಯೇನ ದಶಾ ಪ್ರಭೇದಃ ॥೪॥

ಈ ಹಿಂದೆ ಹೇಳಲ್ಪಟ್ಟಿರುವ ಅರ್ಧಾಂಶ, ತೃತೀಯಾಂಶ, ಚತುರ್ಥಾಂಶ, ಸಪ್ತಾಂಶ, ಮೊದಲಾದ ಸ್ಥಾನಗಳನ್ನು ಸಮಭಾಗ ಭೇದಗಳನ್ನಾಗಿ ಮಾಡಿ ಕೆಳಗಿನ ಭೇದಗಳ ಅಂಕೆಯನ್ನು ಬಿಟ್ಟು ಎಲ್ಲ ವನ್ನು ಸಮಭೇದಗಳಾಗಿ ಮಾಡಿ ಸಕಲ ಸ್ಥಾನಾಂಕಗಳನ್ನು ಸಂಕಲನ ಮಾಡಿಕೊಂಡು ಮೂಲ ದಶಾ ವರ್ಷ ಮಾಸಾದಿಗಳನ್ನು ಬೇರೆ ಬೇರೆಯಾಗಿ ಗುಣಿಸಿ ಮೇಲಿನ ಸ್ಥಾನಾಂಕಗಳನ್ನು ಒಟ್ಟು ಕೂಡಿಸಿದ ಸಂಖ್ಯೆಯಿಂದ ಭಾಗಿಸಿದಲ್ಲಿ ಮೊದಲು ಹೇಳಿದ ಅರ್ಧಾಂಶ, ತೃತೀಯಾಂಶ, ಚತುರ್ಥಾಂಶ, ಸಪ್ತಾಂಶಗಳ ಅಂತರ್ದಶಾ ಕಾಲಗಳು ಬರುವುದೆಂದು ತಿಳಿಯತಕ್ಕದ್ದು.

### ನ್ಯಾಸಕ್ರಮ

ರವಿಯು ದಶಾನಾಥನಾದುದರಿಂದ ೧/೧, ಬುಧನು ರವಿಯ ಸಂಗಡ ಇರುವುದರಿಂದ ೧/೨, ಲಗ್ನವು ರವಿಯ ತ್ರಿಕೋಣದಲ್ಲಿರುವುದರಿಂದ ೧/೩, ಚಂದ್ರನು ರವಿಯ ಸಪ್ತಮದಲ್ಲಿರುವುದರಿಂದ ೧/೭ ಹೀಗೆ ಭಾಗಿಗಳಾಗುವುದು.

| ರವಿ | ಬುಧ | ಲಗ್ನ | ಚಂದ್ರ | ಸಮಭೇದ |
|---|---|---|---|---|
| ೧/೧ | ೧/೨ | ೧/೩ | ೧/೭ | = ೪೨ |
| | | | | ಧ್ರುವಕ |
| ೪೨ | ೨೧ | ೧೪ | ೬ | =೮೩, ಭಾಜಕ |

ರವಿಯ ಅಂಶ ೪೨ ಬುಧ ಅಂಶ ೨೧ ಲಗ್ನದ ಅಂಶ ೧೪ ಚಂದ್ರನ ಅಂಶ ೬ ಆಯಿತು. ರವಿ ದಶೆಯನ್ನು ಅವರವರ ಅಂಶದಿಂದ ಗುಣಿಸಿ ಧ್ರುವಕ ೮೩ರಿಂದ ಭಾಗಿಸಿದರೆ ಆಯಾಯ ಗ್ರಹರ ಅಂತರ್ದಶೆಯಾಗುವುದು

## ಉದಾಹರಣೆ

ರವಿ ಮಹರ್ದಶಾ ರವಿ ಅಂತರ್ದಶಾ ಕ್ರಮ ರವಿಯ ಸ್ಪಷ್ಟಾಯುವರ್ಷಗಳು ೧೧.೯, ೧೭.೨ ೩.೫೩×೪೨−೮೩ ಲಬ್ಧಿ ರವಿಯ ದಶೆಯಲ್ಲಿ ರವಿ ಅಂತರ್ದಶಾ ವರ್ಷ ೫ ೧೧.೧೯.೧೭.೯ ಆಯ್ತು. ರವಿ ದಶಾ ವರ್ಷ ೧೧ ೯.೧೭.೨೩.೫೩×೨೧−೮೩ ಲಬ್ಧಿ ಬುಧನ ಅಂತರ್ದಶಾ ವರ್ಷ ೨.೧೧.೨೪.೩೮.೩೫ ಆಯ್ತು. ರವಿ ದಶಾವರ್ಷ ೧೧ ೯.೧೯ ೩೨.೫೩×೧೪−೮೩ ಲಬ್ಧಿ ಲಗ್ನ ಅಂತರ್ದಶಾ ವರ್ಷ ೧.೧೧.೨೬.೨೫.೪೩ ಆಯ್ತು. ರವಿ ದಶಾವರ್ಷ ೧೧.೯.೧೭.೨೩.೫೩×೬÷೮೩ ಲಬ್ಧಿ ಚಂದ್ರ ಅಂತರ್ದಶಾ ವರ್ಷ ೦.೧೦.೭.೨.೨೭ ಆಯ್ತು. ಹೀಗೆಯೇ ಎಲ್ಲಾ ಮಹರ್ದಶೆ ಅಂತರ್ದಶೆಗಳನ್ನು ಗುಣಿಸುವುದು.

**ಸಮ್ಯಗ್ಬಲಿನಃ ಸ್ವತುಂಗಭಾಗೇ ।**
**ಸಂಪೂರ್ಣ ಬಲವರ್ಜಿತಸ್ಯರಿಕ್ತಾ ॥**
**ನೀಚಾಂಶ ಗತಸ್ಯ ಶತ್ರು ಭಾಗೇ ।**
**ಜ್ಞೇಯಾಽನಿಷ್ಟ ಫಲಾದಶಾ ಪ್ರಸೂತೌ ॥೫॥**

ಜನ್ಮಕಾಲದಲ್ಲಿ ಹಿಂದೆ ಹೇಳಿದ ಸ್ಥಾನಾದಿ ಬಲಯುಕ್ತವಾಗಿದ್ದು ತನ್ನ ಪರಮೋಚ್ಚ ಭಾಗದಲ್ಲಿದ್ದ ಗ್ರಹರ ಮಹಾದಶೆಯು ಸಂಪೂರ್ಣ ಶುಭಫಲ ಕೊಡತಕ್ಕದ್ದೆಂದು ತಿಳಿಯತಕ್ಕದ್ದು. ಸ್ಥಾನಾದಿ ಬಲ ರಹಿತವಾಗಿದ್ದು ತನ್ನ ನೀಚ ಭಾಗದಲ್ಲಿ ಅಥವಾ ಶತ್ರು ನವಾಂಶದಲ್ಲಿದ್ದ ದಶೆಗೆ ರಿಕ್ತಯೆಂತ ಹೆಸರಿದ್ದು ಅನಿಷ್ಟ ಫಲವನ್ನು ಕೊಡುವುದೆಂದು ತಿಳಿಯತಕ್ಕದ್ದು.

**ಭ್ರಷ್ಟಸ್ಯ ತುಂಗಾ ದವರೋಹ ಸಂಜ್ಞಾ।**
**ಮಧ್ಯಾ ಭವೇತ್ಸಾ ಸುಹೃದುಚ್ಚ ಭಾಂಶೇ ॥**
**ಆರೋಹಿಣೀ ನಿಮ್ನ ಪರಿಚ್ಯುತಸ್ಯ ।**
**ನೀಚಾರಿ ಭಾಂಶೇಷ್ವಧಮಾ ಭವೇತ್ಸಾ ॥೬॥**

ಗ್ರಹವು ತನ್ನ ಪರಮೋಚ್ಚದ ನಂತರ ಪರಮ ನೀಚದ ವರೆಗೆ ಇರುವ ಗ್ರಹರ ದಶೆಗೆ "ಅವರೋಹ" ಎಂತಲೂ ಆ ಗ್ರಹವು ಮಿತ್ರ ಸ್ವೋಚ್ಚ ಸ್ವನವಾಂಶಯಲ್ಲಿದ್ದರೆ "ಮಧ್ಯಾ" ಎಂತಲೂ ಗ್ರಹವು ತನ್ನ ಪರಮ ನೀಚವನ್ನು ಬಿಟ್ಟು ಪರಮೋಚ್ಚದವರೆಗೆ ಇರುವ ಗ್ರಹರ ದಶೆಗೆ "ಆರೋಹ" ಎಂತಲೂ, ಅದೇ ಗ್ರಹವು ಶತ್ರುಕ್ಷೇತ್ರ, ನೀಚ ನವಾಂಶೆಯಲ್ಲಿದ್ದರೆ "ಅಧಮಾ" ಎಂತಲೂ ಸಂಜ್ಞೆಯುಳ್ಳದ್ದಾಗುವುದೆಂದು ತಿಳಿಯತಕ್ಕದ್ದು.

**ನೀಚಾರಿಭಾಂಶೇ ಸಮುವ ಸ್ಥಿತಸ್ಯ ।**
**ಶಸ್ತೇ ಗೃಹೇ ಮಿಶ್ರಫಲಾ ಪ್ರದಿಷ್ಟಾ ॥**
**ಸಂಜ್ಞಾನು ರೂಪಾಣಿ ಫಲಾನ್ಯ ಥೈಷಾಂ ।**
**ದಶಾಸು ವಕ್ಷ್ಯಾಮಿ ಯಥೋಪ ಯೋಗಂ ॥೭॥**

ಗ್ರಹರು ಸ್ವೋಚ್ಚ, ಮೂಲತ್ರಿಕೋಣ, ಸ್ವಕ್ಷೇತ್ರ, ಮಿತ್ರಕ್ಷೇತ್ರಗಳಲ್ಲಿ ಪ್ರಶಸ್ತರಾಗಿದ್ದರೂ ನೀಚ ಅಥವಾ ಶತ್ರು ನವಾಂಶದಲ್ಲಿದ್ದರೆ ಈ ಗ್ರಹರ ದಶೆಯು "ಮಿಶ್ರ ಫಲ" ಅಂದರೆ ಶುಭಾಶುಭ ಫಲಗಳನ್ನು ಒಟ್ಟಿಗೆ ಕೊಡಲ್ಪಡುವುದು. ಹಾಗೆಯೇ ಲಗ್ನ ಸಹಿತ ಸೂರ್ಯಾದಿ ಗ್ರಹರು ದಶಾಂತರ್ದಶೆಗಳಲ್ಲಿ ಸಂಜ್ಞಾರೂಪಗಳಿಗೆ ಸರಿಯಾಗಿ ಯಾವ ಯಾವ ದಶೆಯಲ್ಲಿ ಯಾವ ಯಾವ ಫಲಗಳು ಯಾವ ಪ್ರಕಾರ ಉಪಯುಕ್ತವಾಗುವುದೋ ಆ ಪ್ರಕಾರವಾಗಿ ಹೇಳಲ್ಪಡುವುದು.

**ಉಭಯೇಧಮ ಮಧ್ಯ ಪೂಜಿತಾ ।**
**ದ್ರೇಕ್ಕಾಣೈಶ್ಚರ ಭೇಷು ಚೋತ್ಕ್ರಮಾತ್ ॥**
**ಅಶುಭೇಷ್ಟ ಸಮಾಃ ಸ್ಥಿರೇ ।**
**ಕ್ರಮಾದ್ದೋರಾಯಾಃ ಪರಿಕಲ್ಪಿತಾ ದಶಾ ॥೮॥**

ದ್ವಿಸ್ವಭಾವ ರಾಶಿಗಳು ಲಗ್ನವಾಗಿ ಪ್ರಥಮ ದ್ರೇಕ್ಕಾಣವಾಗಿದ್ದರೆ ಅಧಮವೆಂತಲೂ, ಮಧ್ಯ ದ್ರೇಕ್ಕಾಣವಾಗಿದ್ದರೆ ಮಧ್ಯಮವೆಂತಲೂ ಅಂತ್ಯ ದ್ರೇಕ್ಕಾಣವಾಗಿದ್ದರೆ ಪೂಜಿತಾ ಎಂತಲೂ ಹಾಗೆಯೇ ಚರರಾಶಿಗಳು ಲಗ್ನವಾಗಿ ಆದಿದ್ರೇಕ್ಕಾಣವಾಗಿದ್ದರೆ ಪೂಜಿತಾ ಎಂತಲೂ ದ್ವಿತೀಯ ದ್ರೇಕ್ಕಾಣವಾಗಿದ್ದರೆ ಮಧ್ಯಮಾ ಎಂತಲೂ ತೃತೀಯ ದ್ರೇಕ್ಕಾಣವಾಗಿದ್ದರೆ ಅಧಮಾ ಎಂತಲೂ ಸ್ಥಿರರಾಶಿಗಳು ಲಗ್ನವಾಗಿ ಆದಿದ್ರೇಕ್ಕಾಣವಾಗಿದ್ದರೆ ಅಶುಭಾ ಎಂತಲೂ ಮಧ್ಯ ದ್ರೇಕ್ಕಾಣವಾಗಿದ್ದರೆ ಇಷ್ಟಾ ಎಂತಲೂ ಅಂತ್ಯ ದ್ರೇಕ್ಕಾಣವಾಗಿದ್ದರೆ ಸಮಾ ಎಂತಲೂ ಕ್ರಮವಾಗಿ ಲಗ್ನದಶೆಯಲ್ಲಿ ಶುಭಾಶುಭ ಮಿಶ್ರಫಲಗಳನ್ನು ಕಲ್ಪಿಸಿ ಹೇಳತಕ್ಕದ್ದು.

**ಏಕಂದ್ವೌ ನವವಿಂಶತಿ ರ್ಧೃತಿಕೃತೀ ಪಂಚಾಶ ದೇಷಾಂ ಕ್ರಮಾ ।**
**ಚ್ಚಂದ್ರಾರೇಂದುಜ ಶುಕ್ರ ಜೀವದಿನಕೃದ್ದೈವಾ ಕರಿಣಾಂ ಸಮಾಃ ॥**
**ಸ್ವೈಃ ಸ್ವೈಃ ಪುಷ್ಟ ಫಲಾ ನಿಸರ್ಗ ಜನಿತೈಃ ಪಕ್ತಿರ್ದಶಾಯಾಃಕ್ರಮಾ ।**
**ದಂತೇ ಲಗ್ನದಶಾ ಶುಭೇತಿಯವನಾ ನೇಚ್ಛಂತಿ ಕೇಚಿತ್ತಥಾ ॥೯॥**

ಜನ್ಮಕಾಲದದಿಂದ ಚಂದ್ರನಿಗೆ ೧ ವರ್ಷ, ಕುಜನಿಗೆ ೨ ವರ್ಷ, ಬುಧನಿಗೆ ೯ ವರ್ಷ, ಶುಕ್ರನಿಗೆ ೨೦ ವರ್ಷ, ಗುರುವಿಗೆ ೧೮ ವರ್ಷ, ಸೂರ್ಯನಿಗೆ ೨೦ ವರ್ಷ, ಶನಿಗೆ ೫೦ ವರ್ಷ ಹೀಗೆ ಚಂದ್ರಾದಿ ಗ್ರಹಗಳಿಗೆ ಕ್ರಮವಾಗಿ ನೈಸರ್ಗಿಕ ದಶೆ ಎಂತ ಇದ್ದು ೧೨೦ ವರ್ಷ ಪರಮಾಯುಸ್ಸಾಗುವುದು ಈ ದಶಾಧಿಪತಿಗಳು ಬಲವಂತರಾಗಿ ಉಪಚಯ ಸ್ಥಾನಗಳಲ್ಲಿದ್ದರೆ ತಮ್ಮ ದಶೆ ಅಂತರ್ದಶೆಗಳಲ್ಲಿ ಶುಭಫಲವನ್ನೂ, ಹೀನ ಬಲರಾಗಿ ಅಪಚಯ ಸ್ಥಾನಗಳಲ್ಲಿದ್ದರೆ ಅಶುಭಫಲವನ್ನು ಕೊಡುವರು ಈ ಹಿಂದೆ ಹೇಳಲ್ಪಟ್ಟ ಗ್ರಹದಶೆಗಳು ಮತ್ತು ನೈಸರ್ಗಿಕ ಗ್ರಹದಶೆಗಳು ಈ ಎರಡು ದಶೆಗಳು ಒಂದೇ ಗ್ರಹಕ್ಕೆ ಕೂಡಿ ಇದ್ದರೆ ಆ ಕಾಲದ ದಶೆಯಾಗಲಿ ಅಂತರ್ದಶೆಯಾಗಲಿ ಸಂಪೂರ್ಣ ಶುಭಫಲ ಕೊಡುವುದೆಂದು ತಿಳಿಯತಕ್ಕದ್ದು. ಈ ದಶೆಗಳು ೧೨೦ ವರ್ಷ ಕಳೆದ ನಂತರ ಲಗ್ನದಶೆ ಬರುತ್ತದೆಂದೂ ಅದು ಶುಭಫಲ ಕೊಡುತ್ತದೆಂದೂ ಯವನಾಚಾರ್ಯರು ಹೇಳಿದರೂ ಕೆಲವರಿಗೆ ಇದು ಸಮ್ಮತವಲ್ಲ

ಪಾಕ ಸ್ವಾಮಿನಿ ಲಗ್ನಗೇ ಸುಹೃದಿವಾವರ್ಗಸ್ಯ ಸೌಮ್ಯೇಪಿವಾ ।
ಪ್ರಾರಬ್ಧಾ ಶುಭದಾದಶಾ ತ್ರಿದಶ ಷಡ್‌ಲಾಭೇಷು ವಾಪಾಕಪೇ ॥
ಮಿತ್ರೋಚ್ಚೋಪಚಯ ತ್ರಿಕೋಣ ಮದನೇ ಪಾಕೇಶ್ವರಸ್ಯ ಸ್ಥಿತ ।
ಶ್ಚಂದ್ರಸ್ತತ್ಫಲ ಬೋಧನಾನಿ ಕುರುತೇ ಪಾಪಾನಿಚಾತೋಽನ್ಯಥಾ ॥೧೦॥

ದಶಾಧಿಪತಿಯು ದಶಾ ಪ್ರವೇಶ ಲಗ್ನದಲ್ಲಿ ವ ಮಿತ್ರಕ್ಷೇತ್ರದಲ್ಲಿ ಅಥವಾ ತನ್ನ ಸಪ್ತವರ್ಗಗಳು ಲಗ್ನಕ್ಕೆ ಬಂದಲ್ಲಿ ಶುಭಗ್ರಹರು ದಶಾ ಪ್ರವೇಶ ಲಗ್ನದಲ್ಲಿದ್ದರೂ, ದಶಾಧಿಪತಿಯು ೩.೧೦ ೧೧ ೬ ಈ ಸ್ಥಾನದಲ್ಲಿರುವಾಗ ಪ್ರಾರಂಭವಾದ ಮಹಾದಶೆಯು ಶುಭಫಲವನ್ನು ಕೊಡುವುದು ಹೀಗೆಯೇ ಅಂತರ್ದಶಾ ಪ್ರವೇಶ ಕಾಲದಲ್ಲಿಯೂ ತಿಳಿಯುವುದು. ಮಹಾ ದಶಾಧಿಪತಿಗೆ ಅಧಿ ಮಿತ್ರ ಗ್ರಹವು ಅಂತರ್ದಶಾಧಿಪತಿಯಾದರೆ ಹೆಚ್ಚಾದ ಶುಭಫಲವನ್ನು ಅಧಿಶತ್ರು ಎಂದ ಗ್ರಹವು ಹೆಚ್ಚಾದ ಅಶುಭಫಲವನ್ನು, ಸಮಗ್ರಹವಾದರೆ ಶುಭಾಶುಭ ಮಿಶ್ರಫಲವನ್ನು ಕೊಡುವುದು ಚಂದ್ರನು ದಶಾಧಿಪತಿಯ ತತ್ಕಾಲ ಮಿತ್ರರಾಶಿಯಲ್ಲಿದ್ದರೂ ಉಚ್ಚರಾಶಿಯಲ್ಲಿದ್ದರೂ ಉಪಚಯಗಳಿಂದ ೩ ೬.೧೦ ೧೧ ಮತ್ತು ೭ ೫.೯ ಈ ಸ್ಥಾನಗಳಲ್ಲಿರುವಾಗ ಶುಭಫಲವನ್ನು ಕೊಡುತ್ತಾನೆ ಹಾಗೆಯೇ ಚಂದ್ರನು ದಶಾಧಿಪತಿಯ ತಾತ್ಕಾಲಿಕ ಶತ್ರುರಾಶಿಯಲ್ಲಿದ್ದರೂ ವ ನೀಚರಾಶಿಯಲ್ಲಿ ದ್ದರೂ ದಶಾಧಿಪತಿಯನ್ನು ಕೂಡಿ ಒಂದೇ ರಾಶಿಯಲ್ಲಿದ್ದರೂ ದ್ವಿತೀಯ, ಚತುರ್ಥ, ಅಷ್ಟಮ, ದ್ವಾದಶದಲ್ಲಿದ್ದರೂ ಶುಭಗ್ರಹ ದಶೆಯೂ ಆ ಭಾವಕ್ಕೆ ಅಶುಭ ಫಲವನ್ನು ಕೊಡುತ್ತಾನೆಂದು ತಿಳಿಯತಕ್ಕದ್ದು. ಗ್ರಹಸ್ಫುಟ ಮುಂತಾದ ಗಣಿತಗಳಿಗೆ ಆಗಾಗ್ಗೆ ಬೀಜ ಸಂಸ್ಕಾರಾದಿಗಳನ್ನು ಮಾಡದಿದ್ದರೆ ಎಲ್ಲಾ ಗಣಿತವು ತಪ್ಪಾಗುವುದರಿಂದ ಆಯಾಯ ಕಾಲಕ್ಕೆ ಶುದ್ಧೀಕರಿಸಿದ ನವೀನ ದೃಕ್ ಸಿದ್ಧಾಂತ ಪ್ರಕಾರ ಎಲ್ಲಾ ಗಣಿತಗಳನ್ನು ದಶಾಂತರ್ದಶಾ ಪ್ರವೇಶ ಕಾಲಗಳನ್ನು ಗುಣಿಸಿಕೊಂಡಲ್ಲಿ ಎಲ್ಲಾ ಫಲಗಳು ಪ್ರತ್ಯಕ್ಷ ಅನುಭವಕ್ಕೆ ಬರುವುದೆಂದು ತಿಳಿಯತಕ್ಕದ್ದು.

ಗ್ರಹದ ಅತ್ಯುಚ್ಚ ಭಾಗದಿಂದ ಗ್ರಹವನ್ನು ಕಳೆದು ೬ ರಾಶಿಗಿಂತ ಕಡಿಮೆ ಇದ್ದರೆ ೧೨ ರಾಶಿಯಲ್ಲಿ ಕಳೆದು ೬ ರಾಶಿಗಿಂತ ಹೆಚ್ಚಾಗಿದ್ದರೆ ಹಾಗೆಯೇ ಕಲೆಗಳನ್ನಾಗಿ ಮಾಡಿ ಇಲ್ಲಿ ಗ್ರಹಕ್ಕೆ ಹೇಳಿದ ವರ್ಷ

ಸಂಖ್ಯೆಯಿಂದ ಗುಣಿಸಿ ೨೧೬೦೦ರಿಂದ ಭಾಗಿಸಿ ಬಂದ ಲಬ್ಧವು ನೈಸರ್ಗಿಕಾಯುರ್ದಾಯವೆಂದು ಹೇಳಲ್ಪಟ್ಟು ವರ್ಷ ಮಾಸಾದಿಗಳನ್ನು ತೋರಿಸುತ್ತದೆ. ಹಿಂದೆ ಪಿಂಡಾಯುವಿನಲ್ಲಿ ಹೇಳಿದ ಹರಣ ಭರಣಾದಿ ಎಲ್ಲಾ ಸಂಸ್ಕಾರಗಳನ್ನು ಇಲ್ಲಿಯೂ ಮಾಡತಕ್ಕದ್ದು. (ಪಿಂಡಾಯುವನ್ನು ಗುಣಿಸಿ ತಂದಂತೆಯೇ ತರುವುದು).

### ಉದಾಹರಣೆ

ಸ್ಪಷ್ಟ ರವಿ ರಾ ೧.೨೫.೧೪.೧೦—೦.೧೦.೦.೦ ಲಬ್ಧಿ ರಾ೧ ೧೫.೧೪.೧೦ ವಿ ಕಲೆ ಮಾಡಿ ೧೬೨೮೫೦, ಇದನ್ನು ರವಿ ನೀಚಕ್ಕೆ ಹೇಳಿದ ಮಾಸ ೧೨೦ರಿಂದ ಗುಣಿಸಿದ್ದು ೧೬೨೮೫೦×೧೨೦ ಲಬ್ಧಿ ೧೯೫೪೨೦೦೦÷೬೪೮೦೦೦ ಲಬ್ಧಿ ಮಾಸ ೩೦ ಶೇಷ ೧೦೨೦೦೦×೩೦ ಲಬ್ಧಿ ೩೦೬೦೦೦೦÷೬೪೮೦೦೦ ಲಬ್ಧಿ ದಿನ ೪ ಶೇಷ ೪೬೮೦೦೦×೬೦ ಲಬ್ಧಿ ೨೮೦೮೦೦೦೦—೬೪೮೦೦೦ ಲಬ್ಧಿ ಘ ೪೩ ಶೇಷ ೨೧೬೦೦೦×೬೦ ಲಬ್ಧಿ ೧೨೯೬೦೦೦೦—೬೪೮೦೦೦ ಲಬ್ಧಿ ವಿಘಟಿ ೨೦ ಅಂದ್ರೆ ವರ್ಷ ೨ ಮಾಸ ೬ ದಿನ ೪ ಘಟಿ ೪೩ ವಿಘಟಿ ೨೦ ಆಯಿತು. ಇದನ್ನು ರವಿ ಉಚ್ಚಕ್ಕೆ ಹೇಳಿದ ವರ್ಷ ೨೦ರಲ್ಲಿ ಕಳದದ್ದು. ವರ್ಷ ೨೦.೦ ೦.೦.೦—೨ ೬.೪.೪೩.೨೦ ಲಬ್ಧಿ ವರ್ಷ ೧೭.೫.೨೫.೧೬.೪೦ ಇದೇ ರವಿ ದತ್ತಾಯು ವರ್ಷಾದಿಗಳು.

### ಸುಲಭ ರೀತಿ

ರವಿ ಉಚ್ಚ ರಾ ೦.೧೦.೦.೦ ರವಿ ಸ್ಫುಟ ರಾಶಿ ೧ ೨೫.೧೪.೧೦ ಕಳೆದು ಲಬ್ಧಿ ರಾ ೧೦.೧೪.೪೫.×೨೦ ಲಬ್ಧಿ ವರ್ಷ ೧೭ ಮಾಸ ೫ ದಿನ ೨೫ ಘಟಿ ೧೬ ವಿಘಟಿ ೪೦ ಇದು ರವಿ ಕೊಟ್ಟ ನೈಸರ್ಗಿಕಾಯುರ್ವರ್ಷಗಳು.

**ಪ್ರಾರಬ್ಧಾ ಹಿಮಗೋರ್ದಶಾ ಸ್ವಗೃಹಗೇ ಮಾನಾರ್ಥ ಸೌಖ್ಯಾವಹಾ ।**
**ಕೌಜೇದೂಷಯತಿ ಸ್ತ್ರೀಯಂ ಬುಧ ಗೃಹೇ ವಿದ್ಯಾ ಸುಹೃದ್ವಿತ್ತದಾ ॥**
**ದುರ್ಗಾರಣ್ಯ ಪಥಾಲಯೇ ಕೃಷಿಕರೀ ಸಿಂಹೇ ಸಿತಕ್ಷೇತ್ರೇಽನ್ನದಾ ।**
**ಕುಸ್ತ್ರೀದಾಮ್ಯಗ ಕುಂಭಯೋರ್ಗುರು ಗೃಹೇ ಮಾನಾರ್ಥ ಸೌಖ್ಯಾವಹಾ ॥೧೧॥**

ಚಂದ್ರನು ಸ್ವಕ್ಷೇತ್ರವಾದ ಕರ್ಕಾಟಕದಲ್ಲಿದ್ದಾಗ ಪ್ರವೇಶ ಮಾಡಿದ ದಶೆ, ಅಂತರ್ದಶೆಗಳು ಮಾನಮರ್ಯಾದೆಗಳನ್ನು ಧನವನ್ನು ಸುಖವನ್ನು ಕೊಡುತ್ತದೆ. ಚಂದ್ರನು ಕುಜ ಕ್ಷೇತ್ರಗಳಾದ ಮೇಷ ವೃಶ್ಚಿಕದಲ್ಲಿರುವಾಗ ಪ್ರವೇಶ ಮಾಡಿದರೆ ಅಂತರ್ದಶೆಗಳು ಸ್ತ್ರೀ ದೂಷಣವನ್ನು ಬುಧ ಕ್ಷೇತ್ರಗಳಾದ ಕನ್ಯಾ, ಮಿಥುನಗಳಲ್ಲಿ ಚಂದ್ರನಿರುವಾಗ ಪ್ರವೇಶ ಮಾಡಿದ ದಶಾ ಅಂತರ್ದಶೆಗಳು ವಿದ್ಯೆಯನ್ನು ಸದ್ಗುಣಗಳಿಂದ ಕೂಡಿದ ಮಿತ್ರರನ್ನೂ ಧನವನ್ನು ಕೊಡುತ್ತದೆ ಸಿಂಹರಾಶಿಯಲ್ಲಿ ಚಂದ್ರನಿರುವಾಗ ಪ್ರವೇಶ ಮಾಡಿದರೆ ಅಂತರ್ದಶೆಗಳು ದುರ್ಗಮವಾದ ಅರಣ್ಯ ಪ್ರವೇಶ, ದಾರಿ ನಡೆಯುವಿಕೆ, ಗೃಹ ಕೃಷಿಯನ್ನು ಮಾಡಲು ಪ್ರಯೋಜನ ಕೊಡುತ್ತದೆ. ಶುಕ್ರಕ್ಷೇತ್ರಗಳಾದ ವೃಷಭ. ತುಲೆಯಲ್ಲಿ ಚಂದ್ರನಿರುವಾಗ ಪ್ರವೇಶ ಮಾಡಿದ ದಶೆ ಅಂತರ್ದಶೆಗಳು, ಮೃಷ್ಟಾನ್ನಗಳನ್ನು

ಕೊಡುತ್ತದೆ. ಶನಿಕ್ಷೇತ್ರಗಳಾದ ಮಕರ ಕುಂಭ ರಾಶಿಯಲ್ಲಿ ಚಂದ್ರನಿರುವಾಗ ಪ್ರವೇಶ ಮಾಡಿದ ದಶೆ ಅಂತರ್ದಶೆಗಳು ಕುತ್ಸಿತ ಸ್ತ್ರೀಯನ್ನು ಕೊಡುತ್ತದೆ. ಗುರುಕ್ಷೇತ್ರಗಳಾದ ಧನು ಮೀನದಲ್ಲಿ ಚಂದ್ರನಿರುವಾಗ ಪ್ರವೇಶ ಮಾಡಿದ ದಶೆ ಅಂತರ್ದಶೆಗಳು ಮಾನವನ್ನು ಧನವನ್ನು ಕೊಟ್ಟು ಸೌಖ್ಯವನ್ನು ಕೊಡುತ್ತದೆಂದು ತಿಳಿಯತಕ್ಕದ್ದು.

ಸೌರ್ಯಾಂ ಸ್ವಂ ನಖದಂತ ಚರ್ಮಕನಕ ಕ್ರೌರ್ಯಾಧ್ವ ಭೂಪಾಹವೈ ।
ಸ್ತೈಕ್ಷ್ಣಂ ಧೈರ್ಯಮಜಸ್ರ ಮದ್ಯಮರತಿಃ ಖ್ಯಾತಿಃ ಪ್ರತಾಪೋನ್ನತಿಃ ॥
ಭಾರ್ಯಾಪುತ್ರ ಧನಾರಿಶಸ್ತ್ರ ಹುತಭುಗ್ ಭೂಪೋದ್ಭವಾ ವ್ಯಾಪದ
ಸ್ತ್ಯಾಗೀ ಪಾಪರತಿಃ ಸ್ವಭೃತ್ಯಕಲಹೋ ಹೃತ್ಕ್ರೋಡಪೀಡಾ ಮಯಾಃ ॥೧೨॥

ಸೂರ್ಯನು ತನ್ನ ದಶೆಯಲ್ಲಿ ಮತ್ತು ಅಂತರ್ದಶೆಯಲ್ಲಿ ಸುಗಂಧ ವಿಶೇಷಣಗಳಿಂದ ಅಥವಾ ವ್ಯಾಘ್ರನಖ, ಗಜದಂತ, ಚರ್ಮ, ಕೃಷ್ಣಾಜಿನ, ಚಿನ್ನ ಇತ್ಯಾದಿ ವ್ಯವಹಾರಗಳಿಂದ ಧನಪ್ರಾಪ್ತಿಯೂ ಕ್ರೂರ ಸ್ವಭಾವದಿಂದಲೂ ದಾರಿ ನಡೆಯುವುದರಿಂದ ಯುದ್ಧ ಜಗಳ ಮುಂತಾದ ಕಲಹಗಳಿಂದ ಧನಪ್ರಾಪ್ತಿಯೂ ಉಗ್ರ ಸ್ವಭಾವ ಉಕ್ಕಿ ಬರುವಿಕೆಯೂ ಧೀರತ್ವದಿಂದ ಕಾರ್ಯಾಚರಣೆಯೂ ಯಾವಾಗಲೂ ಕೆಲಸ–ಕಾರ್ಯಗಳಲ್ಲಿ ಆಸಕ್ತಿಯೂ ಶೌರ್ಯ ಪರಾಕ್ರಮ ಖ್ಯಾತಿ ಕೀರ್ತಿ ಉದಾರತ್ವ ಇತ್ಯಾದಿ ಶುಭಫಲಗಳುಂಟಾಗುವುದು. ಸೂರ್ಯನು ಬಲಹೀನನಾಗಿದ್ದ ದಶೆ ಅಂತರ್ದಶೆಯಲ್ಲಿ ಸ್ತ್ರೀ, ಪುತ್ರ, ಧನ, ಶತ್ರು, ಶಸ್ತ್ರ, ಅಗ್ನಿ, ಭೂಪತಿ, ಮುಂತಾದ ಕಾರಣಗಳಿಂದ ಹುಟ್ಟಿದ ಪೀಡೆಯೂ ವಿಪತ್ತಿಯೂ ನಷ್ಟ, ಕೆಟ್ಟ ನಡತೆ ತನ್ನ ನೌಕರರಲ್ಲಿ ಕಲಹ, ಹೃದಯ ಹೊಟ್ಟೆ ಸಂಬಂಧವಾದ ರೋಗಪೀಡೆಯೂ ಉಂಟಾಗುವುದು.

ಇಂದೋಃ ಪ್ರಾಪ್ಯದಶಾಂ ಫಲಾನಿಲಭತೇ ಮಂತ್ರ ದ್ವಿಜಾತ್ಯುದ್ಭವಾ ।
ನಿಕ್ಷುಕ್ಷೀರ ವಿಕಾರವಸ್ತ್ರ ಕುಸುಮ ಕ್ರೀಡಾತಿಲಾನ್ನಶ್ರಮೈಃ ॥
ನಿದ್ರಾಲಸ್ಯಮೃದು ದ್ವಿಜಾಮರರತಿಃ ಸ್ತ್ರೀ ಜನ್ಮಮೇಧಾವಿತಾ ।
ಕೀರ್ತ್ಯರ್ಥೋಪಚಯ ಕ್ಷಯೌಚ ಬಲಿಭಿರ್ವೈರಂ ಸ್ವಪಕ್ಷೇಣ ಚ ॥೧೩॥

ಚಂದ್ರನು ತನ್ನ ದಶೆ ಅಂತರ್ದಶೆಯಲ್ಲಿ ಬ್ರಾಹ್ಮಣರಿಂದ ಮಂತ್ರೋಪಾಸನೆಗಳೂ, ಕಬ್ಬು, ಬೆಲ್ಲ, ಸಕ್ಕರೆ, ಹಾಲು, ಮೊಸರು, ತುಪ್ಪ, ಬೆಣ್ಣೆ ಮೊದಲಾದ ವಸ್ತುಗಳೂ, ನಾನಾ ವಿಧವಾದ ವಸ್ತ್ರಗಳೂ, ಹೂಗಳೂ, ಮನೋಹರವಾದ ವಸ್ತುಗಳೂ, ನಾನಾ ಪಕ್ವಾನ್ನಗಳೂ, ಕ್ರೀಡಾ ಆಟ ವ್ಯಾಯಾಮಾದಿಗಳಿಂದ ಇಷ್ಟಾರ್ಥಗಳೂ ಉಂಟಾಗುವುದು. ಚಂದ್ರನು ಬಲಹೀನನಾಗಿದ್ದ ದಶಾ ಅಂತರ್ದಶೆಯಲ್ಲಿ ನಿದ್ರೆಯೂ ಆಲಸ್ಯವೂ ಮೃದು ಸ್ವಭಾವವೂ ದೇವ ಬ್ರಾಹ್ಮಣರಲ್ಲಿ ಪ್ರೀತಿಯೂ, ಸ್ತ್ರೀಜನನವೂ, ಬುದ್ಧಿ ಕೀರ್ತಿ ಧನಗಳು ವೃದ್ಧಿಯಾಗದಿರುವಿಕೆಯೂ ಬಲಿಷ್ಠರಾದ ಸ್ವಜನರೊಡನೆ ವಿರೋಧವೂ ಉಂಟಾಗುವುದು.

ಭೌಮಸ್ಯಾರಿ ವಿಮರ್ದಭೂಪ ಸಹಜಕ್ಷಿತ್ಯಾ ವಿಕಾಜೈರ್ಧನಂ ।
ಪ್ರದ್ವೇಷಃ ಸುತಮಿತ್ರದಾರ ಸಹಜೈರ್ವಿದ್ವದ್ಗುರುದ್ವೇಷಿತಾ ॥
ತೃಷ್ಣಾ ಸೃಗ್ಜ್ವರ ಪಿತ್ತಭಂಗ ಜನಿತಾ ರೋಗಾಃ ಪರಸ್ತ್ರೀಕೃತಾಃ ।
ಪ್ರೀತಿಃ ಪಾಪರತ್ಯೈರಧರ್ಮ ನಿರತಿಃ ಪಾರುಷ್ಯತೈಕ್ಷ್ಣ್ಯಾ ನಿ ಚ ॥೧೪॥

ಕುಜನು ತನ್ನ ದಶೆ ಅಂತರ್ದಶೆಯಲ್ಲಿ ಶತ್ರು ನಾಶವೂ ರಾಜಸಮಾನ ಜನರಿಂದಲೂ ಸಹೋದರ ರಿಂದಲೂ ಭೂಮಿ, ಕುರಿ, ಆಡು ಮುಂತಾದವುಗಳಿಂದಲೂ ಧನ ಪ್ರಾಪ್ತಿಯುಂಟಾಗುವುದು. ಕುಜನು ಬಲಹೀನನಾಗಿದ್ದರೆ ಅಂತರ್ದಶೆಯಲ್ಲಿ ಮಕ್ಕಳೂ ಮಿತ್ರರೂ ಹೆಂಡತಿ ಮತ್ತು ಸಹೋದರರುಗಳಲ್ಲಿ ವೈರವೂ, ವಿದ್ವಾಂಸರು ಗುರುಜನರಲ್ಲಿ ವಿರೋಧವೂ, ಬಾಯಾರಿಕೆ, ರಕ್ತಸ್ರಾವ, ಪಿತ್ತಪ್ರಕೋಪದಿಂದ ಹುಟ್ಟಿದ, ಅಥವಾ ಪರಸ್ತ್ರೀ ಸಂಗದಿಂದುಂಟಾದ ರೋಗಗಳೂ ಪಾಪ ಕಾರ್ಯ ಅಧರ್ಮದಲ್ಲಿ ಆಸಕ್ತಿಯೂ, ಕೆಟ್ಟ ಮಾತುಗಳೂ, ಕ್ರೂರ ಸ್ವಭಾವಗಳೂ ಉಂಟಾಗುವುದೆಂದು ತಿಳಿಯತಕ್ಕದ್ದು.

ಬೌಧ್ಯಾಂ ದೌತ್ಯ ಸುಹೃದ್ಗುರುದ್ವಿಜ ಧನಂ ವಿದ್ವತ್ಪ್ರಶಂ ಸಾಯಶೋ ।
ಯುಕ್ತಿದ್ರವ್ಯ ಸುವರ್ಣವೇ ಸರಮಹೀ ಸೌಭಾಗ್ಯ ಸೌಖ್ಯಾಪ್ತಯಃ ॥
ಹಾಸ್ಯೋಪಾಸನ ಕೌಶಲಂ ಮತಿ ಚಯೋಧರ್ಮಕ್ರಿಯಾ ಸಿದ್ಧಯಃ ।
ಪಾರುಷ್ಯಶ್ರಮ ಬಂಧಮಾನಸ ಶುಚಃ ಪೀಡಾಚ ಧಾತು ತ್ರಯಾತ್ ॥೧೫॥

ಬುಧನು ತನ್ನ ದಶೆ ಅಂತರ್ದಶೆಯಲ್ಲಿ ಸೇವಕರಿಂದಲೂ, ಮಿತ್ರರಿಂದಲೂ ಅಥವಾ ಗುರು, ಬ್ರಾಹ್ಮಣರ ಮೂಲಕವಾಗಿ ಧನವೂ ವಿದ್ವತ್ಪ್ರಶಂಸೆಯೂ ಯಶಸ್ಸೂ, ಕೀರ್ತಿಯೂ, ಯುಕ್ತಿಯಿಂದ ಧನಲಾಭವೂ, ಸುವರ್ಣ, ಅಶ್ವ, ಭೂಮಿ, ಸದ್ಭಾಗ್ಯ ಸೌಖ್ಯ ಪ್ರಾಪ್ತಿಯೂ, ಹಾಸ್ಯ ಉಪಾಸನಾ, ಕೌಶಲ್ಯ, ಬುದ್ಧಿವೃದ್ಧಿ, ಧರ್ಮಕರ್ಮ ಸಿದ್ಧಿಯೂ ಉಂಟಾಗುವುದು. ಬುಧನು ಹೀನಬಲನಾಗಿದ್ದ ದಶೆ ಅಂತರ್ದಶೆಯಲ್ಲಿ ವಾಕ್ಕಠಿಣತ್ವದಿಂದಲೂ ಅಸಾಧ್ಯ ಕೆಲಸ ಮಾಡುವುದರಿಂದಲೂ ಬಂಧನ, ಮನೋವ್ಯಥೆಯೂ, ವಾತ, ಪಿತ್ತ, ಕಫ ಮೊದಲಾದ್ದರಿಂದ ಹುಟ್ಟಿದ ವ್ಯಾಧಿಯೂ ಉಂಟಾಗುವುದು.

ಜೈವ್ಯಾಂ ಮಾನಗುಣೋದಯೋಮತಿ ಚಯಃ ಕಾಂತಿಃಪ್ರತಾಪೋನ್ನತಿ ।
ಮಾಹಾ ತ್ಮ್ಯೋದ್ಯಮ ಮಂತ್ರನೀತಿ ನೃಪತಿ ಸ್ವಾಧ್ಯಾಯ ಮಂತ್ರೈರ್ಧನಂ ॥
ಹೇಮಾಶ್ವಾತ್ಮಜ ಕುಂಜರಾಂಬರಚಯಃ ಪ್ರೀತಿಶ್ಚ ಸದ್ಭೂಮಿಪೈಃ ।
ಸೂಕ್ಷ್ಮೋಹಾಗಹನಾಶ್ರಮಃ ಶ್ರವಣರುಗ್ವೈರಂ ವಿಧರ್ಮಾಶ್ರಿತೈಃ ॥೧೬॥

ಗುರುವು ತನ್ನ ದಶೆ ಅಂತರ್ದಶೆಯಲ್ಲಿ ಮಾನಸನ್ಮಾನಗಳೂ, ವೇದಾಧ್ಯಯನವೂ, ಸಾತ್ವಿಕಾದಿ ಗುಣಗಳೂ ಬುದ್ಧಿಯ ಅಭಿವೃದ್ಧಿಯೂ, ಪ್ರತಾಪವೂ, ಉನ್ನತಿಕೆಯೂ, ಸದ್ವೃತ್ತಿಯಿಂದ ವಾಕ್ಸಿದ್ಧಿ

ಮೊದಲಾದ ಮಹಾತ್ಮೆಯಿಂದ ಮಹಾಕಾರ್ಯಗಳ ಪ್ರಾರಂಭವೂ, ಮಹಾ ಮಂತ್ರಗಳ ಜಪ ಪುರಶ್ಚರಾಣಾದಿಗಳೂ, ನೀತಿ, ರಾಜಸೇವಾ, ಆಪದ್ಧರ್ಮ, ವೇದಪಾರ, ಪ್ರವಚನ ಮುಂತಾದುವುಗಳಿಂದ ಧನ ಪ್ರಾಪ್ತಿಯೂ, ಚಿನ್ನಾಭರಣ, ಆನೆ, ಕುದುರೆ, ಪಚ್ಚೆ ಪೀತಾಂಬರಾದಿ ವಸ್ತ್ರಗಳ ಪ್ರಾಪ್ತಿಯೂ, ಪುತ್ರರು, ಸಚ್ಚರಿತ್ರರಾದ ಭೂಪತಿಗಳ ಸ್ನೆಹವೂ, ಉಂಟಾಗುವುದು. ಗುರುವು ಬಲಹೀನನಾಗಿದ್ದ ದಶೆ ಅಂತರ್ದಶೆಯಲ್ಲಿ ಸೂಕ್ಷ್ಮವಾಗಿ ತಿಳಿದುಕೊಳ್ಳುವರೆ ಮಾಡಿದ ಶ್ರಮದಿಂದ ಕರ್ಣರೋಗವೂ, ಧರ್ಮ ಬಾಹ್ಯ ಕೃತ್ಯಗಳಿಂದ ವಿರೋಧವೂ ಉಂಟಾಗುವುದು.

> ಶೌಕ್ರ್ಯಾಂ ಗೀತರತಿ ಪ್ರಮೋದಸುರಭಿ ದ್ರವ್ಯಾನ್ನ ಪಾನಾಂಬರ ।
> ಸ್ತ್ರೀರತ್ನದ್ಯುತಿ ಮನ್ಮಥೋಪಕರಣ ಜ್ಞಾನೇಷ್ಟ ಮಿತ್ರಾಗಮಾಃ ॥
> ಕೌಶಲ್ಯಂ ಕ್ರಯವಿಕ್ರಯೇ ಕೃಷಿನಿಧಿ ಪ್ರಾಪ್ತಿರ್ಧನಸ್ಯಾಗಮೋ ।
> ಬೃಂದೋರ್ವೀಶ ನಿಷಾದ ಧರ್ಮರಹಿತೈರ್ವೈರಂ ಶುಚಃ ಸ್ನೇಹತಃ ॥೧೭॥

ಶುಕ್ರನು ತನ್ನ ದಶೆ ಅಂತರ್ದಶೆಯಲ್ಲಿ ಸಂಗೀತ ಆಸಕ್ತಿಯೂ, ಅತ್ತರು ಮೊದಲಾದ ಪರಿಮಳ ದ್ರವ್ಯಗಳೂ, ಮೃಷ್ಟಾನ್ನ ಪಾನಾದಿಗಳೂ, ಪಚ್ಚೆ ಪೀತಾಂಬರ ವಸ್ತುಗಳೂ, ಸ್ತ್ರೀಯರು ರತ್ನಾದಿ ಆಭರಣಗಳೂ, ಕಾಮೋಪಭೋಗ ಸಾಧನಗಳಿಂದ, ಹಾಸಿಗೆ, ಪಲ್ಲಂಗ, ಬೀಸಣಿಗೆ, ತಾಂಬೂಲ, ಸುಗಂಧ ದ್ರವ್ಯಗಳೂ, ಜ್ಞಾನವೂ, ಅಭಿವೃದ್ಧಿಯನ್ನು ಆಶಿಸುವ ಮಿತ್ರರೂ, ಇಷ್ಟರ ಆಗಮನವೂ ಎಲ್ಲಾ ವಿಷಯದಲ್ಲಿ ಅನುಕೂಲವೂ, ಕ್ರಯವಿಕ್ರಯ ಕುಶಲತೆಯೂ, ಭೂಮಿ ನಿಧಿ ಲಾಭವೂ, ಧನಸಂಪತ್ತಿಯ ಬರುವಿಕೆಯೂ ಉಂಟಾಗುವುದು. ಶುಕ್ರನು ಬಲಹೀನನಾಗಿದ್ದ ದಶೆ ಅಂತರ್ದಶೆಯಲ್ಲಿ ಬಹು ಜನರುಗಳಲ್ಲಿಯೂ ಭೂಪತಿಯಲ್ಲಿಯೂ, ಜೀವಹಿಂಸೆ ಮಾಡುವ ಕಿರಾತರಲ್ಲಿಯೂ, ಧರ್ಮಹೀನ ಜನರಲ್ಲಿಯೂ, ವಿರೋಧಗಳೂ, ಸ್ನೇಹದಿಂದ ದುಃಖ—ಶೋಕಗಳ ಪ್ರಾಪ್ತಿಯೂ ಉಂಟಾಗುವುದು.

> ಸೌರೀಂ ಪ್ರಾಪ್ಯ ಖರೋಷ್ಟ್ರಪಕ್ಷಿ ಮಹಿಷೀ ವೃದ್ಧಾಂಗನಾ ವಾಪ್ತಯಃ ।
> ಶ್ರೇಣಿಗ್ರಾಮ ಪುರಾಧಿಕಾರ ಜನಿತಾ ಪೂಜಾ ಕುಧಾನ್ಯಾಗಮಃ ॥
> ಶ್ಲೇಷ್ಮೇರ್ಷ್ಯಾನಿಲ ಕೋಪ ಮೋಹಮಲಿನ ವ್ಯಾಪತ್ತಿ ತಂದ್ರಾಶ್ರಮಾನ್ ।
> ಭೃತ್ಯಾಪತ್ಯ ಕಳತ್ರಭರ್ತ್ಸನ ಮಪಿ ಪ್ರಾಪ್ನೋತಿ ಚ ವ್ಯಂಗತಾಂ ॥೧೮॥

ಶನಿಯು ತನ್ನ ದಶೆ ಅಂತರ್ದಶೆಯಲ್ಲಿ ಕತ್ತೆ, ಒಂಟೆ, ಉಷ್ಟ್ರಪಕ್ಷಿ, ಎಮ್ಮೆ, ವೃದ್ಧ ಸ್ತ್ರೀ ಇವರುಗಳ ಪ್ರಾಪ್ತಿಯೂ, ಪಟ್ಟಣ, ಬೀದಿ, ಪುರಾಧಿಕಾರಿಗಳಿಂದ ಸನ್ಮಾನವೂ, ಕೆಟ್ಟಿರುವ ಅಥವಾ ಕಪ್ಪು ಧಾನ್ಯಗಳ ಲಾಭವೂ ಉಂಟಾಗುವುದು. ಶನಿಯು ಬಲಹೀನನಾಗಿದ್ದ ದಶೆ ಅಂತರ್ದಶೆಗಳಲ್ಲಿ ಶ್ಲೇಷ್ಮರೋಗವೂ, ಹೊಟ್ಟೆಕಿಚ್ಚಿನಿಂದುಂಟಾದ ವಾಯುರೋಗವೂ, ಮೋಹದಿಂದಲೂ ಮಲಿನತೆಯಿಂದಲೂ ವಿಶೇಷ ವಿಪತ್ತಿಯೂ, ನಿದ್ರೆಯಿಂದಲೂ ಆಲಸ್ಯದಿಂದಲೂ ಶ್ರಮವಾಗುವಿಕೆಯೂ, ಭೃತ್ಯರಿಂದಲೂ, ಪುತ್ರರಿಂದಲೂ, ಹೆಂಡತಿಯಿಂದಲೂ ಅನಾದರವೂ ಅಂಗಹೀನತ್ವವೂ ಉಂಟಾಗುವುದು.

ದಶಾಸು ಶಸ್ತಾಸು ಶುಭಾನಿ ।
ಕುರ್ವಂತ್ಯನಿಷ್ಟ ಸಂಜ್ಞಾಸ್ಚ ಶುಭಾನಿ ಚೈವಂ ॥
ಮಿಶ್ರಾ ಸುಮಿಶ್ರಾಣಿ ದಶಾಫಲಾನಿ।
ಹೋರಾಫಲಂ ಲಗ್ನಪತೇಃ ಸಮಾನಂ ॥೧೯॥

ಸೂರ್ಯಾದಿ ಗ್ರಹರ ಶುಭಾಶುಭ ಫಲಗಳನ್ನು ಹೇಗೆ ಹೇಳಲ್ಪಟ್ಟಿದೆಯೋ ಅದರಲ್ಲಿ ಗ್ರಹರು ತಮ್ಮ ಶುಭದಶೆಯಲ್ಲಿ ಶುಭಫಲವನ್ನೂ ಅಶುಭಗ್ರಹ ದಶೆಯಲ್ಲಿ ಅಶುಭಫಲವನ್ನೂ, ಮಧ್ಯಮ ದಶೆಯಲ್ಲಿ ಶುಭಾಶುಭ ಮಿಶ್ರಫಲವನ್ನೂ ಅವರವರ ಸಂಜ್ಞೆಗಳಿಗನುಸಾರವಾಗಿ ಫಲಗಳನ್ನು ಕೊಡುತ್ತಾರೆ ಲಗ್ನ ದಶಾಫಲವನ್ನು ಲಗ್ನಾಧಿಪತಿಯ ಸ್ಥಿತಿಗನುಸಾರವಾಗಿ ತಿಳಿಯತಕ್ಕದ್ದು

ಸಂಜ್ಞಾಧ್ಯಾಯೇ ಯಸ್ಯ ಯದ್ದ್ರವ್ಯಮುಕ್ತಂ ।
ಕರ್ಮಾಜೀವೋಯಶ್ಚ ಯಸ್ಯೋಪದಿಷ್ಟಃ ॥
ಭಾವಸ್ಥಾನಾಂ ಲೋಕಯೋಗೋದ್ಭವಂಚ ।
ತತ್ತತ್ಸರ್ವಂ ತಸ್ಯಯೋಜ್ಯಂ ದಶಾಯಾಂ ॥೨೦॥

ಸಂಜ್ಞಾಧ್ಯಾಯದಲ್ಲಿ ಹೇಳಲ್ಪಟ್ಟ "ತಾಮ್ರಂಸ್ಯಾನ್ಮಣಿಹೇಮ" ಎಂಬಂತೆ ಯಾವ ಗ್ರಹಕ್ಕೆ ಯಾವ ದ್ರವ್ಯ ಹೇಳಲ್ಪಟ್ಟಿದೆಯೋ ಆ ಗ್ರಹದ ಶುಭದಶೆಯಲ್ಲಿ ಆ ದ್ರವ್ಯಗಳು ಲಾಭವಾಗುವುದೆಂದೂ, ಕರ್ಮಾಜೀವಾಧ್ಯಾಯದಲ್ಲಿ "ಅರ್ಥಾಪ್ತಿಃ ಪಿತೃಜನನೀ" ಎಂಬಂತೆ ಯಾವ ಗ್ರಹಕ್ಕೆ ಯಾರಿಂದ ಧನಪ್ರಾಪ್ತಿಯೂ ಕರ್ಮಜೀವನವೂ ಹೇಳಲ್ಪಟ್ಟಿದೆಯೋ ಅದರಿಂದ ಫಲಪ್ರಾಪ್ತಿಯನ್ನೂ "ಶೂರಸ್ತಬ್ಧೋ ವಿಕಲ" ಎಂಬಂತೆ ಆಯಾಯ ಗ್ರಹರಿಗೆ ಹೇಳಿದ ಭಾವಫಲವನ್ನೂ "ಚಂದ್ರೇಭೂಪ ಬುಧೌ" ಎಂಬಂತೆ ದೃಷ್ಟಿಫಲಗಳನ್ನೂ, ರಾಜಯೋಗ, ಚಾಂದ್ರಯೋಗ, ಮುಂತಾಗಿ ಎಲ್ಲಾ ಫಲಗಳನ್ನು ಆಯಾಯ ಗ್ರಹರ ದಶೆ ಅಂತರ್ದಶೆಗಳಲ್ಲಿ ಸೇರಿಸಿ ಫಲಗಳನ್ನು ನಿರ್ಣಯಿಸಿ ಹೇಳತಕ್ಕದ್ದು. (ಇಲ್ಲಿ "ನಾಭಸ" ಯೋಗಫಲ ಸೇರಿಸಬಾರದು.)

ಛಾಯಾಂ ಮಹಾಭೂತ ಕೃತಾಂ ಚ ।
ಸರ್ವೇಭಿ ವ್ಯಂಜಯಂತಿ ಸ್ವದಶಾಮವಾಪ್ಯ ॥
ಕಂಬ್ವಗ್ನಿ ವಾಯ್ವಂಬರ ಜಾನ್ಗುಣಾಂಶ್ಚ ।
ನಾಸಾಸ್ಯದೃಕ್ ತ್ವಕ್ ಶ್ರವಣಾನು ಮೇಯಾನ್ ॥೨೧॥

ಕುಜಾದಿ ಗ್ರಹಗಳಿಗೆ "ಶಿಖಿಭೂಖಪಯೋಮರುದ್ಗಣಾನಾಂ" ಎಂಬಂತೆ ಅಗ್ನಿ, ಪೃಥ್ವಿ, ಆಕಾಶ, ಜಲ, ವಾಯು, ತತ್ವಗಳು, (ರವಿ ಚಂದ್ರರಿಗೆ ಅಗ್ನಿ ಮತ್ತು ಜಲ ತತ್ವಗಳು) ಸಕಲ ಗ್ರಹಗಳು ತಮ್ಮ ತಮ್ಮ ದಶೆಗಳು ಬಂದಾಗ ಪೃಥ್ವಿ, ಅಪ್, ತೇಜ, ವಾಯು, ಆಕಾಶ ಈ ತತ್ವಗಳಿಗೆ ಗಂಧ, ರಸ, ರೂಪ, ಸ್ಪರ್ಶ, ಧ್ವನಿ ಎಂತಲೂ ಇದನ್ನು ನಾಸಿಕ, ಜಿಹ್ವಾ, ನೇತ್ರ, ತ್ವಕ್, ಶ್ರೋತ್ರ ಇವುಗಳ

ಮೂಲಕವಾಗಿ ಆಯಾಯ ಗುಣಗಳನ್ನು ಮನುಷ್ಯಾದಿಗಳಲ್ಲಿ ಪ್ರಕಾಶಪಡಿಸುವರೆಂದೂ ಅದರಿಂದ ಆ ಕಾಲದಲ್ಲಿ ಆ ಗ್ರಹರ ದಶೆ ಎಂತಲೂ ತಿಳಿಯತಕ್ಕದ್ದು.

ಶುಭಫಲದ ದಶಾಯಾಂ ತಾದೃಗೇ ವಾಂತರಾತ್ಮಾ।
ಬಹುಜನಯತಿ ಪುಂಸಾಂ ಸೌಖ್ಯಮರ್ಥಾ ಗಮಂ ಚ ॥
ಕಥಿತ ಫಲವಿಪಾಕ್ಕೆ ಸ್ತರ್ಕಯೇದ್ವರ್ತಮಾನಾಂ ।
ಪರಿಣಮತಿ ಫಲೋಕ್ತಿಃ ಸ್ವಪ್ನಚಿಂತಾ ಸ್ವವೀರ್ಯೈಃ ॥೨೨॥

ಗ್ರಹರು ಶುಭಫಲ ಕೊಡುವ ದಶೆಗಳಲ್ಲಿ ಅಂತರಾತ್ಮವು ಶುಭರೂಪವಾಗಿರುವುದು ಒಳ್ಳೆ ಗ್ರಹ ದಶೆಯು ಪುರುಷರಿಗೆ ಬಹುವಿಧವಾದ ಸೌಖ್ಯವನ್ನೂ ಧನಲಾಭವನ್ನೂ ಉಂಟುಮಾಡುತ್ತದೆ. ಅಶುಭ ಗ್ರಹರ ದಶೆಯಲ್ಲಿ ಮನಸ್ಸು ಅಶುಭ ಸೂಚಕವಾಗಿಯೇ ಇರುವುದು ಮಿಶ್ರಫಲಪ್ರದ ದಶೆಯಲ್ಲಿ ಮಿಶ್ರಫಲವನ್ನು ತಿಳಿಯತಕ್ಕದ್ದು ಈ ಹೇಳಲ್ಪಟ್ಟ ಶುಭಾಶುಭ ಪರಿಪಾಕದಿಂದ ವರ್ತಮಾನ ದಶೆಯನ್ನು ಊಹಿಸಿ ಹೇಳತಕ್ಕದ್ದು. ಬಲಹೀನರಾದ ಗ್ರಹಗಳಿಂದ ಆ ಗ್ರಹಕ್ಕೆ ಹೇಳಿದ ಫಲವು ಸ್ವಪ್ನದಲ್ಲಾಗಲಿ ಮನಸ್ಸಿನಲ್ಲಿ ಚಿಂತಿಸಿ ಅನುಭವಿಸುವುದೇ ಹೊರತಾಗಿ ಪ್ರತ್ಯಕ್ಷ ಅನುಭವಕ್ಕೆ ಬರುವುದಿಲ್ಲ.

ಏಕಗ್ರಹಸ್ಯ ಸದೃಶೇ ಫಲಯೋರ್ವಿರೋಧೇ ।
ನಾಶಂ ವದೇದ್ಯದಧಿಕಂ ಪರಿಪಚ್ಯತೇ ತತ್ ॥
ನಾನ್ಯೋ ಗ್ರಹಃ ಸದೃಶ ಮನ್ಯಫಲಂ ಹಿನಸ್ತಿ ।
ಸ್ವಾಂ ಸ್ವಾಂ ದಶಾಮುಪಗತಾಃ ಸ್ವಫಲಪ್ರದಾಃ ಸ್ಯುಃ ॥೨೩॥

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ದಶಾಂತರ್ದಶಾ ಫಲ ನಿರೂಪಣಂ ನಾಮ ಅಷ್ಟಮೋಧ್ಯಾಯಃ ॥**

ಒಂದು ಗ್ರಹಕ್ಕೆ ಎರಡು ಫಲಗಳು ಸಮಾನವಾಗಿರುವಾಗ ಅಂದರೆ ಒಂದು ಗ್ರಹಕ್ಕೆ ಒಂದು ಯೋಗದಿಂದ ಸುವರ್ಣವನ್ನು ಕೊಡುತ್ತಾನೆಂತಲೂ ಅದೇ ಗ್ರಹಕ್ಕೆ ಇನ್ನೊಂದು ಯೋಗದಲ್ಲಿ ಸುವರ್ಣಾಪಹಾರ ಮಾಡುತ್ತಾನೆಂತಲೂ ಇದ್ದರೆ ಈ ಎರಡು ಫಲಗಳು ಅನುಭವಕ್ಕೆ ಬರುವು ದಿಲ್ಲ. ಆಗ ಆ ಫಲದ ನಾಶವನ್ನು ಹೇಳತಕ್ಕದ್ದು. ಈ ಎರಡು ಫಲಗಳಲ್ಲಿ ಹೆಚ್ಚು ಕಡಿಮೆ ಇದ್ದಲ್ಲಿ ಯಾವ ಫಲವು ಅಧಿಕವಾಗಿರುವುದೋ ಆ ಫಲವು ಉಂಟಾಗುವುದೆಂದು ಊಹಿಸಿ ಹೇಳತಕ್ಕದ್ದು ಇನ್ನೊಂದು ಗ್ರಹವು ಸಮಾನ ಫಲ ಉಳ್ಳದ್ದಾದರೆ ಅದರ ಫಲವನ್ನು ಈ ಗ್ರಹವು ಕೆಡಿಸುವುದಿಲ್ಲ. ಎಲ್ಲಾ ಗ್ರಹಗಳು ತಮ್ಮ ತಮ್ಮ ದಶೆಗಳು ಬಂದಾಗ ತಮ್ಮ ತಮ್ಮ ಫಲಗಳನ್ನು ಕೊಡುವವರಾಗು ತ್ತಾರೆಂದು ತಿಳಿಯತಕ್ಕದ್ದು

**॥ ದಶಾಂತರ್ದಶಾ ಫಲ ನಿರೂಪಣವೆಂಬ ಎಂಟನೇಯ ಅಧ್ಯಾಯವು ॥**

ಅಧ್ಯಾಯ ೯

# ॥ ಅಷ್ಟಕವರ್ಗಾಧ್ಯಾಯಃ ॥

## ॥ ಸೂರ್ಯಾಷ್ಟಕ ವರ್ಗಬಿಂದು ೪೮ ॥

ಸ್ವಾದರ್ಕಃ ಪ್ರಥಮಾಯ ಬಂಧು ನಿಧನದ್ವ್ಯಾಜ್ಞಾ ತಪೋ ದ್ಯೂನಗೋ।
ವಕ್ರಾತ್ಸ್ವಾದಿವ ತದ್ವದೇವ ರವಿಜಾ ಚ್ಛುಕ್ರಾತ್ ಸ್ಮರಾಂತ್ಯಾರಿಗಃ॥
ಜೀವಾದ್ಧರ್ಮಸುತಾಯ ಶತ್ರುಷು ದಶತ್ರ್ಯಾಯಾರಿಗಃ ಶೀತಗೋಃ।
ರೇಷ್ವೇವಾಂತ್ಯ ತಪಃ ಸುತೇಷು ಚ ಬುಧಾಲ್ಲಗ್ನಾತ್ಸ ಬಂಧ್ವಂತ್ಯಗಃ ॥೧॥

ಜನ್ಮಕುಂಡಲಿಯಲ್ಲಿ ರವಿಯು ತಾನಿರುವ ರಾಶಿಯಿಂದ ಪ್ರಥಮಾಯಬಂಧು ನಿಧನದ್ವ್ಯಾಜ್ಞಾ ತಪೋದ್ಯೂನಗಃ ಅಂದರೆ ೧.೧೧ ೪ ೮.೨.೧೦ ೯ ೭ ಈ ಸ್ಥಾನಗಳಲ್ಲಿ ಶುಭನು, ಇಲ್ಲಿ ಒಂದೊಂದು ಬಿಂದುಗಳನ್ನು ಇಡುವುದು. ವಕ್ರಾತ್ಸ್ವಾದಿವ ಅಂದರೆ ಕುಜನಿರುವ ಸ್ಥಾನದಿಂದ ಸೂರ್ಯನಂತೆ ೧.೧೧ ೪ ೮ ೨.೧೦.೯ ೭ ಶುಭನು ತದ್ವದೇವ ರವಿಜಾತ್ ಅಂದರೆ ರವಿಯಂತೆ ಶನಿಗೂ ತಾನಿರುವ ಸ್ಥಾನದಿಂದ ೧ ೧೧ ೪ ೮ ೨ ೧೦ ೯ ೭ರಲ್ಲಿ ಶುಭನು ಶುಕ್ರಾತ್ ಶುಕ್ರನಿರುವ ಸ್ಥಾನದಿಂದ ಸ್ಮರಾಂತ್ಯಾರಿಗಃ ೭.೧೨.೬ ಶುಭನು ಜೀವಾತ್‌ದ್ಧರ್ಮ ಸುತಾಯ ಶತ್ರುಷು ಅಂದರೆ ಗುರುವಿನಿಂದ ೯ ೫ ೧೧ ೬ ಈ ಸ್ಥಾನಗಳಲ್ಲಿ ಶುಭನು "ದಶತ್ರ್ಯಾಯಾರಿಗಶ್ಶೀತಗೋಃ ಅಂದರೆ ಚಂದ್ರನಿರುವ ಸ್ಥಾನದಿಂದ ೧೦ ೩ ೧೧ ೬ ಈ ಸ್ಥಾನಗಳಲ್ಲಿ ಶುಭನು. ಏಷ್ವೇವಾಂತ್ಯ ತಪಸ್ಸುತೇಷು ಚ ಬುಧಾತ್ ಅಂದರೆ ಬುಧನಿರುವ ಸ್ಥಾನದಿಂದ ೧೨ ೯.೫ ೧೦.೩ ೧೧.೬ ಈ ಸ್ಥಾನಗಳಲ್ಲಿ ಶುಭನು. ಲಗ್ನಾತ್ಸಬಂಧ್ವಂತ್ಯಗಃ ಅಂದರೆ ಲಗ್ನದಿಂದ ೧೦ ೩ ೧೧ ೬ ೪ ೧೨ ೧೧ ಈ ಸ್ಥಾನಗಳಲ್ಲಿ ಶುಭನು. ಲಗ್ನದಿಂದ ಮತ್ತು ಗ್ರಹರಿಗೆ ಮೇಲೆ ಹೇಳಿದ ಸ್ಥಾನಗಳಲ್ಲಿ ರವಿಯು ಗೋಚರದಲ್ಲಿ ಬಂದಾಗ ಶುಭನೆಂದು ಹೇಳಲ್ಪಡದ ಸ್ಥಾನದಲ್ಲಿ ಅಶುಭವೆಂದೂ ತಿಳಿಯತಕ್ಕದ್ದು. ಅಷ್ಟಕ ವರ್ಗವನ್ನಿಡುವಾಗ ಶುಭಫಲಕ್ಕೆ ಬಿಂದುವೆಂದು (೦) ಬಿಂದುವಿಲ್ಲದ ಸ್ಥಳಗಳಿಗೆ ಗೆರೆ (।) ಎಂತ ಗುರ್ತವನ್ನು ಉಪಯೋಗಿಸುವುದು ಬಿಂದುಗಳನ್ನಿಡುವಾಗ ಸುಲಭವಾಗುವುದಕ್ಕೆ ಮೇಲೆ ಹೇಳಿದಂತೆ ಕ್ರಮವಾಗಿ ಬರೆದ ನ್ಯಾಸವು ಸೂರ್ಯಾಷ್ಟಕವರ್ಗಬಿಂದು ೪೮

ಸೂರ್ಯನಿಂದ ೧-೨-೪-೭-೮-೯-೧೦-೧೧.
ಚಂದ್ರನಿಂದ ೩.೬ ೧೦.೧೧.
ಕುಜನಿಂದ ೧-೨-೪-೭-೮-೯-೧೦-೧೧.
ಬುಧನಿಂದ ೩-೫-೬-೯-೧೦-೧೧-೧೨.
ಗುರುವಿನಿಂದ ೫-೬-೯-೧೧.
ಶುಕ್ರನಿಂದ ೬-೭-೧೨.
ಶನಿಯಿಂದ ೧-೨-೪-೭-೮-೯-೧೦-೧೧.
ಲಗ್ನದಿಂದ ೩-೪-೬-೧೦-೧೧-೧೨.

ಈ ಸ್ಥಾನಗಳಲ್ಲಿ ಒಂದೊಂದು (೦) ಬಿಂದುವನ್ನು ಹಾಕಬೇಕು ಒಟ್ಟು ಕೂಡಿಸಿದರೆ ಸೂರ್ಯಾಷ್ಟಕ ವರ್ಗ ಬಿಂದು ೪೮ ಆಗುವುದು. ಗ್ರಹರು ಚಾರವಶದಿಂದ ೮ ಬಿಂದುವಿರುವ ಸ್ಥಾನದಲ್ಲಿ ಬಂದಾಗ ಪೂರ್ಣ ಶುಭಫಲವೆಂತ ತಿಳಿಯತಕ್ಕದ್ದು.

## ಅಷ್ಟಕ ವರ್ಗ

ಶ್ರೀ ಶಕ ೧೯೦೩ ದುರ್ಮತಿನಾಮ ಸಂ|ರದ ವೈಶಾಖ ಶುಕ್ಲ ೧೫ಯು ಚಂದ್ರವಾರ ಸೂರ್ಯೋದಯಾದಿ ಘಟಿ ೪೨ಕ್ಕೆ ಮಕರಲಗ್ನ ವಿಶಾಖಾ ನಕ್ಷತ್ರ ವೃಶ್ಚಿಕ ತಾ. ೧೮-೫-೧೯೮೧ಕ್ಕೆ ಸರಿಯಾದ ಗ್ರಹರು.

<table>
<tr><td>೦</td><td>ಕುಜ</td><td>ರವಿ<br>ಬುಧ<br>ಶುಕ್ರ</td><td>೦</td></tr>
<tr><td>೦</td><td colspan="2" rowspan="2">ಗ್ರಹಕುಂಡಲಿ</td><td>೦</td></tr>
<tr><td>ಲಗ್ನ</td><td>೦</td></tr>
<tr><td>೦</td><td>ಚಂದ್ರ</td><td>೦</td><td>ಗುರು<br>ಶನಿ</td></tr>
</table>

### ॥ ಅಷ್ಟಕ ವರ್ಗನ್ಯಾಸ ॥

<table>
<tr><td>0000<br>IIII</td><td>000000<br>II</td><td>0000<br>IIII</td><td>000<br>IIIII</td></tr>
<tr><td>0000<br>IIII</td><td colspan="2" rowspan="2">ರವ್ಯಷ್ಟಕ ವರ್ಗ ಬಿಂದು ೪೮</td><td>0000<br>IIII</td></tr>
<tr><td>00000<br>III</td><td>00<br>IIIIII</td></tr>
<tr><td>0000<br>IIII</td><td>0000<br>IIII</td><td>00000<br>III</td><td>000<br>IIIII</td></tr>
</table>

ಚಂದ್ರಾಷ್ಟಕ ವರ್ಗ ಬಿಂದು ೪೯.

ಲಗ್ನಾತ್ಷಟ್ತ್ರಿ ದಶಾಯಗ ಸ್ಸಧನಧೀಧರ್ಮೇಷು ಚಾರಾಚ್ಛಶೀ।
ಸ್ವಾತ್ಸಾಸ್ತಾದಿಷು ಸಾಷ್ಟಸಪ್ತಸು ರವೇಃ ಷಟ್ತ್ರ್ಯಾಯಧಿಸ್ಥೋ ಯಮಾತ್॥
ಧೀತ್ರ್ಯಾಯಾಷ್ಟಮ ಕಂಟಕೇಷು ಶಶಿಜಾಜ್ಜೀವಾದ್ವ್ಯಯಾಯಾಷ್ಟಗಃ।
ಕೇಂದ್ರಸ್ಥಶ್ಚ ಸಿತಾತ್ತು ಧರ್ಮ ಸುಖಧೀತ್ರ್ಯಾಯಾ ಸ್ಪದಾನಂಗಗಃ॥ ೨॥

ಜನ್ಮಕುಂಡಲಿಯಲ್ಲಿ ಚಂದ್ರನು ಲಗ್ನದಿಂದ ಷಟ್ತ್ರಿದಶಾಯಗಃ ೬-೩-೧೦-೧೧ ಈ ಸ್ಥಾನಗಳಲ್ಲಿ ಶುಭನು. ಕುಜನಿಂದ ಸಧನದೀಧರ್ಮೇಷು ೨-೫-೯-೬-೩-೧೦-೧೧ ಈ ಸ್ಥಾನಗಳಲ್ಲಿ ಶುಭನು ಚಂದ್ರನಿಂದ ಸಾಸ್ತಾದಿಷು ೭-೧-೬-೩-೧೦-೧೧ ಈ ಸ್ಥಾನಗಳಲ್ಲಿ ಶುಭನು. ರವಿಯಿಂದ ಸಾಷ್ಟಸಪ್ತಸು ೬-೩-೧೦-೧೧-೮-೭ ಈ ಸ್ಥಾನಗಳಲ್ಲಿ ಶುಭನು. ಶನಿಯಿಂದ ಷಟ್ತ್ರ್ಯಾಧೀಸ್ಥೋ ೬-೩-೧೧-೫ ಈ ಸ್ಥಾನಗಳಲ್ಲಿ ಶುಭನು—ಬುಧನಿಂದ ಧೀತ್ರ್ಯಾಯಾಷ್ಟಮ ಕಂಟಕೇಷು ೫-೩-೧೧-೮-೧-೪-೭-೧೦ ಈ ಸ್ಥಾನಗಳಲ್ಲಿ ಶುಭನು. ಗುರುವಿನಿಂದ ದ್ವ್ಯಯಾಯಾಷ್ಟಗಃ ಕೇಂದ್ರಶ್ಚ, ೧೨-೮-೧೧-೧-೪-೭-೧೦ ಈ ಸ್ಥಾನಗಳಲ್ಲಿ ಶುಭನು. ಶುಕ್ರನಿಂದ ಧರ್ಮಸುಖಧೀತ್ರ್ಯಾಯಾಸ್ಪದಾನಂಗಗಃ ೯-೪-೫-೩-೧೧-೧೦-೭ ಈ ಸ್ಥಾನಗಳಲ್ಲಿ ಶುಭನು.

ಮೇಲೆ ಹೇಳಿದಂತೆ ಕ್ರಮವಾಗಿ ನ್ಯಾಸವು.
ಚಂದ್ರಾಷ್ಟಕ ವರ್ಗ ಬಿಂದು ೪೯.
ರವಿಯಿಂದ ೩-೬-೭-೮-೧೦-೧೧.
ಚಂದ್ರನಿಂದ ೧-೩-೬-೭-೧೦-೧೧
ಕುಜನಿಂದ ೨-೩-೫-೬-೯-೧೦-೧೧.
ಬುಧನಿಂದ ೧-೩-೪-೫-೭-೮-೧೦-೧೧.
ಗುರುವಿನಿಂದ ೧-೪-೭-೮-೧೦-೧೧-೧೨.
ಶುಕ್ರನಿಂದ ೩-೪-೫-೭-೯-೧೦-೧೧
ಶನಿಯಿಂದ ೩-೫-೬-೧೧.
ಲಗ್ನದಿಂದ ೩-೬-೧೦-೧೧.

| | | | |
|---|---|---|---|
| 00000<br>III | 00<br>IIIIII | 000<br>IIIII | 000<br>IIIII |
| 00000<br>III | ಚಂದ್ರಾಷ್ಟಕ ವರ್ಗ ಬಿಂದು ೪೯ | | 00000<br>III |
| 0000<br>IIII | | | 00000<br>III |
| 0000<br>IIII | 000000<br>II | 00<br>IIIIII | 00000<br>III |

ಕುಜಾಷ್ಟಕ ವರ್ಗ ಬಿಂದು ೩೯

**ವಕ್ರಸ್ತೂಪಚಯೇಷ್ಟಿ ನಾತ್ಸತನಯೇಷ್ವಾ ದ್ಯಾಧಿಕೇಷೂದಯಾ ।**
**ಚ್ಚಂದ್ರಾದ್ದಿಗ್ವಿ ಫಲೇಷು ಕೇಂದ್ರ ನಿಧನ ಪ್ರಾಪ್ತ್ಯರ್ಥಗಃ ಸ್ವಾಚ್ಛುಭಃ॥**
**ಧರ್ಮಾಯಾಷ್ಟಮ ಕೇಂದ್ರಗೋSರ್ಕ ತನಯಾ ಜ್ಞಾತ್‌ಷಟ್‌ತ್ರಿ ಧೀಲಾಭಗಃ ।**
**ಶುಕ್ರಾತ್ ಷಡ್ವ್ಯ ಲಾಭಮೃತ್ಯುಷು ಗುರೋಃ ಕರ್ಮಾಂತ್ಯ ಲಾಭಾರಿಷು ॥೩॥**

ಜನ್ಮಕುಂಡಲಿಯಲ್ಲಿ ಕುಜನು ರವಿಯಿಂದ ಉಪಚಯೇಷ್ಟಿನಾತ್ಸತನಯೇಷು, ೩-೬-೧೦-೧೧-೫ ಈ ಸ್ಥಾನಗಳಲ್ಲಿ ಶುಭನು ಲಗ್ನದಿಂದ ಅದ್ಯಾಧಿಕೇಷೂದಯಾತ್ ೩-೬-೧೦-೧೧-೧ ಈ ಸ್ಥಾನಗಳಲ್ಲಿ ಶುಭನು ಚಂದ್ರನಿಂದ ದಿಗ್ವಿಪಲೇಷು ೩-೬-೧೧ ಈ ಸ್ಥಾನಗಳಲ್ಲಿ ಶುಭನು ಕುಜನಿಂದ ಕೇಂದ್ರ ನಿಧನ ಪ್ರಾಪ್ತ್ಯರ್ಥಗಸ್ವಾಚ್ಛುಭಃ ೧-೪-೭-೧೦-೮-೧೧-೨ ಈ ಸ್ಥಾನಗಳಲ್ಲಿ ಶುಭನು ಶನಿಯಿಂದ ಧರ್ಮಾಯಾಷ್ಟಮ ಕೇಂದ್ರಗಃ ೯-೧೧-೮-೧-೪-೭-೧೦ ಈ ಸ್ಥಾನಗಳಲ್ಲಿ ಶುಭನು ಬುಧನಿಂದ ಷಟ್‌ತ್ರಿಧೀಲಾಭಗಃ ೬-೩-೫-೧೧ ಈ ಸ್ಥಾನಗಳಲ್ಲಿ ಶುಭನು. ಶುಕ್ರನಿಂದ ಷಡ್ವ್ಯಯ ಲಾಭಮೃತ್ಯುಷು ೬-೧೨-೧೧-೮- ಈ ಸ್ಥಾನಗಳಲ್ಲಿ ಶುಭನು ಗುರುವಿನಿಂದ ಕರ್ಮಾಂತ್ಯಲಾಭಾರಿಷು ೧೦-೧೨-೧೧-೬ ಈ ಸ್ಥಾನಗಳಲ್ಲಿ ಶುಭನು

ಮೇಲೆ ಹೇಳಿದ ಪ್ರಕಾರ ಕ್ರಮವಾಗಿ ನ್ಯಾಸವು ಕುಜಾಷ್ಟಕ ವರ್ಗ ೩೯
ರವಿಯಿಂದ ೩-೫-೬-೧೦-೧೧
ಚಂದ್ರನಿಂದ ೩-೬-೧೧
ಕುಜನಿಂದ ೧-೨-೪-೭-೮-೧೦-೧೧
ಬುಧನಿಂದ ೩-೫-೬-೧೧
ಗುರುವಿನಿಂದ ೬-೧೦-೧೧-೧೨.
ಶುಕ್ರನಿಂದ ೬-೮-೧೧-೧೨
ಶನಿಯಿಂದ ೧-೪-೭-೮-೯-೧೦-೧೧.
ಲಗ್ನದಿಂದ ೧-೩-೬-೧೦-೧೧

<table>
<tr><td>00000<br>|||</td><td>0000<br>||||</td><td>00<br>||||||</td><td>000<br>|||||</td></tr>
<tr><td>000<br>|||||</td><td colspan="2" rowspan="2">ಕುಜಾಷ್ಟಕ ವರ್ಗ ಬಿಂದು ೩೯</td><td>00000<br>|||</td></tr>
<tr><td>000<br>|||||</td><td>0<br>|||||||</td></tr>
<tr><td>00<br>||||||</td><td>00<br>||||||</td><td>00000<br>|||</td><td>0000<br>||||</td></tr>
</table>

ಬುಧಾಷ್ಟಕ ವರ್ಗ ಬಿಂದು ೫೪

ದ್ವ್ಯಾದ್ಯಾಯಾಷ್ಟ ತಪಃ ಸುಖೇಷು ಭೃಗುಜಾತ್ಸತ್ಯಾತ್ಮ ಜೇಷ್ವಿಂದುಜಃ ।
ಸಾಜ್ಞಾಸ್ತೇಷು ಯಮಾರಯೋರ್ವ್ಯಯರಿಪು ಪ್ರಾಪ್ತ್ಯಷ್ಟಗೋವಾಕ್ಪತೇಃ॥
ಧರ್ಮಾಯಾರಿ ಸುತವ್ಯಯೇಷು ಸವಿತುಃ ಸ್ವಾತ್ಸಾದ್ಯ ಕರ್ಮತ್ರಿಗಃ।
ಷಟ್‌ಸ್ವಾಯಾಷ್ಟ ಸುಖಾಸ್ಪದೇಷು ಹಿಮಗೋಃ ಸಾದ್ಯೇಷು ಲಗ್ನಾಚ್ಛುಭಃ ॥೪॥

ಜನ್ಮಕುಂಡಲಿಯಲ್ಲಿ ಬುಧನು ಶುಕ್ರನಿಂದ ಸತ್ಯಾತ್ಮಜೇಷು ೩-೫ರಿಂದ ಕೂಡಿದ ದ್ವ್ಯಾದ್ಯಾಯಾಷ್ಟತ ಪಸ್ಸುಖೇಷು ಅಂದರೆ ಶುಕ್ರನಿರುವ ಸ್ಥಾನದಿಂದ ೨-೧-೧೧-೮-೯-೪-೩-೫ ಈ ಸ್ಥಾನಗಳಲ್ಲಿ ಶುಭನು. ಸಾಜ್ಞಾಸ್ತೇಷು ಯಮಾರಯೋ ೧೦.೭ ಸಹಿತ ದ್ವ್ಯಾದ್ಯಾಯಾಷ್ಟ ತಪಸ್ಸುಖ ಅಂದರೆ ಶನಿಯಿಂದ ೨-೧-೧೧-೮-೯-೪-೧೦-೭ ಈ ಸ್ಥಾನಗಳಲ್ಲಿ ಶುಭನು. ಹಾಗೆಯೇ ಕುಜನಿಂದ ೨-೧-೧೧-೮-೯-೪-೧೦-೭ ಈ ಸ್ಥಾನಗಳಲ್ಲಿ ಶುಭನು. ಗುರುವಿನಿಂದ ವ್ಯಯರಿಪುಪ್ರಾಪ್ತ್ಯಷ್ಟಗೋಃ ೧೨-೬-೧೧-೮ ಸ್ಥಾನಗಳಲ್ಲಿ ಶುಭನು ರವಿಯಿಂದ ಧರ್ಮಾಯಾರಿ ಸುತವ್ಯಯೇಷು ೯-೧೧-೬-೫-೧೨ ಈ ಸ್ಥಾನಗಳಲ್ಲಿ ಶುಭನು ಬುಧನಿಂದ ಸ್ವಾತ್ಸಾದ್ಯಕರ್ಮತ್ರಿಗಃ ಸಹಿತ ದರ್ಮಾಯಾರಿ ಸುತವ್ಯಯ ಅಂದರೆ ೯-೧೧-೬-೫-೧೨-೧-೧೦-೩ ಈ ಸ್ಥಾನಗಳಲ್ಲಿ ಶುಭನು ಚಂದ್ರನಿಂಧ ಷಟ್ಸ್ವಾಯಾಷ್ಟ ಸುಖಾಸ್ಪದೇಷು ೬-೨-೧೧-೮-೪-೧೦ ಈ ಸ್ಥಾನಗಳಲ್ಲಿ ಶುಭನು. ಲಗ್ನದಿಂದ ಸಾದ್ಯೇಷು ಲಗ್ನ ಸಹಿತವಾಗಿ ಷಟ್ಸ್ವಾಯಾಷ್ಟ ಸುಖಾಸ್ಪದೇಷು ೬-೨-೧೧-೮-೧೦-೧-೪ ಈ ಸ್ಥಾನಗಳಲ್ಲಿ ಶುಭನು.

ಮೇಲೆ ಹೇಳಿದ ಪ್ರಕಾರ ಕ್ರಮವಾಗಿ ನ್ಯಾಸವು ಬುಧಾಷ್ಟಕ ವರ್ಗ ಬಿಂದು ೫೪.
ರವಿಯಿಂದ ೫-೬-೯-೧೧-೧೨.
ಚಂದ್ರನಿಂದ ೨-೪-೬-೮-೧೦-೧೧.
ಕುಜನಿಂದ ೧-೨-೪-೭-೮-೯-೧೦-೧೧
ಬುಧನಿಂದ ೧-೩-೫-೬-೯-೧೦-೧೧-೧೨
ಗುರುವಿನಿಂದ ೬-೮-೧೧-೧೨.
ಶುಕ್ರನಿಂದ ೧-೨-೩-೪-೫-೮-೯-೧೧.
ಶನಿಯಿಂದ ೧-೨-೪-೭-೮-೯-೧೦-೧೧
ಲಗ್ನದಿಂದ ೧-೨-೪-೬-೮-೧೦-೧೧.

| | | | |
|---|---|---|---|
| 0000 IIII | 0000000 I | 0000 IIII | 0000 IIII |
| 00000 III | ಬುಧಾಷ್ಟಕ ವರ್ಗ ಬಿಂದು ೫೪ | | 00000 III |
| 00000 III | | | 0000 IIII |
| 0000 IIII | 00 IIIIII | 00000 III | 00000 III |

ಗುರು ಅಷ್ಟಕ ವರ್ಗ ೫೬

> ದಿಕ್ಸ್ವಾದ್ಯಾಷ್ಟಮದಾಯ ಬಂಧುಷುಕುಜಾತ್ಸ್ವಾತ್ಸ ತ್ರಿಕೇಷ್ವಂಗಿರಾಃ ।
> ಸೂರ್ಯಾತ್ಸ ತ್ರಿನವೇಷು ದೀಸ್ವನವದಿಗ್ಲಾಭಾರಿಗೋ ಭಾರ್ಗವಾತ್ ॥
> ಜಾಯಾಯಾರ್ಥ ನವಾತ್ಮಜೇಷು ಹಿಮಗೋರ್ಮಂದಾತ್ರಿ ಷಡ್ವೀವ್ಯಯೇ ।
> ದಿಗ್ಧೀಷಟ್ ಸ್ವಸುಖಾಯ ಪೂರ್ವ ನವಗೋಜ್ಞಾತ್ಸ ಸ್ಮರಶ್ಚೋದಯಾತ್ ॥೫॥

ಜನ್ಮಕುಂಡಲಿಯಲ್ಲಿ ಗುರುವು ಕುಜನಿಂದ ದಿಕ್ಸ್ವಾದ್ಯಾಷ್ಟಮದಾಯ ಬಂಧುಷು ೧೦-೨-೧-೮-೭-೧೧-೪ ಈ ಸ್ಥಾನಗಳಲ್ಲಿ ಶುಭನು ಗುರುವಿನಿಂದ ಸಕ್ರಿಕೇ—೩ನ್ನು ಕೂಡಿಸಿ ಕುಜನಂತೆ ೧೦-೨-೧-೮-೭-೧೧-೪-೩ ಈ ಸ್ಥಾನಗಳಲ್ಲಿ ಶುಭನು. ರವಿಯಿಂದ ಸೂರ್ಯಾತ್ಸತ್ರಿನವೇಷು ೩-೯ ಸಹಿತ ಕುಜನಂತೆ ಅಂದರೆ ೧೦-೨-೧-೮-೭-೧೧-೪-೩-೯ ಈ ಸ್ಥಾನಗಳಲ್ಲಿ ಶುಭನು. ಶುಕ್ರನಿಂದ ಧೀಸ್ವನವದಿಗ್ಲಾಲಾಭಾರಿಗಃ ೫-೨-೯-೧೦-೧೧-೬ ಈ ಸ್ಥಾನಗಳಲ್ಲಿ ಶುಭನು ಚಂದ್ರನಿಂದ ಜ್ಯಾಯಾರ್ಥನವಾತ್ಮಜೇಷು ೭-೧೧-೨-೯-೫ ಈ ಸ್ಥಾನಗಳಲ್ಲಿ ಶುಭನು. ಶನಿಯಿಂದ ತ್ರಿಷಡ್ವೀವ್ಯಯೇ ೩-೬-೫-೧೨ ಈ ಸ್ಥಾನಗಳಲ್ಲಿ ಶುಭನು. ಬುಧನಿಂದ ದಿಗ್ಧೀ ಷಟ್‌ಸ್ವಸುಖಾಯ ಪೂರ್ವನವಗಃ ೧೦-೫-೬-೨-೪-೧೧-೧-೯ ಈ ಸ್ಥಾನಗಳಲ್ಲಿ ಶುಭನು. ಲಗ್ನದಿಂದ ಸಸ್ಮರಶ್ಚೋದಯಾತ್ ೭ನ್ನು ಕೂಡಿಸಿ ಬುಧನಂತೆ ಅಂದರೆ ೧೦-೭-೫-೪-೨-೧೧-೬-೧-೯ ಈ ಸ್ಥಾನಗಳಲ್ಲಿ ಶುಭನು

ಮೇಲೆ ಹೇಳಿದಂತೆ ಕ್ರಮವಾಗಿ ನ್ಯಾಸವು ಗುರು ಅಷ್ಟಕ ವರ್ಗ ೫೬
ರವಿಯಿಂದ ೧-೨-೩-೪-೭-೮-೯-೧೦-೧೧.
ಚಂದ್ರನಿಂದ ೨-೫-೭-೯-೧೧.
ಕುಜನಿಂದ ೧-೨-೪-೭-೮-೧೦-೧೧.
ಬುಧನಿಂದ ೧-೨-೪-೫-೬-೯-೧೦-೧೧.
ಗುರುವಿನಿಂದ ೧-೨-೩-೪-೭-೮-೧೦-೧೧.
ಶುಕ್ರನಿಂದ ೨-೫-೬-೯-೧೦-೧೧
ಶನಿಯಿಂದ ೩-೫-೬-೧೨.
ಲಗ್ನದಿಂದ ೧-೨-೪-೫-೬-೭-೯-೧೦-೧೧.

| | | | |
|---|---|---|---|
| 00000<br>III | 000<br>IIIII | 00000<br>III | 00000<br>III |
| 000000<br>II | ಗುರ್ವಷ್ಟಕ ವರ್ಗ ಬಿಂದು ೫೬ | | 00000<br>III |
| 000000<br>II | | | 000<br>IIIII |
| 000<br>IIIII | 00000<br>III | 00000<br>III | 00000<br>III |

ಶುಕ್ರಾಷ್ಟಕ ವರ್ಗ ಬಿಂದು ೫೨

ಲಗ್ನಾದಾಸುತ ಲಾಭರಂಧ್ರನವಗಃ ಸಾಂತ್ಯಃ ಶಶಾಂಕಾತ್ಸಿತಃ।
ಸ್ವಾತ್ಸಾಜ್ಞೇಷು ಸುಖತ್ರಿಧೀನವ ದಶಚ್ಛಿದ್ರಾಪ್ತಿಗಃ ಸೂರ್ಯಜಾತ್॥
ರಂಧ್ರಾಯ ವ್ಯಯಗೋರವೇರ್ನವ ದಶಪ್ರಾಪ್ತ್ಯಷ್ಟಧೀಸ್ಥೋ ಗುರೋ
ಜ್ಞಾದ್ಧೀತ್ರ್ಯಾಯ ನವಾರಿಗ ಸ್ತ್ರೀ ನವಷಟ್ ಪುತ್ರಾ ಗಮಾಂತ್ಯಃ ಕುಜಾತ್ ॥೬॥

ಜನ್ಮಕುಂಡಲಿಯಲ್ಲಿ ಶುಕ್ರನು ಲಗ್ನದಿಂದ ಲಗ್ನಾದಾಸುತಲಾಭರಂಧ್ರನವಗಾಃ ೧-೨-೩-೪-೫-೧೧-೮-೯ ಈ ಸ್ಥಾನಗಳಲ್ಲಿ ಶುಭನು. ಚಂದ್ರನಿಂದ ಸಾಂತ್ಯ ೧೨ನ್ನು ಸಹಿತ ಲಗ್ನಕ್ಕೆ ಹೇಳಿದಂತೆ ೧-೨-೩-೪-೫-೧೧-೮-೯-೧೨ ಈ ಸ್ಥಾನಗಳಲ್ಲಿ ಶುಭನು. ಶುಕ್ರನಿಂದ ಸ್ವಾತ್ಸಾಜ್ಞೇಷು, ೧-೨-೩ ೪-೫-೧೧-೮-೯-೧೦ ಈ ಸ್ಥಾನಗಳಲ್ಲಿ ಶುಭನು. ಶನಿಯಿಂದ ಸುಖತ್ರಿಧೀ ನವದಶಚ್ಛಿದ್ರಾಪ್ತಿಗಃ ೪-೩-೫-೯-೧೦-೮-೧೧ ಈ ಸ್ಥಾನಗಳಲ್ಲಿ ಶುಭನು. ಸೂರ್ಯನಿಂದ ರಂಧ್ರಾಯವ್ಯಯಗಃ ೮-೧೧-೧೨ ಈ ಸ್ಥಾನಗಳಲ್ಲಿ ಶುಭನು. ಗುರುವಿನಿಂದ ನವದಶ ಪ್ರಾಪ್ತ್ಯಷ್ಟದೀ ೯-೧೦-೧೧-೮-೫ ಈ ಸ್ಥಾನ ಗಳಲ್ಲಿ ಶುಭನು. ಬುಧನಿಂದ ಜ್ಞಾಧೀತ್ರ್ಯಾಯನವಾರಿಗಃ ೫-೩-೧೧-೯-೬ ಈ ಸ್ಥಾನಗಳಲ್ಲಿ ಶುಭನು. ಕುಜನಿಂದ ತ್ರಿನವಷಟ್‌ಪುತ್ರಾಗಮಾಂತ್ಯಃ ೩-೯-೬-೫-೧೧-೧೨ ಈ ಸ್ಥಾನಗಳಲ್ಲಿ ಶುಭನು. ಮೇಲೆ ಹೇಳಿದಂತೆ ಕ್ರಮವಾಗಿ ನ್ಯಾಸವು

ಶುಕ್ರಾಷ್ಟಕ ವರ್ಗ ಬಿಂದು ೫೨.
ರವಿಯಿಂದ ೮-೧೧-೧೨
ಚಂದ್ರನಿಂದ ೧-೨-೩-೪-೫-೮-೯-೧೧-೧೨.
ಕುಜನಿಂದ ೩-೫-೬-೯-೧೧-೧೨.
ಬುಧನಿಂದ ೩-೫-೬-೯-೧೧
ಗುರುವಿನಿಂದ ೫-೮-೯-೧೦-೧೧.
ಶುಕ್ರನಿಂದ ೧-೨-೩-೪-೫-೮-೯-೧೦-೧೧.
ಶನಿಯಿಂದ ೩-೪-೫-೮-೯-೧೦-೧೧.
ಲಗ್ನದಿಂದ ೧-೨-೩-೪-೫-೮-೯-೧೦.

| | | | |
|---|---|---|---|
| 000000<br>II | 0000<br>IIII | 0000<br>IIII | 00000<br>III |
| 0000<br>IIII | ಶುಕ್ರಾಷ್ಟಕ ವರ್ಗ ಬಿಂದು ೫೨ | | 00000<br>III |
| 000000<br>II | | | 000<br>IIIII |
| 00000<br>III | 000<br>IIIII | 00<br>IIIIII | 00000<br>III |

ಶನ್ಯಷ್ಟಕ ವರ್ಗ ಬಿಂದು ೩೯.

ಮಂದಸ್ಸ್ವಾತ್ರಿ ಸುತಾಯ ಶತ್ರುಷು ಶುಭಸ್ಸಾಜ್ಞಾಂತ್ಯಗೋಭೂಮಿಜಾತ್ಕೇಂ ।
ದ್ರಾಯಾಷ್ಟ ಧನೇಷ್ವಿನಾ ದುಪಚಯೇಷ್ವಾದ್ಯೇಸುಖೇಚೋದಯಾತ್॥
ಧರ್ಮಾಯಾರಿ ದಶಾಂತ್ಯ ಮೃತ್ಯುಷು ಬುಧಾಚ್ಚಂದ್ರಾತ್ರಿಷಡ್‌ಲಾಭಗಃ ।
ಷಷ್ಠಾಯಾಂತ್ಯಗತ ಸ್ಸಿತಾತ್ಸುರ ಗುರೋಃ ಪ್ರಾಪ್ತ್ಯಂತ್ಯಧೀ ಶತ್ರುಷು ॥೭॥

ಜನ್ಮಕುಂಡಲಿಯಲ್ಲಿ ಶನಿಯು ತಾನಿರುವ ಸ್ಥಾನದಿಂದ ೩-೫-೧೧-೬ ಈ ಸ್ಥಾನಗಳಲ್ಲಿ ಶುಭನು. ಕುಜನಿಂದ ಸಾಜ್ಞಾಂತ್ಯಗೋ ೩-೫-೧೧-೬-೧೦-೧೨ ಈ ಸ್ಥಾನಗಳಲ್ಲಿ ಶುಭನು ರವಿಯಿಂದ, ಕೇಂದ್ರಾಯಾಷ್ಟಧನೇಃ, ೧-೪-೭-೧೦-೧೧-೮-೨ ಈ ಸ್ಥಾನಗಳಲ್ಲಿ ಶುಭನು. ಲಗ್ನದಿಂದ, ಉಪಚಯೇಷ್ವಾದ್ಯೇ ಸುಖೇಃ, ೩-೬-೧೦-೧೧-೧-೪ ಈ ಸ್ಥಾನಗಳಲ್ಲಿ ಶುಭನು. ಬುಧನಿಂದ, ಧರ್ಮಾಯಾರಿದಶಾಂತ್ಯ ಮೃತ್ಯುಷು, ೯-೧೧-೬-೧೦-೧೨-೮ ಈ ಸ್ಥಾನಗಳಲ್ಲಿ ಶುಭನು ಚಂದ್ರನಿಂದ, ತ್ರಿಷಳ್ಳಾಭಗಃ, ೩-೬-೧೧ ಈ ಸ್ಥಾನಗಳಲ್ಲಿ ಶುಭನು ಶುಕ್ರನಿಂದ, ಷಷ್ಠಾಯಾಂತ್ಯಗತಃ ೬-೧೧-೧೨ ಈ ಸ್ಥಾನಗಳಲ್ಲಿ ಶುಭನು. ಗುರುವಿನಿಂದ, ಪ್ರಾಪ್ತ್ಯಂತ್ಯಧೀಶತ್ರುಷು, ೧೧-೧೨-೫-೬ ಈ ಸ್ಥಾನಗಳಲ್ಲಿ ಶುಭನು

ಮೇಲೆ ಹೇಳಿದಂತೆ ಕ್ರಮವಾಗಿ ನ್ಯಾಸವು.

ಶನಿ ಅಷ್ಟಕ ವರ್ಗ ಬಿಂದು ೩೯.

ರವಿಯಿಂದ ೧-೨-೪-೭-೮-೧೦-೧೧.

ಚಂದ್ರನಿಂದ ೩-೬-೧೧.

ಕುಜನಿಂದ ೩-೫-೬-೧೦-೧೧-೧೨.

ಬುಧನಿಂದ ೬-೮-೯-೧೦-೧೧-೧೨.

ಗುರುವಿನಿಂದ ೫-೬-೧೧-೧೨

ಶುಕ್ರನಿಂದ ೬-೧೧-೧೨

ಶನಿಯಿಂದ ೩-೫-೬-೧೧.

ಲಗ್ನದಿಂದ ೧-೩-೪-೬-೧೦-೧೧.

| | | | |
|---|---|---|---|
| 00000<br>III | 0000<br>IIII | 0<br>IIIIIII | 000<br>IIIII |
| 00000<br>III | ಶನ್ಯಷ್ಟಕ ವರ್ಗ ಬಿಂದು ೩೯ | | 00<br>IIIIII |
| 000000<br>II | | | 000<br>IIIII |
| 00<br>IIIIII | 000<br>IIIII | 000<br>IIIII | 00<br>IIIIII |

ವಿ.ಸೂ.: ಸರ್ವಾಷ್ಟಕ ವರ್ಗ ಬಿಂದು ೩೩೭ ಆಗುವುದು

**ಇತಿ ನಿಗದಿತ ಮಿಷ್ಟಂ ನೇಷ್ಟಮನ್ಯದ್ವಿಶೇಷಾದಧಿಕ ಫಲವಿಪಾಕಂ ಜನ್ಮಭಾತ್ತತ್ರದದ್ಯು:॥ ಉಪಚಯಗೃಹಮಿತ್ರ ಸ್ವೋಚ್ಚಗೈ: ಪುಷ್ಟಮಿಷ್ಟಂತ್ವಪಚಯ ಗ್ರಹನೀಚಾರಾತಿಗೈರ್ನೇಷ್ಟ ಸಂಪತ್॥ ೮॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಅಷ್ಟಕವರ್ಗ ಬಿಂದು ನಿರೂಪಣಂ ನಾಮ ನವಮೋಧ್ಯಾಯ:॥**

ಈ ಪ್ರಕಾರವಾಗಿ ಮೇಲೆ ಹೇಳಲ್ಪಟ್ಟ ಸ್ಥಾನಗಳಲ್ಲಿ ಅಷ್ಟಕ ವರ್ಗ ಬಿಂದುಗಳು ಹೆಚ್ಚಾಗಿದ್ದರೆ ಶುಭ ಫಲವೆಂದೂ ಬಿಂದುಗಳು ಕಡಿಮೆಯಾಗಿದ್ದರೆ ಅಶುಭಫಲವೆಂದೂ ಜನ್ಮಕಾಲದಲ್ಲಿ ಯಾವ ಯಾವ ಸ್ಥಾನದಲ್ಲಿ ಯಾವ ಯಾವ ಗ್ರಹಗಳಿರುವವರೋ ಆಯಾಯ ಸ್ಥಾನದಲ್ಲಿರುವ ಅಷ್ಟಕ ವರ್ಗ ಬಿಂದುಗಳಿಂದ ಇಷ್ಟಾನಿಷ್ಟ ಫಲಗಳಲ್ಲಿ ಯಾವ ಫಲಗಳು ಹೆಚ್ಚಾಗಿರುವುದೋ ಆ ಫಲಗಳನ್ನು ಗ್ರಹಗಳು ಕೊಡುವರೆಂದು ತಿಳಿಯತಕ್ಕದ್ದು. ಉಪಚಯ ಸ್ಥಾನಗಳಲ್ಲಿ ಗ್ರಹಗಳು ತಮ್ಮ ಉಚ್ಚ ಮಿತ್ರಕ್ಷೇತ್ರಗಳಲಿದ್ದು ಅಷ್ಟಕ ವರ್ಗ ಬಿಂದುಗಳು ಹೆಚ್ಚಾಗಿದ್ದರೆ ಶುಭಫಲವನ್ನು ಅಧಿಕವಾಗಿ ಕೊಡುತ್ತಾರೆಂತಲೂ ಅಪಚಯ ಸ್ಥಾನಗಳಲ್ಲಿ ತಮ್ಮ ನೀಚ ಶತ್ರುಕ್ಷೇತ್ರಗಳಲ್ಲಿದ್ದು, ಅಷ್ಟಕ ವರ್ಗ ಬಿಂದುಗಳು ಹೆಚ್ಚಾಗಿದ್ದರೂ ಶುಭ ಫಲವನ್ನು ಅಧಿಕವಾಗಿ ಕೊಡುವುದಿಲ್ಲವೆಂತಲೂ ಜನ್ಮಕಾಲದಲ್ಲಿದ್ದ ಗ್ರಹರ ಸ್ಥಿತಿಯಿಂದ ತಿಳಿಯತಕ್ಕದ್ದು.

**॥ ಅಷ್ಟಕ ವರ್ಗ ಬಿಂದು ನಿರೂಪಣವೆಂಬ ಒಂಬತ್ತನೇಯ ಅಧ್ಯಾಯವು ॥**

## ॥ ಕರ್ಮಾಜೀವಾಧ್ಯಾಯಃ ॥

**ಅರ್ಥಾಪ್ತಿಃ ಪಿತೃ ಜನನೀ ಸಪತ್ನ ಮಿತ್ರ ।**
**ಭ್ರಾತೃ ಸ್ತ್ರೀ ಭೃತಕಜನಾದ್ದಿವಾಕರಾದ್ಯೈಃ ॥**
**ಹೋರೇಂದ್ವೋರ್ದಶಮ ಗತೈರ್ವಿಕಲ್ಪನೀಯಾ ।**
**ಭೇಂದ್ವರ್ಕಾಸ್ಪದ ಪತಿರಂಶನಾಥ ವೃತ್ತ್ಯಾ ॥೧॥**

ಜನ್ಮಕಾಲದ ಲಗ್ನದಿಂದ ಅಥವಾ ಚಂದ್ರನಿಂದ ದಶಮ ಸ್ಥಾನದಲ್ಲಿರುವ ಸೂರ್ಯಾದಿ ಗ್ರಹರಿಗೆ ಹೇಳಲ್ಪಟ್ಟಂತೆ ಕ್ರಮವಾಗಿ ರವಿ ಇದ್ದರೆ ತಂದೆಯಿಂದಲೂ ಚಂದ್ರನಿದ್ದರೆ ತಾಯಿಯಿಂದಲೂ, ಕುಜನಿದ್ದರೆ ಶತ್ರುಗಳಿಂದಲೂ, ಬುಧನಿದ್ದರೆ ಮಿತ್ರರಿಂದಲೂ, ಗುರುವಿದ್ದರೆ ಸಹೋದರರಿಂದಲೂ, ಶುಕ್ರನಿದ್ದರೆ ಸ್ತ್ರೀಯಿಂದಲೂ, ಶನಿ ಇದ್ದರೆ ಭೃತ್ಯರಿಂದಲೂ ಧನಪ್ರಾಪ್ತಿಯಾಗುತ್ತದೆ. ಅಂದರೆ ಇವರ ಮೂಲಕವಾಗಿ ಧನ ಪ್ರಾಪ್ತಿಗೆ ಕಾರಣವಾಗುವುದೆಂದು ತಿಳಿಯತಕ್ಕದ್ದು. ಹಾಗೆಯೇ ಲಗ್ನ, ಚಂದ್ರ, ರವಿಗೆ ದಶಮ ಸ್ಥಾನಾಧಿಪತಿಗಳಾದ ಗ್ರಹಗಳು ಯಾವ ಗ್ರಹದ ನವಾಂಶೆಯಲ್ಲಿರುವರೋ ಆ ಗ್ರಹಕ್ಕೆ ಹೇಳಿದ ವೃತ್ತಿಯಿಂದ ಧನಪ್ರಾಪ್ತಿಯಾಗುವುದೆಂದು ತಿಳಿಯತಕ್ಕದ್ದು.

**ಅರ್ಕಾಂಶೇ ತೃಣ ಕನಕೋರ್ಣ ಭೇಷಜಾದ್ಯೈಃ ।**
**ಶ್ಚಂದ್ರಾಂಶೇ ಕೃಷಿ ಜಲಜಾಂಗನಾ ಶ್ರಯಾಚ್ಚ ॥**
**ಧಾತ್ವಗ್ನಿ ಪ್ರಹರಣ ಸಾಹಸೈಃ ಕುಜಾಂಶೇ ।**
**ಸೌಮ್ಯಾಂಶೇ ಲಿಪಿ ಗಣಿತಾದಿ ಕಾವ್ಯ ಶಿಲ್ಪೈಃ ॥೨॥**

ದಶಮಾಧಿಪತಿಯು ರವಿಯ ಅಂಶಕದಲ್ಲಿದ್ದರೆ ಹುಲ್ಲು, ಕನಕ, ಉಣ್ಣೆಬಟ್ಟೆ, ಔಷಧ ಮೊದಲಾದ ವ್ಯವಹಾರ ಕ್ರಯವಿಕ್ರಯ ಮೂಲಕವಾಗಿ ಧನಪ್ರಾಪ್ತಿಯುಂಟಾಗುವುದು. ಚಂದ್ರ ನವಾಂಶೆಯಲ್ಲಿದ್ದರೆ ಭೂಮಿ ವ್ಯವಸಾಯ ಜಲದಲ್ಲಿ ಹುಟ್ಟಿದ ಶಂಖ, ಮುತ್ತು ಮೊದಲಾದ ವ್ಯವಹಾರಗಳಿಂದ, ಸ್ತ್ರೀಯನ್ನಾಶ್ರಯಿಸುವುದರ ಮೂಲವಾದ ವೃತ್ತಿಯಿಂದ ಧನಲಾಭವಾಗುವುದು. ಕುಜಾಂಶಕವಾಗಿದ್ದರೆ, ಧಾತುಗಳ ಕ್ರಯವಿಕ್ರಯದಿಂದ ಚಿನ್ನ, ಬೆಳ್ಳಿ, ತಾಮ್ರ, ಕಾಂಸ್ಯಾದಿ ಧಾತುಗಳನ್ನು ಕಾಸಿ ಬಡಿದು ಮಾಡುವ ಸಾಹಸ ಕೃತ್ಯ ಯಂತ್ರೋಪಕರಣಗಳನ್ನು ಕಲ್ಪನೆ ಮಾಡಿ ನಡೆಸುವಿಕೆ ಮೊದಲಾದ ವೃತ್ತಿಯಿಂದ ಧನಸಂಪತ್ತಿಯುಂಟಾಗುವುದು. ಬುಧನ ನವಾಂಶೆಯಲ್ಲಿದ್ದರೆ ಅಕ್ಷರ ವಿನ್ಯಾಸ—ಬರವಣಿಗೆ ಗಣಿತಶಾಸ್ತ್ರದಲ್ಲಿ ಪಾರಂಗತನಾಗಿ ಕಾವ್ಯ, ಅಲಂಕಾರ, ನಾಟಕ ಇತ್ಯಾದಿಗಳಿಂದ ಶಿಲ್ಪಶಾಸ್ತ್ರ, ಯಂತ್ರನಿರ್ಮಾಣ, ಗೃಹನಿರ್ಮಾಣ, ಶಾಸ್ತ್ರಪಠಣ, ಬಾವಿ ಕೆರೆ ಮುಂತಾಗಿ ನಿರ್ಮಿಸುವುದರ ಮೂಲಕವಾಗಿ ಧನಪ್ರಾಪ್ತಿಯಾಗುವುದು.

**ಜೀವಾಂಶೇ ದ್ವಿಜವಿಬುಧಾಕರಾದಿ ಧರ್ಮೈಃ ।**
**ಕಾವ್ಯಾಂಶೇ ಮಣಿರಜತಾದಿ ಗೋಮಹಿಷ್ಯೈಃ ॥**

**ಸೌರಾಂಶೇ ಶ್ರಮ ವಧಭಾರ ನೀಚ ಶಿಲ್ಪೈಃ ।**
**ಕರ್ಮೇಶಾಧ್ಯುಷಿತ ನವಾಂಶ ಕರ್ಮಸಿದ್ಧಿಃ ॥೩॥**

ದಶಮಾಧಿಪತಿಯು ಗುರು ನವಾಂಶದಲ್ಲಿದ್ದರೆ ಬ್ರಾಹ್ಮಣರು, ದೇವತೆಗಳೂ ಇವರ ಆಶ್ರಯವೂ ಸುವರ್ಣಗಣಿ ಮೂಲವಾಗಿಯೂ ಪುರಾಣಶಾಸ್ತ್ರ, ಧರ್ಮೋಪದೇಶ, ವಿದ್ಯಾವೃತ್ತಿ ಮೊದಲಾದವು ಗಳಿಂದ ಧನಪ್ರಾಪ್ತಿಯುಂಟಾಗುವುದು. ಶುಕ್ರನ ನವಾಂಶೆಯಲ್ಲಿದ್ದರೆ ಮುಕ್ತಾ, ಪ್ರವಾಳ, ರತ್ನಗಳ ಮೂಲವಾಗಿ, ಬೆಳ್ಳಿ ಬಂಗಾರ ಮೊದಲಾದ ಧಾತು ಮೂಲವಾಗಿ, ದನ, ಎಮ್ಮೆ, ಆನೆ, ಕುದುರೆ, ಕ್ರಯ ವಿಕ್ರಯ ಮೂಲವಾಗಿ ಧನಪ್ರಾಪ್ತಿಯಾಗುವುದು. ಶನಿ ನವಾಂಶದಲ್ಲಿದ್ದರೆ ದೇಹಶ್ರಮ ವಾಗುವ ಕೆಲಸಗಳಿಂದ ಮೃಗ, ಪಕ್ಷಿ, ಮರ ಮುಂತಾದ ವಧಾದಿಗಳಿಂದ ಭಾರ ಹೊರುವಿಕೆ, ನೀಚ ಶಿಲ್ಪವೆಂದರೆ ಮರದ, ಕಲ್ಲಿನ ಕುಶಲಕೆಲಸಗಳಿಂದ ಧನಪ್ರಾಪ್ತಿಯಾಗುವುದು ಅಂದರೆ ಲಗ್ನ, ಚಂದ್ರ, ರವಿಯ ದಶಮಾಧಿಪತಿಯ ನವಾಂಶಾಧಿಪತಿಯ ಕರ್ಮವು ಸಿದ್ಧಿಸುವುದೆಂದೂ, ಅದೇ ವೃತ್ತಿಯಿಂದ ಜೀವಿಸುತ್ತಾನೆಂದೂ ತಿಳಿಯತಕ್ಕದ್ದು.

**ಮಿತ್ರಾರಿ ಸ್ವಗೃಹ ಗತೈರ್ಗ್ರಹೈಸ್ತತೋರ್ಥಾಂ ।**
**ತುಂಗಸ್ಥೇ ಬಲಿನಿ ಚ ಬಾಸ್ಕರೇ ಸ್ವವೀರ್ಯಾತ್ ॥**
**ಆಯಸ್ಥೈರುದಯ ಧನಾಶ್ರಿತೈಶ್ಚ ಸೌಮ್ಯೈಃ ।**
**ಸಂಚಿರತ್ಯಂ ಬಲಸಹಿತೈರನೇಕಧಾ ಸ್ವಮ್ ॥೪॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಕರ್ಮಾಜೀವ ನಿರೂಪಣಂ ನಾಮ ದಶಮೋಧ್ಯಾಯಃ ॥**

ಪೂರ್ವೋಕ್ತವಾಗಿ ಹೇಳಲ್ಪಟ್ಟ ನವಾಂಶಾಧಿಪತಿಯಾದ ಗ್ರಹರು ಮಿತ್ರ, ಶತ್ರು, ಸ್ವಕ್ಷೇತ್ರದಲ್ಲಿದ್ದರೆ ಮಿತ್ರರಿಂದ ಶತ್ರುವಿನಿಂದ ಸ್ವಕೀಯ ಜನರಿಂದ ಧನಪ್ರಾಪ್ತಿಯಾಗುವುದು. ಧನಪ್ರದರಾದ ಗ್ರಹಗಳ ಬಲಕ್ಕೆ ಸಮಾನವಾಗಿ ಅಂದರೆ ಏಕಾದಶ ಲಗ್ನ ದ್ವಿತೀಯದಲ್ಲಿದ್ದು ಉಚ್ಚಾದಿ ಬಲಯುಕ್ತವಾಗಿ ದ್ದರೆ ಸೌಮ್ಯಗ್ರಹಗಳಿಂದ ಅನೇಕ ಪ್ರಕಾರವಾಗಿ ಧನಾಗಮವನ್ನು ಚಿಂತಿಸಿ ಹೇಳತಕ್ಕದ್ದು. ಇಲ್ಲಿ ವಿಶೇಷವೇನೆಂದರೆ ಲಗ್ನ, ಚಂದ್ರ, ಸೂರ್ಯರ ದಶಮಾಧಿಪತಿ, ದಶಮದಲ್ಲಿರುವ ಗ್ರಹ, ನವಾಂಶಾಧಿಪತಿ, ಇವರುಗಳಲ್ಲಿ ಬಲಶಾಲಿಗಳು ಯಾರೆಂಬುದನ್ನು ವಿಚಾರ ಮಾಡಿ ಈ ವಿಷಯ ಗಳನ್ನು ಹೇಳತಕ್ಕದ್ದು.

**॥ ಕರ್ಮಾಜೀವವೆಂಬ ಹತ್ತನೆಯ ಅಧ್ಯಾಯವು ॥**

# ॥ ರಾಜಯೋಗಾಧ್ಯಾಯಃ ॥

ಪ್ರಾಹುರ್ಯವನಾಃ ಸ್ವತುಂಗಗೈಃ ।
ಕ್ರೂರೈಃ ಕ್ರೂರಮತಿರ್ಮಹೀ ಪತಿಃ ॥
ಕ್ರೂರೈಸ್ತು ನ ಜೀವಶರ್ಮಣಃ ।
ಪಕ್ಷೇಕ್ಷಿತ್ಯಧಿಪಃ ಪ್ರಜಾಯತೇ ॥೧॥

ಯವನಾಚಾರ್ಯಾದಿಗಳು ತಮ್ಮ ತಮ್ಮ ಉಚ್ಚ ಸ್ಥಾನದಲ್ಲಿರುವ ಕ್ರೂರ ಗ್ರಹಗಳಾದ ರವಿ, ಕುಜ, ಶನಿಗಳಿಂದ. ಕ್ರೂರ ಬುದ್ಧಿಯುಳ್ಳ ರಾಜನು ಹುಟ್ಟುತ್ತಾನೆಂದು ಹೇಳಿರುವರು ಜೀವಶರ್ಮನ ಮತದಂತೆ ಉಚ್ಚದಲ್ಲಿರುವ ಕ್ರೂರಗ್ರಹರಿಂದ ಮಹೀಪತಿಯು ಸಂಭವಿಸುವುದಿಲ್ಲವೆಂದಿರುತ್ತಾರೆ ಅಂದರೆ ಕ್ರೂರ ಗ್ರಹರು ಮಾತ್ರ ಉಚ್ಚದಲ್ಲಿರುವಾಗಿನ ರಾಜಯೋಗದಲ್ಲಿ ಜನಿಸಿದವನಿಗೆ ರಾಜ್ಯಾಧಿಪತ್ಯವು ದೊರಕಲಾರದೆಂದು ತಾತ್ಪರ್ಯವು. ಶುಭಗ್ರಹರು ಉಚ್ಚ ಸ್ಥಾನದಲ್ಲಿರುವಾಗಿನ ರಾಜಯೋಗದಲ್ಲಿ ಜನಿಸಿದವನು ಸೌಮ್ಯ ಗುಣಗಳಿಂದ ಕೂಡಿದವನಾಗಿಯೂ ಶುಭಪಾಪ ಮಿಶ್ರಗ್ರಹರು ಉಚ್ಚದಲ್ಲಿರುವಾಗ ರಾಜಯೋಗದಲ್ಲಿ ಹುಟ್ಟಿದವನು ಮಿಶ್ರಗುಣಗಳಿಂದ ಕೂಡಿದವನಾಗಿಯೂ ಇರುತ್ತಾನೆಂದು ತಿಳಿಯತಕ್ಕದ್ದು

ವಕ್ರಾರ್ಕಜಾರ್ಕ ಗುರಭಿಃ ಸಕಲೈ ಸ್ತ್ರೀ ಭಿರ್ವಾ ।
ಸ್ವೋಚ್ಚೇಷು ಷೋಡಶ ನೃಪಾಃ ಕಥಿತೈಕ ಲಗ್ನೇ ॥
ದ್ವ್ಯೇಕಾಶ್ರಿತೇಷು ಚ ತಥೈಕತಮೇ ವಿಲಗ್ನೇ ।
ಸ್ವಕ್ಷೇತ್ರಗೇ ಶಶಿನಿ ಷೋಡಶ ಭೂಮಿಪಾಸ್ಸ್ಯುಃ ॥೨॥

ಕುಜ, ಶನಿ, ರವಿ, ಗುರುಗಳು ತಮ್ಮ ತಮ್ಮ ಉಚ್ಚ ಸ್ಥಾನಗಳಲ್ಲಿರುವಾಗ ಆ ನಾಲ್ಕರಲ್ಲೊಂದು ಲಗ್ನವಾಗಿದ್ದರೆ ನಾಲ್ಕು ರಾಜಯೋಗಗಳಾಗುವುದು ಈ ನಾಲ್ಕು ಗ್ರಹಗಳಲ್ಲಿ ಮೂರು ಗ್ರಹಗಳು ಉಚ್ಚರಾಗಿ ಆ ಮೂರರಲ್ಲಿ ಒಂದು ಲಗ್ನವಾಗಿದ್ದರೆ ಕ್ರಮವಾಗಿ ಹನ್ನೆರಡು ರಾಜಯೋಗಗಳು ಉಂಟಾಗುವುದು ಹೀಗೆ ಹದಿನಾರು ರಾಜಯೋಗಗಳು ಹೇಳಲ್ಪಟ್ಟಿದೆ ಚಂದ್ರನ ಸ್ವಕ್ಷೇತ್ರವಾದ ಕರ್ಕಾಟಕದಲ್ಲಿದ್ದು ಎರಡು ಗ್ರಹಗಳು ಉಚ್ಚರಾಗಿ ಅದರಲ್ಲೊಂದು ಲಗ್ನವಾಗಿದ್ದರೆ ಹನ್ನೆರಡು ರಾಜಯೋಗಗಳೂ ಚಂದ್ರನು ಸ್ವಕ್ಷೇತ್ರವಾಗಿದ್ದು ಒಂದೇ ಗ್ರಹವು ಉಚ್ಚ ಸ್ಥಾನದಲ್ಲಿದ್ದು ಅದು ಲಗ್ನವಾಗಿದ್ದರೆ ನಾಲ್ಕು ರಾಜಯೋಗಗಳೂ ಬೇರೆ-ಬೇರೆ ಎಣಿಸುವಾಗ ಹದಿನಾರು ರಾಜಯೋಗ ಗಳೂ ಹೀಗೆ ಒಟ್ಟು ಕೂಡಿಸಿದಲ್ಲಿ ಮೂವತ್ತೆರಡು ರಾಜಯೋಗಗಳು ಹೇಳಲ್ಪಟ್ಟಿದೆ ಎಂತ ತಿಳಿಯತಕ್ಕದ್ದು

## ॥ ದ್ವಾತ್ರಿಂಶತ್ ರಾಜಯೋಗ ಪ್ರಸ್ತಾರ ಕ್ರಮ ॥

| ೪ ಯಾ ೩ ಗ್ರಹರು ಉಚ್ಚರಾಗಿ ಅದರಲ್ಲೊಂದು ಲಗ್ನವಾಗಿದ್ದರೆ | | | | | ೨ ಯಾ ೧ ಗ್ರಹರು ಉಚ್ಚರಾಗಿ ಚಂದ್ರನು ಸ್ವಕ್ಷೇತ್ರವಾಗಿದ್ದರೆ | | | | |
|---|---|---|---|---|---|---|---|---|---|
| ಸಂಖ್ಯಾ | ಮೇಷ | ಕರ್ಕಾಟಕ | ತುಲಾ | ಮಕರ | ಸಂಖ್ಯಾ | ಮೇಷ | ಕರ್ಕಾಟಕ | ತುಲಾ | ಮಕರ |
| ೧ | ಲಗ್ನ ರವಿ | ಗುರು | ಶನಿ | ಕುಜ | ೧ | ಲಗ್ನ ರವಿ | ಚಂದ್ರ ಗುರು | ೦ | ೦ |
| ೨ | ರವಿ | ಲಗ್ನ ಗುರು | ಶನಿ | ಕುಜ | ೨ | ರವಿ | ಲಗ್ನ ಚಂದ್ರ ಗುರು | ೦ | ೦ |
| ೩ | ರವಿ | ಗುರು | ಲಗ್ನ ಶನಿ | ಕುಜ | ೩ | ಲಗ್ನ ರವಿ | ಚಂದ್ರ | ಶನಿ | ೦ |
| ೪ | ರವಿ | ಗುರು | ಶನಿ | ಲಗ್ನ ಕುಜ | ೪ | ರವಿ | ಚಂದ್ರ | ಲಗ್ನ ಶನಿ | ೦ |
| ೫ | ಲಗ್ನ ರವಿ | ಗುರು | ಶನಿ | ೦ | ೫ | ಲಗ್ನ ರವಿ | ಚಂದ್ರ | ೦ | ಕುಜ |
| ೬ | ರವಿ | ಲಗ್ನ ಗುರು | ಶನಿ | ೦ | ೬ | ರವಿ | ಚಂದ್ರ | ೦ | ಲಗ್ನ ಕುಜ |
| ೭ | ರವಿ | ಗುರು | ಲಗ್ನ ಶನಿ | ೦ | ೭ | ೦ | ಲಗ್ನ ಚಂದ್ರ ಗುರು | ಶನಿ | ೦ |
| ೮ | ೦ | ಲಗ್ನ ಗುರು | ಶನಿ | ಕುಜ | ೮ | ೦ | ಚಂದ್ರ ಗುರು | ಲಗ್ನ ಶನಿ | ೦ |
| ೯ | ೦ | ಗುರು | ಲಗ್ನ ಶನಿ | ಕುಜ | ೯ | ೦ | ಚಂದ್ರ ಲಗ್ನ ಗುರು | ೦ | ಕುಜ |
| ೧೦ | ೦ | ಗುರು | ಶನಿ | ಲಗ್ನ ಕುಜ | ೧೦ | ೦ | ಚಂದ್ರ ಗುರು | ೦ | ಲಗ್ನ ಕುಜ |
| ೧೧ | ಲಗ್ನ ರವಿ | ೦ | ಶನಿ | ಕುಜ | ೧೧ | ೦ | ಚಂದ್ರ | ಲಗ್ನ ಶನಿ | ಕುಜ |
| ೧೨ | ರವಿ | ೦ | ಲಗ್ನ ಶನಿ | ಕುಜ | ೧೨ | ೦ | ಚಂದ್ರ | ಶನಿ | ಲಗ್ನ ಕುಜ |
| ೧೩ | ರವಿ | ೦ | ಶನಿ | ಲಗ್ನ ಕುಜ | ೧೩ | ಲಗ್ನ ರವಿ | ಚಂದ್ರ | ೦ | ೦ |
| ೧೪ | ಲಗ್ನ ರವಿ | ಗುರು | ೦ | ಕುಜ | ೧೪ | ೦ | ಲಗ್ನ ಚಂದ್ರ ಗುರು | ೦ | ೦ |
| ೧೫ | ರವಿ | ಲಗ್ನ ಗುರು | ೦ | ಕುಜ | ೧೫ | ೦ | ಚಂದ್ರ | ಲಗ್ನ ಶನಿ | ೦ |
| ೧೬ | ರವಿ | ಗುರು | ೦ | ಲಗ್ನ ಕುಜ | ೧೬ | ೦ | ಚಂದ್ರ | ೦ | ಲಗ್ನ ಕುಜ |

ಈ ಪ್ರಕಾರ ೧೬+೧೬=೩೨ ರಾಜಯೋಗಗಳು.

**ವರ್ಗೋತ್ತಮಗತೇ ಲಗ್ನೇ ಚಂದ್ರೇವಾ ಚಂದ್ರವರ್ಜಿತೈಃ ।**
**ಚತುರಾದ್ಯೈರ್ಗ್ರಹೈರ್ದೃಷ್ಟೇ ನೃಪಾ ದ್ವಾವಿಂಶತಿಃ ಸ್ಮೃತಾಃ ॥೩॥**

ಲಗ್ನ ಅಥವಾ ಚಂದ್ರನು ವರ್ಗೋತ್ತಮ ನವಾಂಶದಲ್ಲಿದ್ದು ಚಂದ್ರನನ್ನು ಬಿಟ್ಟು ನಾಲ್ಕು, ಐದು, ಆರು ಗ್ರಹರಿಂದ ನೋಡಲ್ಪಟ್ಟರೆ ಇಪ್ಪತ್ತೆರಡು ರಾಜಯೋಗಗಳು ಹೇಳಲ್ಪಟ್ಟಿದೆ ಅಂದರೆ ಲಗ್ನದಿಂದ ಇಪ್ಪತ್ತೆರಡು ಚಂದ್ರನಿಂದ ಇಪ್ಪತ್ತೆರಡು ಹೀಗೆ ನಲವತ್ತನಾಲ್ಕು ರಾಜಯೋಗಗಳೆಂದು ತಿಳಿಯತಕ್ಕದ್ದು.

**॥ ವರ್ಗೋತ್ತಮ ರಾಜಯೋಗಗಳ ಪ್ರಸ್ತಾರ ಕ್ರಮ ॥**

| ಲಗ್ನದಿಂದ ೨೨ | | ಚಂದ್ರನಿಂದ ೨೨ |
|---|---|---|
| ೪ ಗ್ರಹಗಳಿಂದ ನೋಡಲ್ಪಟ್ಟರೆ<br>೧೫ ರಾಜಯೋಗ ಲಗ್ನಕ್ಕೆ<br>೧೫ ರಾಜಯೋಗ ಚಂದ್ರನಿಗೆ | ೫ ಗ್ರಹಗಳಿಂದ ನೋಡಲ್ಪಟ್ಟರೆ<br>೬ ರಾಜಯೋಗ ಲಗ್ನಕ್ಕೆ<br>೬ ರಾಜಯೋಗ ಚಂದ್ರನಿಗೆ | ೬ ಗ್ರಹಗಳಿಂದ ನೋಡಲ್ಪಟ್ಟರೆ<br>೧ ರಾಜಯೋಗ ಲಗ್ನಕ್ಕೆ<br>೧ ರಾಜಯೋಗ ಚಂದ್ರನಿಗೆ |
| ೩೦ + | ೧೨ + | ೨ = ೪೪ |
| ೧೨ ಲಗ್ನಗಳಿಗೆ ೪೪×೧೨ ಲಬ್ಧಿ ೫೨೮ ಆಗುವುದು | | |

| ಯೋಗೋತ್ಪತ್ತಿ ಕ್ರಮ | | | ರಾಜಯೋಗಗಳು ೫೨೮ | | |
|---|---|---|---|---|---|
| ವಿಕಲ್ಪ | ಸಂಖ್ಯಾ | ೧೨ ಲಗ್ನಕ್ಕೆ | ಅಂತರಾ | ವರ್ಗೋತ್ತಮ ಲಗ್ನಕ್ಕೆ | ವರ್ಗೋತ್ತಮ ಚಂದ್ರನಿಗೆ |
| ೪ ಗ್ರಹರ ದೃಷ್ಟಿಯಿಂದ | ೧೫ | ೧೨ | ೧೮೦ | ೧೮೦ | ೧೮೦ |
| ೫ ಗ್ರಹರ ದೃಷ್ಟಿಯಿಂದ | ೬ | ೧೨ | ೭೨ | ೭೨ | ೭೨ |
| ೬ ಗ್ರಹರ ದೃಷ್ಟಿಯಿಂದ | ೧ | ೧೨ | ೧೨ | ೧೨ | ೧೨ |
| ಯೋಗ ಸಂಖ್ಯಾ | ೨೨ | ೦ | ೨೬೪ | ೨೬೪ | ೨೬೪ |
| | | | ೨೬೪ | +೨೬೪ = | ೫೨೮ ಆಗುವುದು |

**ಯಮೇ ಕುಂಭೇಽರ್ಕೇಽಜೇ ಗವಿ ಶಶಿನಿ ತೈರೇವ ತನುಗೈ ।**
**ನೃಯುಕ್ ಸಿಂಹಾಳಿಸ್ಥೈಃ ಶಶಿಜ ಗುರು ವಕ್ರೈರ್ನೃಪತಯಃ ॥**
**ಯಮೇಂದೂ ತುಂಗೇಂಗೇ ಸವಿತೃಶಶಿಜೌ ಷಷ್ಠಭವನೇ ।**
**ತುಲಾಜೇಂದುಕ್ಷೇತ್ರೈಃ ಸಸಿತಕುಜ ಜೀವೈಶ್ಚ ನರಪೌ ॥೪॥**

## ॥ ವರ್ಗೋತ್ತಮ ರಾಜಯೋಗಗಳು ॥

| ಯೋಗ ಸಂಖ್ಯಾ ವಿವರಣೆ | | | ವರ್ಗೋತ್ತಮಾಂಶಯಲ್ಲಿರುವ | | |
|---|---|---|---|---|---|
| | ನಾಲ್ಕು ಗ್ರಹರಿಂದ | ಲಗ್ನ | ಚಂದ್ರ | ರಾಶಿ ಸಂಖ್ಯಾ | ರಾಜ ಯೋಗಗಳು |
| ೧ | ರವಿ, ಕುಜ, ಬುಧ, ಗುರು | ೧ | ೧ | ೧೨ | ೨೪ |
| ೨ | ರವಿ, ಕುಜ, ಬುಧ, ಶುಕ್ರ | ೧ | ೧ | ೧೨ | ೨೪ |
| ೩ | ರವಿ, ಕುಜ, ಬುಧ, ಶನಿ | ೧ | ೧ | ೧೨ | ೨೪ |
| ೪ | ರವಿ, ಕುಜ, ಗುರು, ಶುಕ್ರ | ೧ | ೧ | ೧೨ | ೨೪ |
| ೫ | ರವಿ, ಕುಜ, ಗುರು, ಶನಿ | ೧ | ೧ | ೧೨ | ೨೪ |
| ೬ | ರವಿ, ಕುಜ, ಶುಕ್ರ, ಶನಿ | ೧ | ೧ | ೧೨ | ೨೪ |
| ೭ | ರವಿ, ಬುಧ, ಗುರು, ಶುಕ್ರ | ೧ | ೧ | ೧೨ | ೨೪ |
| ೮ | ರವಿ, ಬುಧ, ಗುರು, ಶನಿ | ೧ | ೧ | ೧೨ | ೨೪ |
| ೯ | ರವಿ, ಬುಧ, ಶುಕ್ರ, ಶನಿ | ೧ | ೧ | ೧೨ | ೨೪ |
| ೧೦ | ರವಿ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| ೧೧ | ಕುಜ, ಬುಧ, ಗುರು, ಶುಕ್ರ | ೧ | ೧ | ೧೨ | ೨೪ |
| ೧೨ | ಕುಜ, ಬುಧ, ಗುರು, ಶನಿ | ೧ | ೧ | ೧೨ | ೨೪ |
| ೧೩ | ಕುಜ, ಬುಧ, ಶುಕ್ರ, ಶನಿ | ೧ | ೧ | ೧೨ | ೨೪ |
| ೧೪ | ಕುಜ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| ೧೫ | ಬುಧ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| | ಅಂತೂ ನಾಲ್ಕು ಗ್ರಹರಿಂದ ರಾಜಯೋಗ ೩೬೦ | | | | |
| | ಐದು ಗ್ರಹದಿಂದ | ಲಗ್ನ | ಚಂದ್ರ | ರಾಶಿ ಸಂಖ್ಯಾ | ರಾಜ ಯೋಗಗಳು |
| ೧ | ರವಿ, ಕುಜ, ಬುಧ, ಗುರು, ಶುಕ್ರ | ೧ | ೧ | ೧೨ | ೨೪ |
| ೨ | ರವಿ, ಕುಜ, ಬುಧ, ಗುರು, ಶನಿ | ೧ | ೧ | ೧೨ | ೨೪ |
| ೩ | ರವಿ, ಕುಜ, ಬುಧ, ಶುಕ್ರ, ಶನಿ | ೧ | ೧ | ೧೨ | ೨೪ |
| ೪ | ರವಿ, ಕುಜ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| ೫ | ರವಿ, ಬುಧ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| ೬ | ಕುಜ, ಬುಧ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| | ೫ ಗ್ರಹದಿಂದಾಗುವ ಯೋಗಗಳು, ೧೪೪ | | | | |
| | ಆರು ಗ್ರಹರಿಂದ | | | | |
| ೧ | ರವಿ, ಕುಜ, ಬುಧ, ಗುರು, ಶುಕ್ರ, ಶನಿ | ೧ | ೧ | ೧೨ | ೨೪ |
| | ನಾಲ್ಕು ಗ್ರಹರಿಂದ ೩೬೦ | | | | |
| | ಐದು ಗ್ರಹರಿಂದ ೧೪೪ | | | | |
| | ಆರು ಗ್ರಹರಿಂದ ೨೪ | | | | |
| | ಎಲ್ಲಾ ಕೂಡಿಸಿ ೫೨೮ | ೨೨ | ೨೨ | ೧೨ | ೫೨೮ |

ಕುಂಭದಲ್ಲಿ ಶನಿಯೂ ,ಮೇಷದಲ್ಲಿ ರವಿಯೂ, ವೃಷಭದಲ್ಲಿ ಚಂದ್ರನೂ ಇದ್ದು ಕುಂಭ, ಮೇಷ, ವೃಷಭ ಈ ರಾಶಿಗಳಲ್ಲಿ ಯಾವುದಾದರೊಂದು ಜನ್ಮಲಗ್ನವಾಗಿ ಮಿಥುನ, ಸಿಂಹ, ವೃಶ್ಚಿಕ ರಾಶಿ ಗಳಲ್ಲಿ ಕ್ರಮವಾಗಿ ಬುಧ, ಗುರು, ಕುಜರು ಇದ್ದರೆ ಮೂರು ರಾಜಯೋಗಗಳಾಗುತ್ತವೆ. ಶನಿ ಯಾಗಲಿ, ಚಂದ್ರನಾಗಲಿ ಉಚ್ಚನಾಗಿದ್ದು, ತುಲಾ ವೃಷಭದಲ್ಲೊಂದು ಲಗ್ನವಾಗಿ ಕನ್ಯೆಯಲ್ಲಿ ರವಿ, ಬುಧರೂ, ತುಲೆಯಲ್ಲಿ ಶುಕ್ರನೂ, ಮೇಷದಲ್ಲಿ ಕುಜನೂ ಕರ್ಕಾಟಕದಲ್ಲಿ ಗುರುವೂ ಇದ್ದರೆ ಎರಡು ರಾಜಯೋಗಗಳಾಗುತ್ತವೆ ಒಟ್ಟಿಗೆ ಐದು ರಾಜಯೋಗಗಳೆಂದು ತಿಳಿಯತಕ್ಕದ್ದು.

**ಕುಜೇ ತುಂಗೇರ್ಕೇಂದ್ವೋರ್ಧನುಷಿ ಯಮಲಗ್ನೇ ಚ ಕುಪತಿಃ ।**
**ಪತಿರ್ಭೂಮೇಶ್ಚಾನ್ಯಃ ಕ್ಷಿತಿಸುತ ವಿ ಲಗ್ನೇ ಸಶಶಿನಿ ॥**
**ಸಚಂದ್ರೇ ಸೌರೇಸ್ತೇ ಸುರಪತಿ ಗುರೌಚಾಪಧರಗೇ ।**
**ಸ್ವತುಂಗಸ್ಥೇ ಭಾನಾವುದಯ ಮುಪಯಾತೇ ಕ್ಷಿತಿಪತಿಃ ॥೫॥**

ಕುಜನು ಉಚ್ಚವಾಗಿ ಮಕರದಲ್ಲಿದ್ದು ರವಿ ಚಂದ್ರರು ಧನುಸ್ಸಿನಲ್ಲಿಯೂ ಮಕರ ಲಗ್ನವಾಗಿ ಶನಿಯು ಲಗ್ನದಲ್ಲಿದ್ದರೆ ರಾಜನಾಗುವನು. ಮಕರವು ಲಗ್ನವಾಗಿ ಉಚ್ಚ ಕುಜನು ಲಗ್ನದಲ್ಲಿ ಚಂದ್ರ ನಿಂದೊಡಗೂಡಿ ಧನುವಿನಲ್ಲಿ ರವಿಯಿದ್ದರೆ ಭೂಪತಿಯಾಗುವನು. ಚಂದ್ರ ಶನಿಗಳು ಸಪ್ತಮ ದಲ್ಲಿಯೂ ಗುರುವು ಧನುಸ್ಸಿನಲ್ಲಿಯೂ ಸೂರ್ಯನು ಉಚ್ಚನಾಗಿಯೂ ಮೇಷ ಲಗ್ನ ವಾಗಿದ್ದರೆ ಭೂಮ್ಯಾಧಿಪತಿಯಾಗುವನು.

**ವೃಷೇಸೇಂದೌ ಲಗ್ನೇ ಸವಿತೃ ಗುರು ತೀಕ್ಷ್ಣಾಂಶು ತನಯೈಃ ।**
**ಸುಹೃಜ್ಜಾಯಾಖಸ್ಥೈರ್ಭವತಿ ನಿಯಮಾನ್ಮಾನವ ಪತಿಃ ॥**
**ಮೃಗೇ ಮಂದೇ ಲಗ್ನೇಸಹಜ ರಿಪುಧರ್ಮ ವ್ಯಯಗತೈಃ ।**
**ಶಶಾಂಕಾದ್ಯೈರ್ಜಾತಃ ಪೃಥುಗುಣಯಶಾಃ ಪುಂಗವ ಪತಿಃ ॥೬॥**

ವೃಷಭವು ಲಗ್ನವಾಗಿ ಲಗ್ನದಲ್ಲಿ ಚಂದ್ರನೂ ಚತುರ್ಥದಲ್ಲಿ ರವಿಯೂ ಸಪ್ತಮದಲ್ಲಿ ಗುರುವೂ ದಶಮದಲ್ಲಿ ಶನಿಯೂ ಇರುವಾಗ ಜನಿಸಿದವನು ನಿಶ್ಚಯವಾಗಿಯೂ ರಾಜನಾಗುವನು. ಮಕರ ಲಗ್ನದಲ್ಲಿ ಶನಿಯೂ ತೃತೀಯದಲ್ಲಿ ಚಂದ್ರನೂ ಷಷ್ಠದಲ್ಲಿ ಕುಜನೂ ನವಮದಲ್ಲಿ ಬುಧನೂ ದ್ವಾದಶದಲ್ಲಿ ಗುರುವೂ ಇರುವಾಗ ಜನಿಸಿದವನು ಕೀರ್ತಿವಂತನಾದ ರಾಜನಾಗುವನು.

**ಹಯೇಸೇಂದೌ ಜೀವೇಮೃಗ ಮುಖಗತೇ ಭೂಮಿತನಯೇ ।**
**ಸ್ವತುಂಗಸ್ಥೌ ಲಗ್ನೇ ಭೃಗುಜ ಶಶಿಜಾವತ್ರ ನೃಪತೀ ॥**
**ಸುತಸ್ಥೌವಕ್ರಾರ್ಕೀ ಗುರುಶಶಿ ಸಿತಾಶ್ಚಾಪಿ ಹಿಬುಕೇ ।**
**ಬುಧೇ ಕನ್ಯಾಲಗ್ನೇ ಭವತಿ ಹಿ ನೃಪೋನ್ಯೋಪಿ ಗುಣವಾನ್ ॥೭॥**

ಧನುಸ್ಸಿನಲ್ಲಿ ಗುರು ಚಂದ್ರರೂ ಮಕರದಲ್ಲಿ ಕುಜನೂ ಮೀನಲಗ್ನವಾಗಿ ತನ್ನ ಉಚ್ಚವಾದ ಮೀನ

ದಲ್ಲಿ ಶುಕ್ರನಿದ್ದರೆ ಒಂದು ರಾಜಯೋಗವೂ, ಧನುಸ್ಸಿನಲ್ಲಿ ಗುರು ಚಂದ್ರರೂ ಮಕರದಲ್ಲಿ ಕುಜನೂ ಕನ್ಯಾಲಗ್ನವಾಗಿ ಲಗ್ನದಲ್ಲಿ ಉಚ್ಚ ಬುಧನಿದ್ದರೆ ಒಂದು ರಾಜಯೋಗವೂ ಹೀಗೆ ಎರಡು ರಾಜಯೋಗಗಳು ಹೇಳಲ್ಪಟ್ಟಿದೆ. ಪಂಚಮದಲ್ಲಿ ಕುಜ ಶನಿಗಳೂ ಚತುರ್ಥದಲ್ಲಿ ಗುರು, ಚಂದ್ರ, ಶುಕ್ರರೂ, ಕನ್ಯಾಲಗ್ನವಾಗಿ ಲಗ್ನದಲ್ಲಿ ಉಚ್ಚ ಬುಧನೂ, ಇರುವಾಗ ಹುಟ್ಟಿದವನು ಅನ್ಯ ವಂಶ ದವನಾದರೂ ಸದ್ಗುಣವಂತನಾದ ರಾಜನಾಗುವನು.

**ಝಷೇಸೇಂದೌ ಲಗ್ನೇ ಘಟಮೃಗ ಮೃಗೇಂದ್ರೇಷು ಸಹಿತೈ ।**
**ರ್ಯಮಾರಾರ್ಕೈರ್ಯೋ ಭೂತ್ಸಖಲು ಮನುಜಃ ಶಾಸ್ತಿ ವಸುಧಾಮ್ ॥**
**ಅಜೇಸಾರೇಮೂರ್ತೌ ಶಶಿಗೃಹಗತೇ ಚಾಮರ ಗುರೌ ।**
**ಸುರೇಜ್ಯೇವಾ ಲಗ್ನೇ ಧರಣಿ ಪತಿರನ್ಯೋಽಪಿ ಗುಣವಾನ್ ॥೮॥**

ಮೀನವು ಲಗ್ನವಾಗಿ ಲಗ್ನದಲ್ಲಿ ಚಂದ್ರನೂ ಕುಂಭದಲ್ಲಿ ಶನಿಯೂ ಮಕರದಲ್ಲಿ ಕುಜನೂ ಸಿಂಹ ದಲ್ಲಿ ರವಿಯೂ ಇರುವಾಗ ಹುಟ್ಟಿದ ಮನುಷ್ಯನು ಭೂಮಿಯನ್ನು ಪರಿಪಾಲಿಸುತ್ತಾನೆ. ಮೇಷವು ಲಗ್ನವಾಗಿ ಲಗ್ನದಲ್ಲಿ ಕುಜನೂ ಕರ್ಕಾಟಕದಲ್ಲಿ ಗುರುವೂ ಇರುವಾಗ ಹುಟ್ಟಿದವನು ಅನ್ಯ ವಂಶೋದ್ಭವನಾದರೂ ಸದ್ಗುಣಗಳಿಂದ ಕೂಡಿದ ಭೂಪತಿಯಾಗುವನು. ಹೀಗೆಯೇ ಕರ್ಕಾಟಕ ಲಗ್ನವಾಗಿ ಲಗ್ನದಲ್ಲಿ ಗುರುವೂ ಮೇಷದಲ್ಲಿ ಕುಜನೂ ಇದ್ದರೆ ಆ ಕಾಲದಲ್ಲಿ ಹುಟ್ಟಿದವನು ಅನ್ಯವಂಶ ಜಾತನಾದರೂ ಸದ್ಗುಣವಂತನಾದ ರಾಜನಾಗುವನು.

**ಕರ್ಕಿಣಿ ಲಗ್ನೇ ತಸ್ಥೇ ಜೀವೇ ।**
**ಚಂದ್ರಸಿತ ಜ್ಞೈರಾಯ ಪ್ರಾಪ್ತೈಃ ॥**
**ಮೇಷಗತೇಽರ್ಕೇಜಾತಂ ವಿಂದ್ಯಾ ।**
**ದ್ವಿಕ್ರಮ ಯುಕ್ತಂ ಪೃಥ್ವೀನಾಥಮ್ ॥೯॥**

ಕರ್ಕಾಟಕವು ಲಗ್ನವಾಗಿ, ಲಗ್ನದಲ್ಲಿ ಗುರುವೂ ಏಕಾದಶದಲ್ಲಿ ಚಂದ್ರ ಶುಕ್ರ ಬುಧರೂ ಮೇಷದಲ್ಲಿ ಸೂರ್ಯನೂ ಇರುವ ಕಾಲದಲ್ಲಿ ಹುಟ್ಟಿದವನು ಪರಾಕ್ರಮದಿಂದ ಕೂಡಿದ ಭೂಪತಿ ಅಂದರೆ ರಾಜನಾಗುವನು.

**ಮೃಗ ಮುಖೇರ್ಕ ತನಯೇ ತನುಸಂಸ್ಥೇ**
**ಕ್ರಿಯ ಕುಳೀರ ಹರಯೋಽಧಿಪಯುಕ್ತಾಃ ॥**
**ಮಿಥುನತೌಳಿ ಸಹಿತೌ ಬುಧಶುಕ್ರೌ ।**
**ಯದಿತದಾ ಪೃಥುಯಶಾಃ ಪೃಥಿವೀಶಃ ॥೧೦॥**

ಮಕರ ಲಗ್ನವಾಗಿ ಲಗ್ನದಲ್ಲಿ ಶನಿಯೂ ಮೇಷದಲ್ಲಿ ಕುಜನೂ ಕರ್ಕಾಟಕದಲ್ಲಿ ಚಂದ್ರನೂ ಸಿಂಹ ದಲ್ಲಿ ರವಿಯೂ ಮಿಥುನದಲ್ಲಿ ಬುಧನೂ ತುಲೆಯಲ್ಲಿ ಶುಕ್ರನೂ ಇರುವ ಕಾಲದಲ್ಲಿ ಹುಟ್ಟಿದವನು ವಿಸ್ತಾರವಾದ ಕೀರ್ತಿಯುಳ್ಳ ಪೃಥ್ವಿಪತಿಯಾಗುವನು (ರಾಜನಾಗುವನು).

ಸ್ವೋಚ್ಚಸಂಸ್ಥೇ ಬುಧೇ ಲಗ್ನೇ ।
ಭೃಗೌ ಮೇಷೂರಣಾಶ್ರಿತೇ ॥
ಸಜೀವೇಸ್ತೇ ನಿಶಾನಾಥೇ ರಾಜಾ ।
ಮಂದಾರಯೋಃ ಸ್ಸುತೇ ॥೧೧॥

ಕನ್ಯಾಲಗ್ನವಾಗಿ ಲಗ್ನದಲ್ಲಿ ಬುಧನೂ ದಶಮ ಸ್ಥಾನವಾದ ಮಿಧುನದಲ್ಲಿ ಶುಕ್ರನೂ ಸಪ್ತಮವಾದ ಮೀನದಲ್ಲಿ ಗುರುವಿನಿಂದ ಕೂಡಿದ ಚಂದ್ರನೂ ಪಂಚಮವಾದ ಮಕರದಲ್ಲಿ ಕುಜ, ಶನಿಗಳೂ ಇದ್ದರೆ ಆ ಕಾಲದಲ್ಲಿ ಹುಟ್ಟಿದವನು ರಾಜ್ಯಾಧಿಪತಿಯಾಗುವನು.

ಅಪಿ ಖಲಕುಲಜಾತಾ ಮಾನವಾ ರಾಜ್ಯಭಾಜಃ ।
ಕಿಮುತ ನೃಪ ಕುಲೋತ್ಥಾ ಪ್ರೋಕ್ತ ಭೂಪಾಲಯೋಗೈಃ ॥
ನೃಪತಿ ಕುಲ ಸಮುತ್ಥಾಃ ಪಾರ್ಥಿವಾ ವಕ್ಷ್ಯಮಾಣೈ ।
ರ್ಭವತಿ ನೃಪತಿ ತುಲ್ಯ ಸ್ತೇಷ್ವ ಭೂಪಾಲ ಪುತ್ರಃ ॥೧೨॥

ಈ ಹೇಳಲ್ಪಟ್ಟ ರಾಜಯೋಗಗಳಲ್ಲಿ ನೀಚವಂಶದಲ್ಲಿ ಹುಟ್ಟಿದವರಾದರೂ ರಾಜ್ಯಾಧಿಪತಿ ಗಳಾಗುತ್ತಾರೆ. ಹೀಗಿರುವಾಗ ರಾಜಮನೆತನದಲ್ಲಿ ಹುಟ್ಟಿದವನಿಗೆ ರಾಜನಾಗುತ್ತಾನೆಂದು ಹೇಳುವುದು ಅನಾವಶ್ಯಕ. ಹೇಗೂ ರಾಜನಾಗುತ್ತಾನೆ ಇನ್ನು ಮೇಲೆ ಹೇಳಲ್ಪಡುವ ರಾಜಯೋಗ ಗಳಲ್ಲಿ ಹುಟ್ಟಿದವರು ರಾಜವಂಶೀಯರಾದರೆ ರಾಜರಾಗುತ್ತಾರೆ. ರಾಜಮನೆತನದಲ್ಲಿ ಹುಟ್ಟದಿದ್ದ ವರು ಐಶ್ವರ್ಯಾದಿಗಳಿಂದ ಕೂಡಿದವರಾಗಿ ರಾಜಯೋಗ್ಯವಾದ ಭೋಗಗಳನ್ನು ಅನುಭವಿ ಸುತ್ತಾರೆಂದು ತಿಳಿಯತಕ್ಕದ್ದು.

ಸ್ವೋಚ್ಚಸ್ವ ತ್ರಿಕೋಣಗ್ಯೈರ್ಬಲ ಸ್ಥೈ ।
ಸ್ತ್ರ್ಯಾದ್ಯೈ ಭೂಪತಿ ವಂಶಜಾ ನರೇಂದ್ರಾಃ ॥
ಪಂಚಾದಿಭಿ ರನ್ಯವಂಶ ಜಾತಾ ।
ಹೀನೈರ್ವಿತ್ತಯುತಾ ನ ಭೂಮಿಪಾಲಾಃ ॥೧೩॥

ತಮ್ಮ ತಮ್ಮ ಉಚ್ಚ, ಮೂಲತ್ರಿಕೋಣಗಳಲ್ಲಿ ಸ್ಥಾನಾದಿ ಬಲಯುಕ್ತರಾಗಿ ಮೂರು, ನಾಲ್ಕು ಗ್ರಹರಿದ್ದರೆ ರಾಜವಂಶದಲ್ಲಿ ಹುಟ್ಟಿದವರು ರಾಜರಾಗುತ್ತಾರೆ. ಐದು, ಆರು ಗ್ರಹರು ಉಚ್ಚ ಮೂಲತ್ರಿಕೋಣದಲ್ಲಿ ಬಲಿಷ್ಠರಾಗಿದ್ದರೆ ಅನ್ಯವಂಶದಲ್ಲಿ ಹುಟ್ಟಿದವರೂ ರಾಜರಾಗುತ್ತಾರೆ. ಆದರೆ ಉಚ್ಚ, ಮೂಲತ್ರಿಕೋಣಗಳಲ್ಲಿರುವ ಗ್ರಹರು ದುರ್ಬಲರಾಗಿದ್ದರೆ ಹಣವಂತರಾಗು ತ್ತಾರೆಯೇ ವಿನಹಾ ರಾಜರಾಗುವುದಿಲ್ಲ.

ಲೇಖಾಸ್ಥೇರ್ಕೇಜೇಂದೌ ಲಗ್ನೇ ।
ಭೌಮೇ ಸ್ವೋಚ್ಚೇ ಕುಂಭೇ ಮಂದೇ ॥

ಚಾಪಪ್ರಾಪ್ತೇ ಜೀವೇ ರಾಜ್ಞಃ ।
ಪುತ್ರಂ ವಿಂದ್ಯಾತ್ಪೃಥ್ವೀನಾಥಂ ॥೧೪॥

ಮೇಷದಲ್ಲಿ ಉದಯಿಸುತ್ತಿರುವ ಸೂರ್ಯನೂ ಮೇಷಲಗ್ನವಾಗಿ ಲಗ್ನದಲ್ಲಿ ಚಂದ್ರನೂ ಮಕರದಲ್ಲಿ ಕುಜನೂ ಕುಂಭದಲ್ಲಿ ಶನಿಯೂ ಧನುಸ್ಸಿನಲ್ಲಿ ಗುರುವೂ ಇದ್ದಾಗ ರಾಜವಂಶದಲ್ಲಿ ಹುಟ್ಟಿದವನು ರಾಜನಾಗುತ್ತಾನೆಂದು ತಿಳಿಯತಕ್ಕದ್ದು.

ಸ್ವರ್ಕ್ಷೇಶುಕ್ರೇ ಪಾತಾಳಸ್ಥೇ ।
ಧರ್ಮಸ್ಥಾನಂ ಪ್ರಾಪ್ತೇಚಂದ್ರೇ ॥
ದುಶ್ಚಿಕ್ಯಾಂಗ ಪ್ರಾಪ್ತಿ ಪ್ರಾಪ್ತೈಃ ।
ಶೇಷೈರ್ಜಾತಃ ಸ್ವಾಮೀಭೂಮೇಃ ॥೧೫॥

ಲಗ್ನದಿಂದ ಚತುರ್ಥ ಸ್ಥಾನದಲ್ಲಿ ಸ್ವಕ್ಷೇತ್ರವಾಗಿ ಶುಕ್ರನೂ ನವಮದಲ್ಲಿ ಚಂದ್ರನೂ ಬಾಕಿ ಉಳಿದ ಗ್ರಹರು ಲಗ್ನ, ತೃತೀಯ, ಏಕಾದಶಗಳಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು ರಾಜನಾಗುವನು

ಸೌಮ್ಯೇ ವೀರ್ಯಯುತೇ ತನುಯುಕ್ತೇ ।
ವೀರ್ಯಾಢ್ಯೇ ಚ ಶುಭೇ ಶುಭಯಾತೇ ॥
ಧರ್ಮಾರ್ಥೋ ಪಚಯೇಷ್ವವಶೇಷೈ । *
ರ್ಧರ್ಮಾತ್ಮಾ ನೃಪಜಃ ಪೃಥಿವೀಶಃ ॥೧೬॥

ಬುಧನು ಬಲಯುಕ್ತನಾಗಿ ಲಗ್ನದಲ್ಲಿಯೂ ಬಲಿಷ್ಠನಾದ ಶುಭಗ್ರಹವು ನವಮದಲ್ಲಿಯೂ ಬಾಕಿ ಉಳಿದ ಗ್ರಹರು ನವಮ, ದ್ವಿತೀಯ, ತೃತೀಯ, ಷಷ್ಠ, ದಶಮ, ಏಕಾದಶ ಸ್ಥಾನಗಳಲ್ಲಿಯೂ ಇರುವಾಗ ಹುಟ್ಟಿದ ರಾಜಪುತ್ರನು ಧರ್ಮಶೀಲನಾದ ರಾಜನಾಗುವನು. ಅನ್ಯರಾದರೆ ಧನ ಸುಖ ವೈಭವಗಳಿಂದ ಕೂಡಿದವರಾಗುತ್ತಾರೆಂದು ತಿಳಿಯತಕ್ಕದ್ದು.

* ಶುಭೇ ಸುಖಯಾತೇ—ಎಂತ ಪಾಠಾಂತರ ಅಂದರೆ, ಶುಭಗ್ರಹಗಳು ಸುಖಸ್ಥಾನದಲ್ಲಿ ಎಂತ ತಿಳಿಯತಕ್ಕದ್ದು.

ವೃಷೋದಯೇ ಮೂರ್ತಿಧನಾರಿ ಲಾಭಗೈಃ ।
ಶಶಾಂಕ ಜೀವಾರ್ಕಸುತಾ ಪರೈರ್ನೃಪಃ ॥
ಸುಖೇಗುರೌ ಖೇ ಶಶಿತೀಕ್ಷ್ಣ ದೀಧಿತೀ ।
ಯಮೋದಯೇ ಲಾಭಗತೈ ರ್ನೃಪೋಪರೈಃ ॥೧೭॥

ವೃಷಭವು ಲಗ್ನವಾಗಿ ಲಗ್ನದಲ್ಲಿ ಚಂದ್ರನೂ ದ್ವಿತೀಯದಲ್ಲಿ ಗುರುವೂ ಷಷ್ಠದಲ್ಲಿ ಶನಿಯೂ ಉಳಿದ ಗ್ರಹಗಳಾದ ರವಿ, ಕುಜ, ಬುಧ, ಶುಕ್ರರು ಏಕಾದಶದಲ್ಲಿ ಇರುವಾಗ ಹುಟ್ಟಿದವನು

ರಾಜವಂಶೀಯನಾದರೆ ರಾಜನಾಗುವನು. ಲಗ್ನದಿಂದ ಚತುರ್ಥ ಸ್ಥಾನದಲ್ಲಿ ಗುರುವೂ, ದಶಮ ದಲ್ಲಿ ರವಿ ಚಂದ್ರರೂ ಲಗ್ನದಲ್ಲಿ ಶನಿಯೂ ಏಕಾದಶದಲ್ಲಿ ಕುಜ, ಬುಧ, ಶುಕ್ರರೂ ಇರುವಾಗ ಹುಟ್ಟಿದವನು ರಾಜವಂಶದವನಾಗಿದ್ದರೆ ರಾಜನಾಗುವನು. ಬೇರೆಯವರಾಗಿದ್ದರೆ ಧನವಂತನಾಗಿ ಸುಖಭೋಗಗಳನ್ನನುಭವಿಸುವನು. ಈ ಯೋಗವು ಯಾವ ಲಗ್ನಕ್ಕಾದರೂ ಸಂಭವಿಸುತ್ತದೆ.

ಮೇಷೂರಣಾಯ ತನುಗಾಶ್ಚಶಿ ಮಂದಜೀವಾ ।
ಜ್ಞಾರೌಧನೇ ಸಿತರವೀ ಹಿಬುಕೇ ನರೇಂದ್ರಃ ॥
ವಕ್ರಾಸಿತೌ ಶಶಿಸುರೇಜ್ಯ ಸಿತಾರ್ಕ ಸೌಮ್ಯಾ ।
ಹೋರಾಸುಖಾಸ್ತ ಶುಭ ಖಾಪ್ತಿ ಗತಾಃ ಪ್ರಜೇಶಃ ॥೧೮॥

ದಶಮದಲ್ಲಿ ಚಂದ್ರನೂ ಏಕಾದಶದಲ್ಲಿ ಶನಿಯೂ ಲಗ್ನದಲ್ಲಿ ಗುರುವೂ ದ್ವಿತೀಯದಲ್ಲಿ ಬುಧ ಕುಜರೂ ಚತುರ್ಥದಲ್ಲಿ ಶುಕ್ರಸೂರ್ಯರೂ ಇರುವಾಗ ಕ್ಷತ್ರಿಯ ವಂಶದಲ್ಲಿ ಹುಟ್ಟಿದವನು ರಾಜನಾಗುವನು. ಹಾಗೆಯೇ ಲಗ್ನದಲ್ಲಿ ಕುಜಶನಿಗಳು ಚತುರ್ಥದಲ್ಲಿ ಚಂದ್ರನೂ ಸಪ್ತಮದಲ್ಲಿ ಗುರುವೂ ನವಮದಲ್ಲಿ ಶುಕ್ರನೂ ದಶಮದಲ್ಲಿ ರವಿಯೂ ಏಕಾದಶದಲ್ಲಿ ಬುಧನೂ ಈ ಪ್ರಕಾರವಿರುವಾಗ ಹುಟ್ಟಿದ ರಾಜಪುತ್ರನು ರಾಜನಾಗುವನು ಈ ಎರಡು ಯೋಗಗಳಲ್ಲಿ ಅನ್ಯರು ಧನವಂತರಾಗಿ ರಾಜಸಮರಾಗುವರೆಂದು ತಿಳಿಯತಕ್ಕದ್ದು.

ಕರ್ಮಲಗ್ನ ಯುತಪಾಕ ದಶಾಯಾಂ ।
ರಾಜ್ಯಲಬ್ಧಿರಥವಾ ಪ್ರಬಲಸ್ಯ ॥
ಶತ್ರು ನೀಚಗೃಹಯಾತದಶಾಯಾಂ ।
ಛಿದ್ರ ಸಂಶಯ ದಶಾ ಪರಿಕಲ್ಪ್ಯಾ ॥೧೯॥

ದಶಮ ಮತ್ತು ಲಗ್ನಭಾವದಲ್ಲಿರುವ ಗ್ರಹರ ದಶಾಭುಕ್ತಿ ಕಾಲದಲ್ಲಿ ಅಥವಾ ಪ್ರಬಲ ಗ್ರಹರ ದಶಾಂತರ್ದಶಾ ಕಾಲದಲ್ಲಿ ರಾಜಯೋಗದಲ್ಲಿ ಹುಟ್ಟಿದವನಿಗೆ ರಾಜ್ಯ ಪ್ರಾಪ್ತಿಯಾಗುವುದು. ಶತ್ರುಕ್ಷೇತ್ರ ನೀಚರಾಶಿಯಲ್ಲಿರುವ ಗ್ರಹರ ದಶಾಭುಕ್ತಿ ಕಾಲದಲ್ಲಿ ಪ್ರಾಪ್ತವಾದ ರಾಜ್ಯ ಧನ ಸಂಪತ್ತಿಗಳಿಗೆ ಸಂಶಯವನ್ನು ಕಲ್ಪಿಸುವುದು. (ಲಗ್ನ ದಶಮದಲ್ಲಿ ಅನೇಕ ಗ್ರಹಗಳಿದ್ದರೆ ಆಗ ಬಲಾಧಿಕವಾದ ಗ್ರಹರ ದಶಾಂತರ್ದಶೆಯಲ್ಲಿ ರಾಜ್ಯ ಪ್ರಾಪ್ತಿಕಾಲವೆಂತ ತಿಳಿಯತಕ್ಕದ್ದು).

ಗುರುಸಿತ ಬುಧಲಗ್ನೇ ಸಪ್ತಮಸ್ಥೇರ್ಕ ಪುತ್ರೇ ।
ವಿಯತಿ ದಿವಸನಾಥೇ ಭೋಗಿನಾಂ ಜನ್ಮವಿಂದ್ಯಾತ್ ॥
ಶುಭ ಬಲಯುತ ಕೇಂದ್ರೈಃ ಕ್ರೂರಭಸ್ಥೈಶ್ಚ ಪಾಪೈ ।
ವ್ರಜತಿ ಶಬರದಸ್ಯುಃ ಸ್ವಾಮಿತಾಮರ್ಥಬಾಕ್ಷ ॥೨೦॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ರಾಜಯೋಗ ನಿರೂಪಣಂ ನಾಮ ಏಕಾದಶೋಧ್ಯಾಯಃ ॥

ಲಗ್ನದಲ್ಲಿ ಗುರು, ಬುಧ, ಶುಕ್ರರೂ ಸಪ್ತಮದಲ್ಲಿ ಶನಿಯೂ ದಶಮದಲ್ಲಿ ರವಿಯೂ ಇರುವಾಗ ಹುಟ್ಟಿದವನು ಸುಖಭೋಗಶಾಲಿಯಾಗುವನು. (ಇಲ್ಲಿ "ಗುರು, ಬುಧ, ಸಿತಲಗ್ನೇ"– ಎಂದರೆ ಗುರು, ಬುಧ, ಶುಕ್ರರ ಕ್ಷೇತ್ರಗಳು ಲಗ್ನವಾಗಿದ್ದರೆ ಎಂತ ಕೆಲವರು ಅರ್ಥ ಮಾಡುವರು). ಕೇಂದ್ರ ಸ್ಥಾನವು ಶುಭವಾಗಿಯೂ ಬಲಿಷ್ಠವಾಗಿಯೂ ಇದ್ದು ಪಾಪಕ್ಷೇತ್ರಗಳಲ್ಲಿ ಪಾಪಗ್ರಹ ಗಳಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಬೇಡರುಗಳಿಗೆ ಅಥವಾ ಕಳ್ಳರುಗಳಿಗೆ ಒಡೆಯನಾಗಿ ಧನ ಸಂಪತ್ತುಳ್ಳವನು ಆಗುವನು

॥ ರಾಜಯೋಗವೆಂಬ ಹನ್ನೊಂದನೇಯ ಅಧ್ಯಾಯವು ॥

## ॥ ನಾಭಸಯೋಗಾಧ್ಯಾಯಃ ॥

ನವದಿಗ್ವಸವ ಸ್ತ್ರಿಕಾಗ್ನಿ ವೇದೈಃ ।
ಗುಣಿತಾ ದ್ವಿತ್ರಿ ಚತುರ್ವಿಕಲ್ಪಜಾಃ ಸ್ಯುಃ ॥
ಯವನೈ ಸ್ತ್ರಿಗುಣಾಹಿ ಷಟ್‌ಶತೀಸಾ ।
ಕಥಿತಾ ವಿಸ್ತರತೋತ್ರ ತತ್ಸಮಾಸ್ಯುಃ ॥೧॥

ನವದಿಗ್ವಸವಃ ೯-೧೦-೮ ಈ ಸಂಖ್ಯೆಗಳನ್ನು ಕ್ರಮವಾಗಿ ತ್ರಿಕಾಗ್ನಿವೇದೈಃ ೩-೩-೪ ಈ ಸಂಖ್ಯೆ ಗಳಿಂದ ಗುಣಿಸಿದಲ್ಲಿ ೨೭-೩೦-೩೨ ಯೋಗಗಳು ಆಗುತ್ತವೆ. ಆಕೃತಿಯೋಗ ೨೦ ಸಂಖ್ಯಾ ಯೋಗ ೭ ಕೂಡಿಸಿದರೆ ೨೭ ದ್ವಿವಿಕಲ್ಪವೂ ಇದಕ್ಕೆ ಆಶ್ರಯಯೋಗ ೩ ಕೂಡಿಸಿದರೆ ೩೦ ತ್ರಿವಿಕಲ್ಪವೂ ಮತ್ತೂ ಅದಕ್ಕೆ ದಲಯೋಗ ೨ ಕೂಡಿಸಿದಲ್ಲಿ ೩೨ ಚಾತುರ್ವಿಕಲ್ಪವೂ (ವಿಕಲ್ಪ ವೆಂದರೆ ಗ್ರಹರ ಸಂಯೋಗ) ಈ ವಿಧವಾಗಿ ೩೨ ಯೋಗಗಳು ಹೇಳಲ್ಪಟ್ಟಿವೆ. ಯವನಾಚಾರ್ಯರು ಇದನ್ನು ಷಟ್‌ಶತಿಹಿ ೬೦೦ನ್ನು ತ್ರಿಗುಣಾಃ ೩ರಿಂದ ಗುಣಿಸಿ ೧೮೦೦ ನಾಭಸಯೋಗಗಳೆಂತ ವಿಸ್ತಾರವಾಗಿ ಹೇಳಿರುತ್ತಾರೆ. ಈ ೧೮೦೦ ಯೋಗಗಳಿಂದ ಹೇಳಲ್ಪಟ್ಟ ಅರ್ಥ ೩೨ ಯೋಗಗಳಲ್ಲಿ ಹೇಳಲ್ಪಟ್ಟಿದೆ ಎಂತ ತಿಳಿಯತಕ್ಕದ್ದು.

ರಜ್ಜುರ್ಮುಸಲಂ ನಲಶ್ಚರಾದ್ಯೈಃ ।
ಸತ್ಯಶ್ಚಾತ್ರ ಯಜಾನ್ ಜಗಾದ ಯೋಗಾನ್ ॥
ಕೇಂದ್ರೈಃ ಸದಸದ್ಭುತೈ ರ್ದಲಾಖ್ಯೋ ।
ಸ್ರಕ್ ಸರ್ಪೌಕಥಿತೌ ಪರಾಶರೇಣ ॥೨॥

ಚರರಾಶಿಯಲ್ಲಿ ಎಲ್ಲಾ ಗ್ರಹರೂ ಇದ್ದರೆ ರಜ್ಜುಯೋಗವೂ, ಸ್ಥಿರರಾಶಿಯಲ್ಲಿದ್ದರೆ ಮುಸಲ ಯೋಗವೂ, ಉಭಯರಾಶಿಯಲ್ಲಿದ್ದರೆ ನಲಯೋಗವೂ ಸಂಭವಿಸುವುವು. ಈ ೩ ಸತ್ಯಾಚಾರ್ಯ ರಿಂದ ಹೇಳಲ್ಪಟ್ಟವು. ಇವುಗಳಿಗೆ ಆಶ್ರಯಯೋಗಗಳೆಂದು ಹೆಸರು. ಕೇಂದ್ರರಾಶಿಯಲ್ಲಿ ಶುಭಗ್ರಹಗಳೆಲ್ಲರೂ ಇದ್ದರೆ ಸ್ರಗ್ಯೋಗವೂ, ಕೇಂದ್ರದಲ್ಲಿ ಪಾಪ ಗ್ರಹರೆಲ್ಲರೂ ಇದ್ದರೆ ಸರ್ಪ ಯೋಗವೂ ಸಂಭವಿಸುವುವು. ಈ ೨ ಯೋಗಗಳು ಪರಾಶರರಿಂದ ಹೇಳಲ್ಪಟ್ಟವು. ಇವುಗಳಿಗೆ ದಲಯೋಗಗಳೆಂದು ಹೆಸರು.

ಯೋಗಾ ವ್ರಜಂತ್ಯಾಶ್ರಯಜಾಃ ಸಮತ್ವಂ ।
ಯವಾಬ್ಜ ವಜ್ರಾಂಡಜಗೋಲಕಾದ್ಯೈಃ ॥
ಕೇಂದ್ರೋಪಗ ಪ್ರೋಕ್ತಫಲೌ ದಲಾಖ್ಯಾ ।
ವಿತ್ಯಾಹುರನ್ಯೇ ನ ಪೃಥಕ್‌ಫಲೌ ತೌ ॥೩॥

ಆಕೃತಿಯೋಗಗಳಾದ ಯವ, ಪದ್ಮ, ವಜ್ರವಿಹಂಗ ಯೋಗಗಳನ್ನು ಆದಿ ಶಬ್ದದಿಂದ ಗದಾ ಶಕಟಾದಿ ಯೋಗಗಳನ್ನು ಸಂಖ್ಯಾಯೋಗಗಳಾದ ಗೋಳಕ, ಶೂಲ, ಕೇದರಯೋಗಗಳನ್ನು, ಆಶ್ರಯಯೋಗಗಳಾದ ರಜ್ಜು, ಮುಸಲ, ನಲ ಯೋಗಗಳನ್ನು ನೋಡುವಾಗ ಸಮಾನವಾಗಿರುವುದರಿಂದ ಕೆಲವರು ಆಶ್ರಯಯೋಗಗಳನ್ನು ಹೇಳಲಿಲ್ಲ. ಆದರೆ ವರಾಹಮಿಹಿರಾಚಾರ್ಯರು ಕೇಂದ್ರ ಸ್ಥಾನವನ್ನು ಹೊಂದಿದ್ದ ಗ್ರಹಗಳಿಗೆ ಹೇಳಲ್ಪಟ್ಟ ಫಲಗಳು ದಲಯೋಗ, ಸರ್ಪಯೋಗಗಳಿಗೆ ಇರುವಾಗ ಪುನರುಕ್ತಿ ಎಂಬುದನ್ನು ಎಣಿಸದೆ ಹೇಳಿರುತ್ತಾರೆ. ಕಾರಣವೇನೆಂದರೆ ಇತರ ಕೇಂದ್ರಯೋಗಗಳು ಆಯಾಯ ಗ್ರಹರ ದಶಾಭುಕ್ತಿ ಕಾಲದಲ್ಲಿ ಅವರವರ ಫಲಗಳನ್ನು ಕೊಡುತ್ತಾರೆ. ನಾಭಸಯೋಗಗಳಲ್ಲಿ ಹೇಳಲ್ಪಟ್ಟ ಫಲಗಳು ಆಯುಷ್ಯದ ಎಲ್ಲಾ ಕಾಲಗಳಲ್ಲಿಯೂ ಸರ್ವ ದಶಾಭುಕ್ತಿ ಕಾಲದಲ್ಲಿಯೂ ಪೂರ್ಣಫಲಪ್ರದವಾದುದರಿಂದ ಹೇಳಿರುತ್ತಾರೆಂಬುದನ್ನು ನೆನಪಿನಲ್ಲಿಡತಕ್ಕದ್ದು.

**ಆಸನ್ನ ಕೇಂದ್ರಭವನದ್ವಯಗೈರ್ಗದಾಖ್ಯಾ ।**
**ಸ್ತನ್ವಸ್ತಗೇಷು ಶಕಟಂ ವಿಹಗಃ ಖಬಂಧೋಃ ॥**
**ಶೃಂಗಾಟಕಂ ನವಮ ಪಂಚಮ ಲಗ್ನಸಂಸ್ಥೈ ।**
**ರ್ಲಗ್ನಾನ್ಯಗೈರ್ಹಲಮಿತಿ ಪ್ರವದಂತಿ ತಜ್ಞಾಃ ॥೪॥**

ಪರಸ್ಪರ ಸಮೀಪವಾದ ಎರಡು ಕೇಂದ್ರಗಳಲ್ಲಿ ಗ್ರಹರಿದ್ದರೆ ಗದಾಯೋಗವೂ, ಲಗ್ನದಲ್ಲಿ ಮತ್ತು ಸಪ್ತಮದಲ್ಲಿ ಈ ಎರಡು ಕಡೆಗಳಲ್ಲಿ ಎಲ್ಲಾ ಗ್ರಹರಿದ್ದರೆ ಶಕಟಯೋಗವೂ ದಶಮ ಚತುರ್ಥಗಳಲ್ಲಿ ಎಲ್ಲಾ ಗ್ರಹರೂ ಇದ್ದರೆ ವಿಹಗಯೋಗವೂ, ನವಮ ಪಂಚಮ ಲಗ್ನ ಇವುಗಳಲ್ಲಿ ಎಲ್ಲಾ ಗ್ರಹರೂ ಇದ್ದರೆ ಶೃಂಗಾಟಕಯೋಗವೂ ಲಗ್ನವನ್ನು ಬಿಟ್ಟು ಯಥಾಸಂಭವವಾಗಿ ಅನ್ಯ ಪರಸ್ಪರ ತ್ರಿಕೋಣ ಸ್ಥಾನಗಳಲ್ಲಿ ಎಲ್ಲಾ ಗ್ರಹರೂ ಇದ್ದರೆ ಹಲಯೋಗವೂ ಸಂಭವಿಸುವುದೆಂದು ತಿಳಿದವರು ಹೇಳುತ್ತಾರೆ. ಅದು ಮೂರು ಪ್ರಕಾರ ಆಗುವುದು. ೧. ದ್ವಿತೀಯ, ಷಷ್ಠ, ದಶಮದಲ್ಲಿ ಎಲ್ಲಾ ಗ್ರಹರಿದ್ದರೆ, ೨. ತೃತೀಯ, ಸಪ್ತಮ, ಏಕಾದಶದಲ್ಲಿದ್ದರೆ, ೩. ಚತುರ್ಥ, ಅಷ್ಟಮ, ದ್ವಾದಶದಲ್ಲಿದ್ದರೆ ಹೀಗೆ ವಿಕಲ್ಪದಿಂದ ಹಲಯೋಗವೆಂತ ತಿಳಿಯತಕ್ಕದ್ದು.

**ಶಕಟಾಂಡಜವಚ್ಛುಭಾಶುಭೈರ್ವಜ್ರಂ ತದ್ವಿಪರೀತಗೈರ್ಯವಃ ।**
**ಕಮಲಂತು ವಿಮಿಶ್ರ ಸಂಸ್ಥಿತೈ ರ್ವಾಪೀತದ್ಯದಿ ಕೇಂದ್ರಬಾಹ್ಯತಃ ॥೫॥**

ಶಕಟ ಮತ್ತು ವಿಹಗಯೋಗಗಳಂತೆ ಲಗ್ನ ಸಪ್ತಮರಾಶಿಗಳಲ್ಲಿ ಶುಭಗ್ರಹರೂ ಚತುರ್ಥ ದಶಮದಲ್ಲಿ ಪಾಪಗ್ರಹರೂ ಇದ್ದರೆ ವಜ್ರಯೋಗವು. ಇದಕ್ಕೆ ವಿಪರೀತವಾಗಿ ಎಂದರೆ ಲಗ್ನ ಸಪ್ತಮಗಳಲ್ಲಿ ಪಾಪಗ್ರಹರೂ ದಶಮ ಚತುರ್ಥಗಳಲ್ಲಿ ಶುಭಗ್ರಹರೂ ಇದ್ದರೆ—ಯವಯೋಗವೂ, ಈ ನಾಲ್ಕು ಕೇಂದ್ರಗಳಲ್ಲಿಯೂ ಶುಭ ಪಾಪಗ್ರಹರು ಸೇರಿದ್ದರೆ ಕಮಲಯೋಗವೂ ಈ ನಾಲ್ಕು ಕೇಂದ್ರಗಳನ್ನೂ ಬಿಟ್ಟು ಬೇರೆ ಕಡೆಯಲ್ಲಿ ಎಲ್ಲಾ ಗ್ರಹರೂ ಇದ್ದರೆ ವಾಪೀಯೋಗವು ಸಂಭವಿಸುವುದು.

**ಪೂರ್ವಶಾಸ್ತ್ರಾನು ಸಾರೇಣ ಮಯಾವಜ್ರಾದಯಃ ಕೃತಾಃ ।**
**ಚತುರ್ಥಭವನೇ ಸೂರ್ಯಾಜ್ಞಸಿತೌ ಭವತಃ ಕಥಮ್ ॥೬॥**

ಪೂರ್ವದಲ್ಲಿ ಮಯ ಯವನ ಪರಾಶರಾದ್ಯುಕ್ತ ಶಾಸ್ತ್ರಾನುಸಾರವಾಗಿ ನನ್ನಿಂದ ವಜ್ರ, ಯವಾದಿ ಯೋಗಗಳು ಹೇಳಲ್ಪಟ್ಟಿವೆ. ಆದರೆ ವಜ್ರ, ಯವಯೋಗಗಳ ಪ್ರಾಪ್ತಿಯು ಇತರ ಮನ್ವಂತರ ಗಳಲ್ಲಿ ಸಂಭವಿಸುತ್ತಿದ್ದರೂ ಈ ಕಾಲದಲ್ಲಿ ಸೂರ್ಯನಿಗೆ ಚತುರ್ಥ ಸ್ಥಾನದಲ್ಲಿ ಬುಧ ಶುಕ್ರರು ಹೇಗೆ ಇರುತ್ತಾರೆ; ಅಂದರೆ ಸೂರ್ಯನಿಗೆ ಹಿಂದೆ ಮುಂದೆ ಬುಧ ಶುಕ್ರರು ನಾಲ್ಕು ರಾಶಿಯ ಅಂತರದಲ್ಲಿರಲು ಈ ಕಾಲದಲ್ಲಿ ಸಾಧ್ಯವಿಲ್ಲವೆಂತ ತಾತ್ಪರ್ಯವು.

**ಕಂಟಕಾದಿ ಪ್ರವೃತ್ತೈಸ್ತು ಚತುರ್ಗೃಹಗತೈರ್ಗ್ರಹೈಃ ॥**
**ಯೂಪೇಷು ಶಕ್ತಿದಂಡಾಖ್ಯಾ ಹೋರಾದ್ಯೈಃ ಕಂಟಕೈಃ ಕ್ರಮಾತ್ ॥೭॥**

ಲಗ್ನ, ದ್ವಿತೀಯ, ತೃತೀಯ, ಚತುರ್ಥದಲ್ಲಿ ಸಕಲ ಗ್ರಹಗಳಿದ್ದರೆ ಯೂಪಯೋಗವೂ, ಚತುರ್ಥ, ಪಂಚಮ, ಷಷ್ಠ, ಸಪ್ತಮಗಳಲ್ಲಿ ಎಲ್ಲಾ ಗ್ರಹಗಳಿದ್ದರೆ ಶರಯೋಗವೂ, ಸಪ್ತಮ, ಅಷ್ಟಮ, ನವಮ, ದಶಮಗಳಲ್ಲಿ ಸರ್ವ ಗ್ರಹಗಳಿದ್ದರೆ ಶಕ್ತಿಯೋಗವೂ, ದಶಮ, ಏಕಾದಶ, ದ್ವಾದಶ, ಲಗ್ನ ಇವುಗಳಲ್ಲಿ ಎಲ್ಲಾ ಗ್ರಹರೂ ಅಡಕವಾಗಿದ್ದರೆ ದಂಡಯೋಗವೂ ಆಗುವುದು.

**ನೌಕೂಟಛತ್ರ ಚಾಪಾನಿ ತದ್ವತ್ಸಪ್ತರ್ಕ್ಷ ಸಂಸ್ಥಿತೈಃ ॥**
**ಅರ್ಧಚಂದ್ರಸ್ತು ನಾವಾದ್ಯೈಃ ಪ್ರೋಕ್ತಾ ದನ್ಯರ್ಕ್ಷ ಸಂಸ್ಥಿತೈಃ ॥೮॥**

ಪೂರ್ವೋಕ್ತ ಪ್ರಕಾರ ಲಗ್ನ, ದ್ವಿತೀಯ, ತೃತೀಯ, ಚತುರ್ಥ, ಪಂಚಮ, ಷಷ್ಠ, ಸಪ್ತಮ ಈ ಏಳು ರಾಶಿಗಳಲ್ಲಿ ಸರ್ವಗ್ರಹಗಳು ಇದ್ದರೆ ನೌಕಾಯೋಗವು. ಹೀಗೆಯೇ ಚತುರ್ಥದಿಂದ ಅಂದರೆ ೪-೫-೬-೭-೮-೯-೧೦ ಈ ಏಳು ರಾಶಿಗಳಲ್ಲಿ ಸಕಲ ಗ್ರಹಗಳು ಇದ್ದರೆ ಕೂಟಯೋಗವು. ೭-೮-೯-೧೦-೧೧-೧೨-೧ ಈ ಸ್ಥಾನಗಳಲ್ಲಿ ಎಲ್ಲಾ ಗ್ರಹಗಳು ಇದ್ದರೆ ಛತ್ರಯೋಗವು. ೧೦-೧೧-೧೨-೧-೨-೩-೪ ಈ ಏಳು ಸ್ಥಾನಗಳಲ್ಲಿ ಸಂಪೂರ್ಣ ಗ್ರಹಗಳು ಇದ್ದರೆ ಚಾಪ ಯೋಗವು. ಬಾಕಿ ಉಳಿದ ಸ್ಥಾನಗಳೆಂದರೆ ಪಣಪರ, ಆಪೋಕ್ಲೀಮ ರಾಶಿಗಳು ಪಣಪರದಿಂದ ೨-೩-೪-೫-೬-೭-೮ ಈ ಸ್ಥಾನಗಳಲ್ಲಿ ಸಕಲ ಗ್ರಹಗಳು ಸೇರಿದ್ದರೆ ಅರ್ಧಚಂದ್ರ ಯೋಗವು. ಪುನಃ ೫ರಿಂದ ೧೧ರ ವರೆಗೆ ೮ರಿಂದ ೨ರವರೆಗೆ ೧೧ರಿಂದ ೫ರ ವರೆಗೆ ನಾಲ್ಕು ಯೋಗಗಳು. ಹೀಗೆಯೇ ಆಪೋಕ್ಲೀಮದಿಂದ ೩ರಿಂದ ೯ರ ವರೆಗೆ ೬ರಿಂದ ೧೨ರ ವರೆಗೆ ೯ರಿಂದ ೩ರ ವರೆಗೆ ೧೨ರಿಂದ ೬ರ ವರೆಗೆ ನಾಲ್ಕು ಯೋಗಗಳು ಈ ಪ್ರಕಾರ ಸಕಲ ಗ್ರಹಗಳು ಏಳು ರಾಶಿಗಳಲ್ಲಿರು ವುದರಿಂದ ಎಂಟು ಅರ್ಧಚಂದ್ರ ಯೋಗಗಳಾಗುವುವು.

**ಏಕಾಂತರ ಗತೈರರ್ಥಾತ್ಸಮುದ್ರಃ ಷಡ್ಗೃಹಾಶ್ರಿತೈಃ ॥**
**ವಿಲಗ್ನಾದಿ ಸ್ಥಿತೈಶ್ಚಕ್ರ ಮಿತ್ಯಾ ಕೃತಿಜ ಸಂಗ್ರಹಃ ॥೯॥**

ದ್ವಿತೀಯ ಸ್ಥಾನ ಮೊದಲುಗೊಂಡು ಒಂದು ರಾಶಿಯನ್ನು ಬಿಟ್ಟು ಮತ್ತೊಂದು ರಾಶಿಯಲ್ಲಿ ಅಂದರೆ ೨-೪-೬-೮-೧೦-೧೨ ಈ ಆರು ರಾಶಿಗಳಲ್ಲಿ ಸಕಲ ಗ್ರಹಗಳೂ ಇದ್ದರೆ ಸಮುದ್ರ

ಯೋಗವು. ಲಗ್ನಾದಿಯಾಗಿ ಒಂದು ಮನೆಯನ್ನು ಬಿಟ್ಟು ಮತ್ತೊಂದು ಮನೆಯಲ್ಲಿ ಅಂದರೆ ೧-೩-೫-೭-೯-೧೧ ಈ ಆರು ರಾಶಿಗಳಲ್ಲಿ ಎಲ್ಲಾ ಗ್ರಹಗಳೂ ಇದ್ದರೆ ಚಕ್ರಯೋಗವು ಇವು ೨೦ ಆಕೃತಿ ಯೋಗಗಳೆಂದು ಹೇಳಲ್ಪಟ್ಟಿದೆ.

ಸಂಖ್ಯಾಯೋಗಾಃ ಸಪ್ತ ಸಪ್ತರ್ಕ್ಷ ಸಂಸ್ಥೈ ।
ರೇಕಾಪಾಯಾದ್ವಲ್ಲಕೀ ದಾಮಿನೀ ಚ ॥
ಪಾಶಃ ಕೇದಾರಶ್ಚ ಶೂಲೋಯುಗಂಚ ।
ಗೋಳಂಚಾನ್ಯೋ ಪೂರ್ವ ಮುಕ್ತಾನ್ವಿಹಾಯ ॥೧೦॥

ಯಾವುದಾದರೂ ಏಳು ರಾಶಿಗಳಲ್ಲಿ ಬೇರೆ ಬೇರೆಯಾಗಿ ಏಳು ಗ್ರಹರಿದ್ದರೆ ವಲ್ಲಕೀ ಯೋಗವು. ಹೀಗೆ ಆರು ರಾಶಿಯಲ್ಲಿ ಏಳು ಗ್ರಹರಿದ್ದರೆ ದಾಮಿನೀಯೋಗವು. ಐದು ರಾಶಿ ಯಲ್ಲಿ ಏಳು ಗ್ರಹರಿದ್ದರೆ ಪಾಶಯೋಗವು, ನಾಲ್ಕು ರಾಶಿಯಲ್ಲಿ ಏಳು ಗ್ರಹರಿದ್ದರೆ ಕೇದಾರ ಯೋಗವು, ಮೂರು ರಾಶಿಯಲ್ಲಿ ಏಳು ಗ್ರಹರಿದ್ದರೆ ಶೂಲಯೋಗವು. ಎರಡು ರಾಶಿ ಯಲ್ಲಿ ಏಳು ಗ್ರಹರಿದ್ದರೆ ಯುಗಯೋಗವು. ಒಂದೇ ರಾಶಿಯಲ್ಲಿ ಏಳೂ ಗ್ರಹರಿದ್ದರೆ ಗೋಳಯೋಗವು. ಈ ಪ್ರಕಾರ ಪೂರ್ವದಲ್ಲಿ ಹೇಳಲ್ಪಟ್ಟ ಯೋಗಗಳನ್ನು ಬಿಟ್ಟು ಇವು ಸಂಖ್ಯಾಯೋಗಗಳೆಂದು ತಿಳಿಯತಕ್ಕದ್ದು.

### ಯೋಗ ಫಲಗಳು

ಈರ್ಷ್ಯು ರ್ವಿದೇಶ ನಿರತೋಧ್ವರುಚಿಶ್ಚ ರಜ್ಜ್ವಾಂ ।
ಮಾನಿ ಧನೀಚ ಮುಸಲೇ ಬಹುಕೃತ್ಯಸಕ್ತಃ ॥
ವ್ಯಂಗ ಸ್ಥಿರಾಢ್ಯ ನಿಪುಣೋ ನಲಜಃ ಸ್ರಗುತ್ಥೋ ।
ಭೋಗಾನ್ವಿತೋ ಭುಜಗಜೋ ಬಹು ದುಃಖ ಭಾಕ್ಸ್ಯಾತ್ ॥೧೧॥

ರಜ್ಜುಯೋಗದಲ್ಲಿ ಹುಟ್ಟಿದವನು ಪರರ ಶ್ರೇಯಸ್ಸನ್ನು ಸಹಿಸಲಾರದೆ ಹೊಟ್ಟೆಕಿಚ್ಚುಳ್ಳವನೂ ಪರದೇಶ ವಾಸದಲ್ಲಿ ಪ್ರೀತಿಯುಳ್ಳವನೂ ಪ್ರಯಾಣದಲ್ಲಿ ಆಸಕ್ತಿಯುಳ್ಳವನೂ ಆಗಿರುತ್ತಾನೆ. ಮುಸಲಯೋಗದಲ್ಲಿ ಹುಟ್ಟಿದವನು ಮಾನವಂತನೂ ಧನವಂತನೂ ಅನೇಕ ಕಾರ್ಯಗಳಲ್ಲಿ ಆಸಕ್ತಿಯುಳ್ಳವನೂ ಆಗುತ್ತಾನೆ. ನಲಯೋಗದಲ್ಲಿ ಹುಟ್ಟಿದವನು ಅಂಗದಲ್ಲಿ ನ್ಯೂನತೆ ಉಳ್ಳ ವನೂ ಸ್ಥಿರವಾದ ಸಂಪತ್ತಿಯುಳ್ಳವನೂ ನಿಪುಣನೂ ಆಗುವನು. ಸ್ರಗ್ಯೋಗದಲ್ಲಿ ಹುಟ್ಟಿದವನು ಭೋಗಾದಿಗಳಿಂದ ಕೂಡಿದವನಾಗುವನು. ಸರ್ಪಯೋಗದಲ್ಲಿ ಹುಟ್ಟಿದವನು ನಾನಾ ವಿಧ ದುಃಖಗಳನ್ನನುಭವಿಸತಕ್ಕವನಾಗುವನು.

ಆಶ್ರಯೋಕ್ತಾಸ್ತು ವಿಫಲಾ ಭವಂತ್ಯನ್ಯೈರ್ವಿಮಿಶ್ರಿತಾಃ ॥
ಮಿಶ್ರಾಯೈಸ್ತೇ ಫಲಂದದ್ಯುರಮಿಶ್ರಾಸ್ಸ್ವ ಫಲಪ್ರದಾಃ ॥೧೨॥

ಆಶ್ರಯಯೋಗಗಳು ಇತರ ಗದಾದಿ ಯೋಗಗಳಿಂದ ಕೂಡಿದರೆ ಫಲವಿಲ್ಲದವುಗಳು ಆಗುತ್ತವೆ. ಆ ಕಾಲದಲ್ಲಿ ಆಶ್ರಯ ಯೋಗಗಳು ಯಾವ ಯೋಗಗಳಿಂದ ಕೂಡಿಕೊಂಡಿರುವುದೋ ಆ ಯೋಗಗಳು ಫಲಗಳನ್ನು ಕೊಡುವುವು. ಆಶ್ರಯ ಯೋಗಗಳಲ್ಲಿ ಇತರ ಯೋಗಗಳು ಕೂಡ ದಿದ್ದರೆ ಆಯಾಯ ಆಶ್ರಯ ಯೋಗಗಳಲ್ಲಿ ಹೇಳಲ್ಪಟ್ಟ ಫಲಗಳು ಉಂಟಾಗುವುದು.

**ಯಜ್ವಾರ್ಥಭಾಕ್ಸತತ ಮರ್ಥರುಚಿರ್ಗದಾಯಾಂ ।**
**ತದ್ವೃತ್ತಿ ಭುಕ್ ಶಕಟಜಸ್ಸರುಜಃ ಕುದಾರಃ ॥**
**ದೂತೋಟನಃ ಕಲಹ ಕೃದ್ವಿಹಗೇಪ್ರದಿಷ್ಟಃ ।**
**ಶೃಂಗಾಟಕೇ ಚಿರಸುಖೀ ಕೃಷಿವಿದ್ಹಲಾಖ್ಯೇ ॥೧೬॥**

ಗದಾಯೋಗದಲ್ಲಿ ಹುಟ್ಟಿದವನು ಯಜ್ಞಾದಿ ಸತ್ಕರ್ಮಗಳನ್ನು ಮಾಡತಕ್ಕವನೂ ಧನವಂತ ನಾಗಿರುವವನೂ ಎಲ್ಲಾ ಕಾಲದಲ್ಲಿಯೂ ಧನಾರ್ಜನೆಯ ಉದ್ಯೋಗದಲ್ಲಿರುವವನೂ ಆಗುವನು.

ಶಕಟಯೋಗದಲ್ಲಿ ಹುಟ್ಟಿದವನು ಬಂಡಿಯ ವೃತ್ತಿಯಿಂದ ಜೀವಿಸುವವನೂ, ರೋಗಿಯೂ, ಕೆಟ್ಟ ಹೆಂಡತಿಯುಳ್ಳವನೂ ಆಗುತ್ತಾನೆ.

ವಿಹಗಯೋಗದಲ್ಲಿ ಹುಟ್ಟಿದವನೂ ದೂತನೂ (ಹೇಳಿ ಕಳಿಸಿದ್ದನ್ನು ಹೇಳುವುದು), ಸಂಚಾರ ಪ್ರಿಯನೂ, ಕಲಹ ಮಾಡುವವನೂ ಆಗುವನು.

ಶೃಂಗಾಟಕ ಯೋಗದಲ್ಲಿ ಹುಟ್ಟಿದವನು ದೀರ್ಘಕಾಲ ಸುಖಿಯಾಗುವನು. (ಇಲ್ಲಿ ಚಿರಸುಖಿ ಅಂದರೆ ಅಂತ್ಯ ವಯಸ್ಸಿನಲ್ಲಿ ಸುಖವನ್ನನುಭವಿಸುವವನೆಂದು ಅರ್ಥ ಮಾಡಿರುವರು).

ಹಲಯೋಗದಲ್ಲಿ ಹುಟ್ಟಿದವನು ಕೃಷಿಯನ್ನು ಮಾಡುವವನಾಗುತ್ತಾನೆ.

**ವಜ್ರೇಂತ್ಯ ಪೂರ್ವ ಸುಖಿತಃ ಸುಭಗೋತಿ ಶೂರೋ ।**
**ವೀರ್ಯಾನ್ವಿತೋಪ್ಯಥ ಯವೇ ಸುಖಿತೋ ವಯೋಂತಃ ॥**
**ವಿಖ್ಯಾತ ಕೀರ್ತ್ಯಮಿತ ಸೌಖ್ಯಗುಣಾಶ್ಚ ಪದ್ಮೇ ।**
**ವಾಪ್ಯಾಂತನು ಸ್ಥಿರಸುಖೀ ನಿಧಿಕೃನ್ನದಾತಾ ॥೧೭॥**

ವಜ್ರಯೋಗದಲ್ಲಿ ಹುಟ್ಟಿದವನು ವಾರ್ಧಿಕ್ಯ ಮತ್ತು ಬಾಲ್ಯ ವಯಸ್ಸಿನಲ್ಲಿ ಸುಖವುಳ್ಳವನು ಸುಂದರವಾಗಿರುವವನು ಅತೀ ಶೂರನು ಆಗುವನು.

ಯವಯೋಗದಲ್ಲಿ ಹುಟ್ಟಿದವನು ವೀರ್ಯಾನ್ವಿತನೂ ಮಧ್ಯವಯಸ್ಸಿನಲ್ಲಿ ಅಂದರೆ ಪ್ರಾಯ ಕಾಲದಲ್ಲಿ ಸುಖ ಉಳ್ಳವನೂ ಆಗುತ್ತಾನೆ. "ವಯೋಂತ್ಯೇ" ಎಂದರೆ ವಯಸ್ಸಿನ ಕೊನೆಯಲ್ಲಿ ಸುಖ ಉಳ್ಳವನೆಂದು ಪಾಠಾಂತರವಾಗಿ ಹೇಳುತ್ತಾರೆ.

ಪದ್ಮ (ಕಮಲ) ಯೋಗದಲ್ಲಿ ಹುಟ್ಟಿದವನು ಪ್ರಸಿದ್ಧ ಕೀರ್ತಿಯುಳ್ಳವನೂ ಅತಿಯಾಗಿ ಸುಖ ಮತ್ತು ಗುಣವುಳ್ಳವನೂ ಆಗುತ್ತಾನೆ.

ವಾಪೀಯೋಗದಲ್ಲಿ ಹುಟ್ಟಿದವನು ಶರೀರದಲ್ಲಿ ಸ್ಥಿರವಾದ ಸೌಖ್ಯವುಳ್ಳವನೂ ಧನವನ್ನು ಗಳಿಸಿ ನಿಧಿಯಾಗಿಡುವವನೂ ಆಗುತ್ತಾನೆ, ಆದರೆ ದಾನಶೀಲನಾಗುವುದಿಲ್ಲ.

ತ್ಯಾಗಾತ್ಮವಾನ್ ಕ್ರತುವರ್ಯೈರ್ಯಜತೇ ಚ ಯೂಪೇ ।
ಹಿಂಸ್ರೋಽಥ ಗುಪ್ತ್ಯಧಿ ಕೃತ ಶ್ಶರಕೃಚ್ಛರಾಖ್ಯೇ ॥
ನೀಚೋಲಸಃ ಸುಖ ಧನೈರ್ವಿಯುತಶ್ಚ ಶಕ್ತೌ ।
ದಂಡೇ ಪ್ರಿಯೈರ್ವಿರಹಿತಃ ಪುರುಷೋಂತ್ಯ ವೃತ್ತಿಃ ॥೧೫॥

ಯೂಪಯೋಗದಲ್ಲಿ ಹುಟ್ಟಿದವನು ತ್ಯಾಗಶೀಲನೂ ಯಜ್ಞಗಳನ್ನು ಮಾಡುವವನೂ ಆಗುತ್ತಾನೆ.
ಶರಯೋಗದಲ್ಲಿ ಹುಟ್ಟಿದವನು ಹಿಂಸೆಗಳನ್ನು ಮಾಡುವವನೂ, ಬಂಧನಾಧಿಕಾರಿಯೂ (ಜೈಲ್ ಸುಪರಿಡೆಂಟ್, ಜೈಲರ್ ವ ರಾಜಗೃಹದಲ್ಲಿ ಗುಪ್ತವಾದ ಅಧಿಕಾರ ಉಳ್ಳವನೂ ಆಗಬಹುದು). ಅಸ್ತ್ರಾದಿಗಳನ್ನು ತಯಾರಿಸುವವನೂ ಆಗುತ್ತಾನೆ.

ಶಕ್ತಿಯೋಗದಲ್ಲಿ ಹುಟ್ಟಿದವನು ಕುಲೋಚಿತ ವೃತ್ತಿಯನ್ನು ಬಿಟ್ಟು ನೀಚಕೃತ್ಯಗಳನ್ನು ಮಾಡುವವನೂ, ಸೋಮಾರಿಯೂ, ಸುಖ ಧನಗಳಿಲ್ಲದವನೂ ಆಗುತ್ತಾನೆ. ದಂಡಯೋಗದಲ್ಲಿ ಹುಟ್ಟಿದವನು ಇಷ್ಟಜನರಿಂದ ದೂರ ಮಾಡಲ್ಪಟ್ಟವನೂ ನೀಚವೃತ್ತಿಯವನೂ ಆಗುತ್ತಾನೆ.

ಕೀರ್ತ್ಯಾಯುತಶ್ಚಲ ಸುಖಃ ಕೃಪಣಶ್ಚ ನೌಜಃ ।
ಕೂಟೇನೃತಪ್ಲವನ ಬಂಧನಪಶ್ಚ ಜಾತಃ ॥
ಛತ್ರೋದ್ಭವಃ ಸ್ವಜನ ಸೌಖ್ಯ ಕರೋಂತ್ಯ ಸೌಖ್ಯಃ ।
ಶೂರಶ್ಚ ಕಾರ್ಮುಕ ಭವಃ ಪ್ರಥಮಾಂತ್ಯ ಸೌಖ್ಯಃ ॥೧೬॥

ನೌಕಾಯೋಗದಲ್ಲಿ ಹುಟ್ಟಿದವನು ಕೀರ್ತಿವಂತನೂ, ಅಸ್ಥಿರವಾದ ಸುಖ ಉಳ್ಳವನೂ, ಲೋಭಿಯೂ ಆಗುವನು.

ಕೂಟಯೋಗದಲ್ಲಿ ಹುಟ್ಟಿದವನು ಸುಳ್ಳು ಹೇಳುವವನೂ, ದೋಣಿ, ತೆಪ್ಪ ಮೊದಲಾದವುಗಳು ಮತ್ತು ಬಂಧನ ಇವುಗಳ ಅಧಿಕಾರಿಯೂ ಆಗುವನು.

ಛತ್ರಯೋಗದಲ್ಲಿ ಹುಟ್ಟಿದವನು ಸ್ವಜನ ಸುಖದಲ್ಲಿ ಪ್ರೀತಿಯುಳ್ಳವನೂ ಅಂತ್ಯಕಾಲದಲ್ಲಿ ಸುಖವನ್ನನುಭವಿಸುವವನೂ ಆಗುತ್ತಾನೆ.

ಚಾಪಯೋಗದಲ್ಲಿ ಹುಟ್ಟಿದವನು ಶೂರನೂ ಮೊದಲು ಮತ್ತು ಕೊನೆಯ ವಯಸ್ಸಿನಲ್ಲಿ ಸುಖ ಉಳ್ಳವನೂ ಆಗುತ್ತಾನೆ.

ಅರ್ಧೇಂದುಜಸ್ಸುಭಗ ಕಾಂತವಪುಃ ಪ್ರಧಾನ ।
ಸ್ತ್ರೋಯಾಲಯೇ ನರಪತಿ ಪ್ರತಿಮಸ್ತು ಭೋಗೀ ॥
ಚಕ್ರೇ ನರೇಂದ್ರ ಮಕುಟದ್ಯುತಿ ರಂಜಿತಾಂಘ್ರಿ ।
ರ್ವೀಣೋದ್ಭವಶ್ಚ ನಿಪುಣಃ ಪ್ರಿಯಗೀತ ನೃತ್ಯಃ ॥೧೭॥

ಅರ್ಧಚಂದ್ರ ಯೋಗದಲ್ಲಿ ಹುಟ್ಟಿದವನು ಮನೋಹರವಾದ ಕಾಂತಿಯುಳ್ಳ ಶರೀರವುಳ್ಳವನೂ ಮುಖ್ಯ

ಪುರುಷನೂ ಆಗುವನು. ಸಮುದ್ರಯೋಗದಲ್ಲಿ ಹುಟ್ಟಿದವನು ರಾಜಸಮಾನನೂ ಭೋಗ ಪುರುಷನೂ ಆಗುವನು

ಚಕ್ರಯೋಗದಲ್ಲಿ ಹುಟ್ಟಿದವನು ರಾಜರುಗಳ ಕಿರೀಟ ಪ್ರಭೆಯನ್ನು ಹೊಂದಿ ಕಾಲುಗಳುಳ್ಳವನೂ ಅಂದರೆ ಚಕ್ರವರ್ತಿ ಅಥವಾ ತಪೋಜ್ಞಾನಾದಿ ಪ್ರಭಾವಗಳಿಂದ ಯುಕ್ತನಾಗಿ ರಾಜರುಗಳಿಗೆ ಗುರುವೂ ಆಗುವನು

ವೀಣಾಯೋಗದಲ್ಲಿ ಹುಟ್ಟಿದವನು ನಿಪುಣನೂ ಗೀತನೃತ್ಯಾದಿಗಳಲ್ಲಿ ಪ್ರೀತಿಯುಳ್ಳವನೂ ಆಗುವನು

**ದಾತಾನ್ಯ ಕಾರ್ಯನಿರತಃ ಪಶುಪಶ್ಚದಾಮ್ನಿ ।**
**ಪಾಶೇಧನಾರ್ಜನ ವಿಶೀಲ ಸ ಭೃತ್ಯ ಬಂಧುಃ ॥**
**ಕೇದಾರಜಃ ಕೃಷಿಕರಃ ಸುಬಹೂಪಯೋಜ್ಯಃ ॥**
**ಶೂರಃ ಕ್ಷತೋಧನ ರುಚಿರ್ವಿಧನಶ್ಚ ಶೂಲೇ ॥೧೮॥**

ದಾಮಿನಿಯೋಗದಲ್ಲಿ ಹುಟ್ಟಿದವನು ಅನ್ಯ ಕಾರ್ಯನಿರತನೂ ಪಶುಪಾಲನಶೀಲನೂ ಆಗುತ್ತಾನೆ

ಪಾಶಯೋಗದಲ್ಲಿ ಹುಟ್ಟಿದವನು ಧನ ಸಂಪಾದನೆ ಮಾಡುವುದರಲ್ಲಿ ಅತೀ ಸಮರ್ಥನೂ ಸೇವಕರಿಂದಲೂ ಬಂಧುಗಳಿಂದಲೂ ಕೂಡಿದವನು ಆಗುತ್ತಾನೆ.

ಕೇದಾರಯೋಗದಲ್ಲಿ ಹುಟ್ಟಿದವನು ಕೃಷಿಯನ್ನು ಮಾಡುವವನೂ ಚೆನ್ನಾಗಿ ತನ್ನವರಿಗೂ ಪರರಿಗೂ ಉಪಕಾರ ಮಾಡುವವನೂ ಆಗುತ್ತಾನೆ

ಶೂಲಯೋಗದಲ್ಲಿ ಹುಟ್ಟಿದವನು ಶೂರನೂ, ಖಡ್ಗದ ಪೆಟ್ಟಿನ ಘಾಯವುಳ್ಳವನೂ ಅರ್ಥಪ್ರಿಯನೂ (ವಧುರುಚಿ ಪಾಠಾಂತರ ) ಧನರಹಿತನೂ ಆಗುತ್ತಾನೆ.

**ಧನವಿರಹಿತಃ ಪಾಖಂಡೀ ಸ್ಯಾದ್ಯುಗೇ ತ್ವಥಗೋಲಕೇ ।**
**ವಿಧನ ಮಲಿನೋಜ್ಞಾನೋಪೇತಃ ಕುಶಿಲ್ಪ್ಯಲ ಸೋಟನಃ ॥**
**ಇತಿ ನಿಗದಿತಯೋಗಾಃ ಸಾರ್ಧಂ ಫಲೈರಿಹ ನಾಭಸಾಃ ।**
**ನಿಯತ ಫಲದಾಶ್ಚಿಂತ್ಯಾ ಹ್ಯೇತೇ ಸಮಸ್ತ ದಶಾಸ್ವಪಿ ॥೧೯॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ನಾಭಸಯೋಗ ನಿರೂಪಣಂ ನಾಮ ದ್ವಾದಶೋಧ್ಯಾಯಃ ॥**

ಯುಗಯೋಗದಲ್ಲಿ ಹುಟ್ಟಿದವನು ಧನರಹಿತನೂ ಪಾಖಂಡೀ ಅಂದರೆ ವೇದಬಾಹ್ಯನೂ ಆಗುವನು.

ಗೋಳಯೋಗದಲ್ಲಿ ಹುಟ್ಟಿದವನು ಧನಹೀನನೂ (ಅಜ್ಞಾನವೆಂದರೆ ತಿಳಿದು ತಿಳಿಯದವನಂತಿರುವ ಮೂರ್ಖನು) ಜ್ಞಾನವಿಲ್ಲದವನೂ ಲೋಕ ನಿಂದ್ಯಕರವಾದ ಅಥವಾ ನಯವಿಲ್ಲದ ಶಿಲ್ಪ ಕೆಲಸ ಗಳನ್ನು ಮಾಡುವವನೂ ಸೋಮಾರಿಯೂ ಅಲೆಯುವ ಸ್ವಭಾವವುಳ್ಳವನೂ ಆಗುತ್ತಾನೆ

ಈ ಅಧ್ಯಾಯದಲ್ಲಿ ನಾಭಸಯೋಗಗಳನ್ನು ಫಲ ಸಹಿತವಾಗಿ ಹೇಳಲ್ಪಟ್ಟಿದೆ. ಈ ಯೋಗಗಳು ಸಕಲ ದಶೆಗಳಲ್ಲಿಯೂ ಸರ್ವಕಾಲದಲ್ಲಿಯೂ ಫಲಪ್ರದವಾಗುವುದರಿಂದ ಚೆನ್ನಾಗಿ ಯೋಚಿಸಿ ನೋಡಿಕೊಳ್ಳತಕ್ಕದ್ದು.

## ॥ ನಾಭಸಯೋಗಗಳು ॥

| ಸಂಖ್ಯಾ | ಮುಖ್ಯ ಭೇದಗಳು | ಯೋಗಗಳ ಹೆಸರು | ಸರ್ವ ಗ್ರಹಗಳಿರಬೇಕಾದ ಸ್ಥಾನ |
|---|---|---|---|
| ೧ | ಆಶ್ರಯ ಯೋಗಗಳು | ರಜ್ಜುಯೋಗ | ೧-೪-೭-೧೦ ಚರ |
| ೨ | | ಮುಸಲಯೋಗ | ೨-೫-೮-೧೧ ಸ್ಥಿರ |
| ೩ | | ನಲಯೋಗ | ೩-೬-೯-೧೨ ದ್ವಿಸ್ವಭಾವ |
| ೪ | ದಲಯೋಗಗಳು | ಸ್ರಗ್ಯೋಗ | ೧-೪-೭-೧೦ ಕೇಂದ್ರಗಳಲ್ಲಿ ಶುಭರಿದ್ದರೆ |
| ೫ | | ಸರ್ಪಯೋಗ | ೧-೪-೭-೧೦ ಪಾಪಗ್ರಹಗಳಿದ್ದರೆ |
| ೬ | ಆಕೃತಿಯೋಗಗಳು | ಗದಾಯೋಗ | (೧) ೧-೪ (೨) ೪-೭ (೩) ೭-೧೦ (೪) ೧೦-೧ರಲ್ಲಿ |
| ೭ | | ಶಕಟಯೋಗ | ಲಗ್ನ ಮತ್ತು ಸಪ್ತಮ |
| ೮ | | ವಿಹಗಯೋಗ | ದಶಮ ಮತ್ತು ಚತುರ್ಥ |
| ೯ | | ಶೃಂಗಾಟಕಯೋಗ | ಲಗ್ನ, ಪಂಚಮ, ನವಮ |
| ೧೦ | | ಹಲಯೋಗ | ಲಗ್ನಾತ್ (೧) ೨-೬-೧೦ (೨) ೩-೭-೧೧ (೩) ೪-೮-೧೨ |
| ೧೧ | | ವಜ್ರಯೋಗ | ೧-೭ರಲ್ಲಿ ಶುಭ ೪-೧೧ರಲ್ಲಿ ಪಾಪ |
| ೧೨ | | ಯವಯೋಗ | ೧-೭ರಲ್ಲಿ ಪಾಪ, ೪-೧೦ರಲ್ಲಿ ಶುಭ |
| ೧೩ | | ಕಮಲಯೋಗ | ೧-೪-೭-೧೧ರಲ್ಲಿ ಶುಭ ಪಾಪ ಮಿಶ್ರ |
| ೧೪ | | ವಾಪೀಯೋಗ | (೧) ೨-೫-೮-೧೧ (೨) ೩-೬-೯-೧೨ರಲ್ಲಿ |
| ೧೫ | | ಯೂಪಯೋಗ | ಲಗ್ನದಿಂದ ೧-೨-೩-೪ರಲ್ಲಿ |
| ೧೬ | | ಶರಯೋಗ | ಲಗ್ನದಿಂದ ೪-೫-೬-೭ರಲ್ಲಿ |
| ೧೭ | | ಶಕ್ತಿಯೋಗ | ಲಗ್ನದಿಂದ ೭-೮-೯-೧೦ರಲ್ಲಿ |
| ೧೮ | | ದಂಡಯೋಗ | ಲಗ್ನದಿಂದ ೧೦-೧೧-೧೨-೧ರಲ್ಲಿ |
| ೧೯ | | ನೌಕಾಯೋಗ | ಲಗ್ನದಿಂದ ೧-೨-೩-೪-೫-೬-೭ |
| ೨೦ | | ಕೂಟಯೋಗ | ಲಗ್ನದಿಂದ ೪-೫-೬-೭-೮-೯-೧೦ |
| ೨೧ | | ಛತ್ರಯೋಗ | ಲಗ್ನದಿಂದ ೭-೮-೯-೧೦-೧೧-೧೨-೧ |
| ೨೨ | | ಚಾಪಯೋಗ | ಲಗ್ನದಿಂದ ೧೦-೧೧-೧೨-೧-೨-೩-೪ |
| ೨೩ | | ಅರ್ಧಚಂದ್ರಯೋಗ | ೨-೩-೫-೬-೮-೯-೧೧-೧೨-ರಲ್ಲಿ ಒಂದೊಂದಾಗಿ ಗ್ರಹರಿದ್ದರೆ |
| ೨೪ | | ಸಮುದ್ರಯೋಗ | ೨-೪-೬-೮-೧೦-೧೨ ಎಲ್ಲಾ ಗ್ರಹರಿದ್ದರೆ |
| ೨೫ | | ಚಕ್ರಯೋಗ | ೧-೩-೫-೭-೯-೧೧ರಲ್ಲಿ ಎಲ್ಲಾ ಗ್ರಹರಿದ್ದರೆ |
| ೨೬ | ಸಂಖ್ಯಾಯೋಗಗಳು | ವಲ್ಲಕೀಯೋಗ | ೭ ರಾಶಿಗಳಲ್ಲಿ ತಪ್ಪದೆ ೭ ಗ್ರಹಗಳಿರಬೇಕು. |
| ೨೭ | | ದಾಮಿನಿಯೋಗ | ೬ ರಾಶಿಗಳಲ್ಲಿ ತಪ್ಪದೆ ೭ ಗ್ರಹಗಳಿರಬೇಕು |
| ೨೮ | | ಪಾಶಯೋಗ | ೫ ರಾಶಿಗಳಲ್ಲಿ " " " |
| ೨೯ | | ಕೇದಾರಯೋಗ | ೪ ರಾಶಿಗಳಲ್ಲಿ " " " |
| ೩೦ | | ತ್ರಿಶೂಲಯೋಗ | ೩ ರಾಶಿಗಳಲ್ಲಿ " " " |
| ೩೧ | | ಯುಗಯೋಗ | ೨ ರಾಶಿಗಳಲ್ಲಿ " " " |
| ೩೨ | | ಗೋಲಯೋಗ | ೧ ರಾಶಿಯಲ್ಲಿ " " " |

॥ ನಾಭಸಯೋಗವೆಂಬ ಹನ್ನೆರಡನೇಯ ಅಧ್ಯಾಯವು ॥

## ॥ ಚಂದ್ರಯೋಗಾಧ್ಯಾಯಃ ॥

**ಅಧಮ ಸಮವರಿಷ್ಠಾನ್ಯರ್ಕ ಕೇಂದ್ರಾದಿ ಸಂಸ್ಥೇ ।**
**ಶಶಿನಿ ವಿನಯ ವಿತ್ತಜ್ಞಾನಧೀ ನೈಪುಣಾನಿ ॥**
**ಅಹನಿ ನಿಶಿ ಚ ಚಂದ್ರೇಸ್ವೇಧಿ ಮಿತ್ರಾಂಶಕೇವಾ ।**
**ಸುರಗುರು ಸಿತದೃಷ್ಟೇ ವಿತ್ತವಾನ್ ಸ್ಯಾತ್ಸುಖೀಚ ॥೧॥**

ಸೂರ್ಯನಿಂದ ಕೇಂದ್ರ, ಪಣಪರ, ಆಪೋಕ್ಲೀಮ ರಾಶಿಗಳಲ್ಲಿ ಚಂದ್ರನಿದ್ದರೆ ವಿನಯಿಯೂ ಧನಶಾಲಿಯೂ ಜ್ಞಾನವಂತನೂ ಬುದ್ಧಿವಂತನೂ ನಿಪುಣನೂ ಆಗುವನು. ಮೇಲಿನ ಫಲವು ಚಂದ್ರನು ರವಿಯ ಕೇಂದ್ರದಲ್ಲಿದ್ದಾಗ ಕನಿಷ್ಠವಾಗಿಯೂ ಪಣಪರದಲ್ಲಿದ್ದಾಗ ಮಧ್ಯಮವಾಗಿಯೂ ಆಪೋಕ್ಲೀಮದಲ್ಲಿದ್ದಾಗ ಉತ್ತಮ ರೀತಿಯಲ್ಲಿಯೂ ಪರಿಣಮಿಸುವುದು. ಹಗಲಿನಲ್ಲಿಯೂ ರಾತ್ರಿಯಲ್ಲಿಯೂ ಚಂದ್ರನು ತನ್ನ ಮತ್ತು ಅಧಿಮಿತ್ರರ ಅಂಶದಲ್ಲಿದ್ದು ಹಗಲಿನಲ್ಲಿ ಗುರುವಿನಿಂದಲೂ ರಾತ್ರಿಯಲ್ಲಿ ಶುಕ್ರನಿಂದಲೂ ನೋಡಲ್ಪಟ್ಟಾಗ ಹುಟ್ಟಿದವನು ಧನವಂತನೂ ಸುಖಿಯೂ ಆಗುವನು.

**ಸೌಮ್ಯೈಃ ಸ್ಮರಾರಿ ನಿಧನೇ ಷ್ವಧಿಯೋಗ ಇಂದೋ ।**
**ಸ್ತಸ್ಮಿಂ ಶ್ಚಮೂಪ ಸಚಿವ ಕ್ಷಿತಿಪಾಲ ಜನ್ಮ ॥**
**ಸಂಪನ್ನ ಸೌಖ್ಯ ವಿಭವಾ ಹತ ಶತ್ರವಶ್ಚ ।**
**ದೀರ್ಘಾಯುಷೋ ವಿಗತ ರೋಗ ಭಯಾಶ್ಚ ಜಾತಾಃ ॥೨॥**

ಚಂದ್ರನ ಸಪ್ತಮ, ಷಷ್ಠ, ಅಷ್ಟಮಗಳಲ್ಲಿ ಸೌಮ್ಯಗ್ರಹರೆಲ್ಲರೂ ಇದ್ದರೆ ಅಧಿಯೋಗವೆಂಬ ಹೆಸರಿನ ಯೋಗ ಉಂಟಾಗುವುದು. ಈ ಯೋಗದಲ್ಲಿ ಹುಟ್ಟಿದವನು ಸೈನ್ಯಾಧಿಕಾರಿ, ಮಂತ್ರಿ, ಇಲ್ಲವೇ ರಾಜನಾಗಿ ಇರುವನು. ಹೀಗೆ ಹುಟ್ಟಿದವನು ಸಂಪತ್ತಿ ಇರುವವನೂ ಸುಖಿಯೂ ವೈಭವ ಶಾಲಿಯೂ ನಷ್ಟ ಶತ್ರುಗಳುಳ್ಳವನೂ ದೀರ್ಘಾಯುವೂ ನಿರೋಗಿಯೂ ನಿರ್ಭಯನೂ ಆಗಿರುತ್ತಾನೆ.

**ಹಿತ್ವಾರ್ಕಂ ಸುನಫಾನಫಾ ಧುರಧುರಾ ಸ್ವಾಂತ್ಯೋಭಯಸ್ಥೈರ್ಗ್ರಹೈಃ ।**
**ಶೀತಾಂಶೋಃ ಕಥಿತೋ ನ್ಯಥಾತು ಬಹುಭಿಃ ಕೇಮದ್ರುಮೋ ನ್ಯೈಸ್ತ್ವಸೌ ॥**
**ಕೇಂದ್ರೇ ಶೀತಕರೇಥವಾ ಗ್ರಹಯುತೇ ಕೇಮದ್ರುಮೋ ನೇಷ್ಯತೇ ।**
**ಕೇಚಿತ್ಕೇಂದ್ರ ನವಾಂಶಕೇಷು ಚ ವದಂತ್ಯುಕ್ತಿಂ ಪ್ರಸಿದ್ಧಾನತೇ ॥೩॥**

ಚಂದ್ರನಿಂದ ದ್ವಿತೀಯ, ದ್ವಾದಶ ಮತ್ತು ಈ ಎರಡು ಸ್ಥಾನಗಳಲ್ಲಿ ಸೂರ್ಯನನ್ನು ಬಿಟ್ಟು ಬಾಕಿ ಉಳಿದ ಕುಜ, ಬುಧ, ಗುರು, ಶುಕ್ರ, ಶನಿಗಳಲ್ಲಿ ಯಾವುದಾದರೊಂದು ಗ್ರಹವು ದ್ವಿತೀಯದಲ್ಲಿದ್ದರೆ ಸುನಫಾ ಯೋಗವೂ ವ್ಯಯದಲ್ಲಿದ್ದರೆ ಅನಫಾ ಯೋಗವೂ ಎರಡೂ ಸ್ಥಾನಗಳಲ್ಲಿದ್ದರೆ ಧುರಧುರಾ ಯೋಗವೂ ಆಗುವುದು. ಹಾಗೆಯೇ ದ್ವಿತೀಯ, ದ್ವಾದಶ ಉಭಯ ರಾಶಿಗಳಲ್ಲಿ ಒಂದು ಗ್ರಹವೂ

ಇಲ್ಲದಿದ್ದರೆ ಕೇಮದ್ರುಮಯೋಗವಾಗುವುದು. ಕೆಲವರು (ಲಗ್ನ ಅಥವಾ ಚಂದ್ರನಿಂದ) ಕೇಂದ್ರದಲ್ಲಿ ಕುಜಾದಿ ಗ್ರಹರಲ್ಲಿ ಯಾವುದಾದರೂ ಒಂದು ಗ್ರಹವು ಇದ್ದರೆ ಕೇಮದ್ರುಮಯೋಗವಾಗುವುದಿಲ್ಲವೆಂತ ಹೇಳುತ್ತಾರೆ. ಮತ್ತೆ ಕೆಲವರು ಕೇಂದ್ರ ನವಾಂಶದಲ್ಲಿ ಗ್ರಹವಿದ್ದರೂ ಈ ಯೋಗವಾಗುವುದಿಲ್ಲವೆಂದೂ ಹೇಳುತ್ತಾರೆ. ಈ ಉಕ್ತಿಯು ಪ್ರಸಿದ್ಧವಲ್ಲ.

> ತ್ರಿಂಶತ್ಸರೂಪಾಸ್ಸುನಫಾನಫಾಖ್ಯಾ: ।
> ಷಷ್ಟಿತ್ರಯಂ ಧೌರುಧುರ ಪ್ರಭೇದ: ॥
> ಇಚ್ಛಾ ವಿಕಲ್ಪೈ: ಕ್ರಮಶೋಭಿನೀಯ ।
> ನೀತೇ ನಿವೃತ್ತಿ: ಪುನರನ್ಯ ನೀತಿ: ॥೪॥

ಒಂದು ಕೂಡಿಸಿದ ಮೂವತ್ತು ಅಂದರೆ ೩೧ ಪ್ರಕಾರವಾಗಿ ಸುನಫಾಯೋಗವೂ, ೩೧ ಪ್ರಕಾರದ ಅನಫಾಯೋಗವೂ, ಅರವತ್ತನ್ನು ಮೂರರಿಂದ ಗುಣಿಸಿದರೆ ೧೮೦ ಪ್ರಕಾರದ ಧುರಧುರಾ ಯೋಗವೂ, ಯೋಗಭೇದಗಳಾಗುವುದು. ಈ ಯೋಗಕಾರಕರಾದ ಗ್ರಹಗಳನ್ನು ಪ್ರಸ್ತಾರಗೊಳಿಸಿದರೆ ಕ್ರಮವಾಗಿ ಯೋಗಭೇದಗಳು ತಿಳಿಯಲ್ಪಡುವುದು.

॥ ಸುನಫಾನಫಾಯೋಗ ಪ್ರಸ್ತಾರ ಕ್ರಮ ॥

| | |
|---|---|
| ನ್ಯಾಸವಿಕಲ್ಪ | ೫/೧ . ೪/೨ . ೩/೩ . ೨/೪ ೧/೫ . |
| ಏಕವಿಕಲ್ಪ | ೫×೧=೫—೧=೫ |
| ದ್ವಿವಿಕಲ್ಪ | ೫×೪=೨೦—೨=೧೦ |
| ತ್ರಿವಿಕಲ್ಪ | ೧೦×೩=೩೦—೩=೧೦ |
| ಚತುರ್ವಿಕಲ್ಪ | ೧೦×೨=೨೦÷೪=೫ |
| ಪಂಚವಿಕಲ್ಪ | ೫×೧=೫÷೫=೧ |
| | ಯೋಗಭೇದಗಳು ೩೧ |

ಈ ಪ್ರಕಾರ ಚಂದ್ರನಿಂದ ದ್ವಿತೀಯದಲ್ಲಿ ಕುಜಾದಿ ಗ್ರಹಗಳಿಂದ ೩೧ ಸುನಫಾಯೋಗಗಳೂ ಚಂದ್ರನಿಂದ ದ್ವಾದಶದಲ್ಲಿ ಕುಜಾದಿ ಗ್ರಹಗಳಿಂದ ೩೧ ಅನಫಾಯೋಗಗಳೂ ಆಗುತ್ತವೆ. ಚಂದ್ರನ ದ್ವಿತೀಯ ದ್ವಾದಶಗಳಲ್ಲಿ ಕುಜಾದಿ ಗ್ರಹಗಳಿಂದ "ಷಷ್ಟಿ ತ್ರಯಂ ಆಶೀತ್ಯಧಿಕಶತಂ ॥ ೬೦×೩=೧೮೦ ಧುರಧುರಾ ಯೋಗಭೇದಗಳು ಉಂಟಾಗುವುದು.

॥ ಸುನಫಾನಫಾಯೋಗ ಭೇದಕ್ರಮ ॥

ಚಂದ್ರನ ದ್ವಿತೀಯದಲ್ಲಿ ಕುಜ ೧, ಬುಧ ೨, ಗುರು ೩, ಶುಕ್ರ ೪, ಶನಿ ೫ ಒಂದೊಂದು ಗ್ರಹರಿಂದಾಗುವ ೫ ಯೋಗಭೇದಗಳು, ಕುಜ ಬುಧ ೧, ಕುಜ ಗುರು ೨, ಕುಜ ಶುಕ್ರ ೩, ಕುಜ ಶನಿ ೪, ಬುಧ ಗುರು ೫, ಬುಧ ಶುಕ್ರ ೬, ಬುಧ ಶನಿ ೭, ಗುರು ಶುಕ್ರ ೮, ಗುರು ಶನಿ ೯, ಶುಕ್ರ ಶನಿ ೧೦. ಎರಡು ಗ್ರಹರಿಂದಾಗುವ ೧೦ ಯೋಗಭೇದಗಳು. ಕುಜ ಬುಧ ಗುರು ೧, ಕುಜ

ಬುಧ ಶುಕ್ರ ೨, ಕುಜ ಬುಧ ಶನಿ ೩, ಕುಜ ಗುರು ಶುಕ್ರ ೪, ಕುಜ ಗುರು ಶನಿ ೫, ಕುಜ ಶುಕ್ರ ಶನಿ ೬, ಬುಧ ಗುರು ಶುಕ್ರ ೭, ಬುಧ ಗುರು ಶನಿ ೮, ಬುಧ ಶುಕ್ರ ಶನಿ ೯, ಗುರು ಶುಕ್ರ ಶನಿ ೧೦ ಮೂರು ಗ್ರಹರಿಂದಾಗುವ ೧೦ ಯೋಗಭೇದಗಳು ಕುಜ ಬುಧ ಗುರು ಶುಕ್ರ ೧, ಕುಜ ಬುಧ ಗುರು ಶನಿ ೨, ಕುಜ ಗುರು ಶುಕ್ರ ಶನಿ ೩, ಕುಜ ಬುಧ ಶುಕ್ರ ಶನಿ ೪, ಬುಧ ಗುರು ಶುಕ್ರ ಶನಿ ೫ ಹೀಗೆ ನಾಲ್ಕು ಗ್ರಹರಿಂದಾಗುವ ೫ ಯೋಗಭೇದಗಳು. ಕುಜ ಬುಧ ಗುರು ಶುಕ್ರ ಶನಿ ೧, ಐದು ಗ್ರಹರಿಂದಾಗುವ ೧ ಯೋಗಭೇದ, ಎಲ್ಲಾ ಯೋಗಗಳನ್ನು ಕೂಡಿಸಿ ೩೧ ಯೋಗಭೇದ ಗಳಾಗುವುದು ಹೀಗೆಯೇ ಚಂದ್ರನ ದ್ವಾದಶದಲ್ಲಿ ಗ್ರಹಗಳಿರುವುದರಿಂದ ೩೧ ಯೋಗಭೇದ ಗಳಾಗುವುದು

**॥ ಧುರಧುರಾಯೋಗಭೇದ ಕ್ರಮ ॥**

| ಸಂಖ್ಯಾ | ಚಂದ್ರನ ದ್ವಿತೀಯದಲ್ಲಿ | ಚಂದ್ರನ ದ್ವಾದಶದಲ್ಲಿ | ಯೋಗಸಂಖ್ಯಾ |
|---|---|---|---|
| ೧ | ೧ ಗ್ರಹ | ೧ ಗ್ರಹ | ೨೦ |
| ೨ | ೨ ಗ್ರಹ | ೧ ಗ್ರಹ | ೩೦ |
| ೩ | ೧ ಗ್ರಹ | ೨ ಗ್ರಹ | ೩೦ |
| ೪ | ೩ ಗ್ರಹ | ೧ ಗ್ರಹ | ೨೦ |
| ೫ | ೧ ಗ್ರಹ | ೩ ಗ್ರಹ | ೨೦ |
| ೬ | ೪ ಗ್ರಹ | ೧ ಗ್ರಹ | ೫ |
| ೭ | ೧ ಗ್ರಹ | ೪ ಗ್ರಹ | ೫ |
| ೮ | ೨ ಗ್ರಹ | ೨ ಗ್ರಹ | ೩೦ |
| ೯ | ೩ ಗ್ರಹ | ೨ ಗ್ರಹ | ೧೦ |
| ೧೦ | ೨ ಗ್ರಹ | ೩ ಗ್ರಹ | ೧೦ |
| | | ಯೋಗಸಂಖ್ಯಾ | ೧೮೦ |

ಇದೇ ಕ್ರಮದಲ್ಲಿ ಚಂದ್ರನ ದ್ವಿತೀಯ ಮತ್ತು ದ್ವಾದಶದಲ್ಲಿ ಕುಜಾದಿ ಗ್ರಹಗಳಿರುವುದರಿಂದ ಒಂದು ನೂರ ಎಂಬತ್ತು ಯೋಗಭೇದಗಳಾಗುವುದು ಹ್ಯಾಗೆಂದರೆ ಚಂದ್ರನ ದ್ವಿತೀಯದಲ್ಲಿ ಒಂದು, ದ್ವಾದಶದಲ್ಲಿ ಒಂದು ಗ್ರಹವಿದ್ದರೆ ೨೦ ಭೇದಗಳಾಗುವುದು ಭೇದಕ್ರಮ ಕುಜ, ಬುಧ ೧, ಬುಧ, ಕುಜ ೨, ಕುಜ, ಗುರು ೩, ಗುರು, ಕುಜ ೪, ಕುಜ, ಶುಕ್ರ ೫, ಶುಕ್ರ, ಕುಜ ೬, ಕುಜ, ಶನಿ ೭, ಶನಿ, ಕುಜ ೮, ಬುಧ, ಗುರು ೯, ಗುರು, ಬುಧ ೧೦, ಬುಧ, ಶುಕ್ರ ೧೧, ಶುಕ್ರ, ಬುಧ ೧೨, ಬುಧ, ಶನಿ ೧೩, ಶನಿ, ಬುಧ ೧೪, ಗುರು, ಶುಕ್ರ ೧೫, ಶುಕ್ರ, ಗುರು ೧೬, ಶನಿ ೧೭, ಶನಿ, ಗುರು ೧೮, ಶುಕ್ರ, ಶನಿ ೧೯, ಶನಿ, ಶುಕ್ರ ೨೦. ಹೀಗೆ ೨೦ ಭೇದಗಳಾಗುವುದು ಒಂದು ಗ್ರಹ ದ್ವಿತೀಯದಲ್ಲಿ ಎರಡು ಗ್ರಹ ದ್ವಾದಶದಲ್ಲಿ ಎರಡು ಗ್ರಹ ದ್ವಿತೀಯದಲ್ಲಿ ಒಂದು ಗ್ರಹ ದ್ವಾದಶದಲ್ಲಿ ಈ ಪ್ರಕಾರ ೬೦ ಯೋಗಭೇದಗಳಾಗುವುದು. ಕುಜ, ಬುಧ, ಗುರು ೧ ಬುಧ, ಗುರು, ಕುಜ ೨ ಗುರು, ಶುಕ್ರ, ಬುಧ ೩, ಬುಧ, ಶುಕ್ರ, ಕುಜ ೪. ಕುಜ, ಬುಧ, ಶನಿ ೫ ಬುಧ, ಶನಿ, ಕುಜ ೬ ಕುಜ, ಗುರು, ಶುಕ್ರ ೭. ಗುರು, ಶುಕ್ರ, ಕುಜ ೮ ಕುಜ, ಗುರು, ಶನಿ ೯ ಗುರು, ಶನಿ, ಕುಜ ೮. ಕುಜ, ಗುರು, ಶನಿ ೧೦ ಕುಜ, ಶುಕ್ರ, ಶನಿ ೧೧ ಶುಕ್ರ, ಶನಿ, ಕುಜ ೧೨ ಬುಧ, ಕುಜ, ಗುರು ೧೩. ಗುರು, ಕುಜ, ಬುಧ ೧೪. ಬುಧ, ಕುಜ, ಶುಕ್ರ ೧೫ ಕುಜ, ಶುಕ್ರ, ಬುಧ ೧೬ ಬುಧ, ಕುಜ, ಶನಿ ೧೭. ಕುಜ, ಬುಧ, ಶನಿ ೧೮. ಬುಧ, ಗುರು, ಶುಕ್ರ ೧೯ ಗುರು,

ಶುಕ್ರ, ಬುಧ ೨೦. ಬುಧ, ಗುರು, ಶನಿ ೨೧. ಗುರು, ಶನಿ, ಬುಧ ೨೨. ಬುಧ, ಶುಕ್ರ, ಶನಿ ೨೩. ಶುಕ್ರ, ಶನಿ, ಬುಧ ೨೪. ಗುರು, ಕುಜ, ಬುಧ ೨೫. ಕುಜ, ಬುಧ, ಗುರು ೨೬. ಗುರು, ಕುಜ, ಶುಕ್ರ ೨೭. ಕುಜ, ಶುಕ್ರ, ಗುರು ೨೮. ಗುರು, ಕುಜ, ಶನಿ ೨೯. ಕುಜ, ಶನಿ, ಗುರು ೩೦. ಗುರು, ಬುಧ, ಶುಕ್ರ ೩೧. ಬುಧ, ಶುಕ್ರ, ಗುರು ೩೨, ಗುರು, ಬುಧ, ಶನಿ ೩೩. ಬುಧ, ಶನಿ, ಗುರು ೩೪. ಗುರು, ಶುಕ್ರ, ಶನಿ ೩೫. ಶುಕ್ರ, ಶನಿ, ಗುರು ೩೬. ಶುಕ್ರ, ಕುಜ, ಬುಧ ೩೭. ಕುಜ, ಬುಧ, ಶುಕ್ರ ೩೮. ಶುಕ್ರ, ಕುಜ, ಗುರು ೩೯. ಕುಜ, ಗುರು, ಶುಕ್ರ ೪೦. ಶುಕ್ರ, ಕುಜ, ಶನಿ ೪೧. ಕುಜ, ಶನಿ, ಶುಕ್ರ ೪೨. ಶುಕ್ರ, ಬುಧ, ಗುರು ೪೩ ಬುಧ, ಗುರು, ಶುಕ್ರ ೪೪ ಶುಕ್ರ, ಬುಧ, ಶನಿ ೪೫. ಬುಧ, ಶನಿ, ಶುಕ್ರ ೪೬. ಶುಕ್ರ, ಗುರು, ಶನಿ ೪೭. ಗುರು, ಶನಿ, ಶುಕ್ರ ೪೮ ಶನಿ, ಕುಜ, ಬುಧ ೪೯. ಕುಜ, ಬುಧ. ಶನಿ ೫೦. ಶನಿ, ಕುಜ, ಗುರು ೫೧. ಕುಜ, ಗುರು, ಶನಿ ೫೨. ಶನಿ, ಕುಜ, ಶುಕ್ರ ೫೩. ಕುಜ, ಶುಕ್ರ, ಶನಿ ೫೪ ಶನಿ, ಬುಧ, ಗುರು ೫೫. ಬುಧ, ಗುರು, ಶನಿ ೫೬. ಶನಿ, ಬುಧ, ಶುಕ್ರ ೫೭ ಬುಧ, ಶುಕ್ರ, ಶನಿ ೫೮. ಶನಿ, ಗುರು, ಶುಕ್ರ ೫೯ ಗುರು, ಶುಕ್ರ, ಶನಿ ೬೦. ಹೀಗೆ ಎಲ್ಲವನ್ನು ಕೂಡಿಸಿ ೮೦ ಯೋಗಭೇದಗಳಾಗುವುದು.

ಒಂದು ಗ್ರಹ ದ್ವಿತೀಯದಲ್ಲಿ ಮೂರು ಗ್ರಹ ದ್ವಾದಶದಲ್ಲಿ ಮೂರು ಗ್ರಹ ದ್ವಿತೀಯದಲ್ಲಿ ಒಂದು ಗ್ರಹ ದ್ವಾದಶದಲ್ಲಿ ಹೀಗೆ ನಾಲ್ಕನೆ ಭೇದ ಈ ಪ್ರಕಾರವಾಗಿ, ಕುಜ, ಬುಧ, ಗುರು, ಶುಕ್ರ ೧. ಬುಧ, ಗುರು, ಶುಕ್ರ, ಕುಜ ೨. ಕುಜ, ಬುಧ, ಗುರು, ಶನಿ ೩. ಬುಧ, ಗುರು, ಶನಿ, ಕುಜ ೪. ಕುಜ, ಬುಧ, ಶುಕ್ರ, ಶನಿ ೫. ಬುಧ, ಶುಕ್ರ, ಶನಿ, ಕುಜ ೬. ಕುಜ, ಗುರು, ಶುಕ್ರ, ಶನಿ ೭. ಗುರು, ಶುಕ್ರ, ಶನಿ, ಕುಜ ೮. ಬುಧ, ಕುಜ, ಗುರು, ಶುಕ್ರ ೯. ಕುಜ, ಗುರು, ಶುಕ್ರ, ಬುಧ ೧೦. ಬುಧ, ಕುಜ, ಗುರು, ಶನಿ ೧೧. ಕುಜ, ಗುರು, ಶನಿ, ಬುಧ ೧೨. ಬುಧ, ಕುಜ, ಶುಕ್ರ, ಶನಿ ೧೩. ಕುಜ, ಶುಕ್ರ, ಶನಿ, ಬುಧ ೧೪. ಬುಧ, ಗುರು, ಶುಕ್ರ, ಶನಿ ೧೫. ಗುರು, ಶುಕ್ರ, ಶನಿ, ಬುಧ ೧೬ ಗುರು, ಕುಜ, ಬುಧ, ಶುಕ್ರ ೧೭ ಕುಜ, ಬುಧ, ಶುಕ್ರ, ಗುರು ೧೮. ಗುರು, ಕುಜ, ಬುಧ, ಶನಿ ೧೯. ಕುಜ, ಬುಧ, ಶನಿ, ಗುರು ೨೦. ಇವೆಲ್ಲವೂ ಸೇರಿ ೧೦೦ ಆಯಿತು. ಗುರು, ಕುಜ, ಶುಕ್ರ, ಶನಿ ೧. ಕುಜ, ಶುಕ್ರ, ಶನಿ, ಗುರು ೨. ಗುರು, ಬುಧ, ಶುಕ್ರ, ಶನಿ ೩. ಬುಧ, ಶುಕ್ರ, ಶನಿ, ಗುರು ೪. ಶುಕ್ರ, ಕುಜ, ಬುಧ, ಗುರು ೫ ಕುಜ, ಬುಧ, ಗುರು, ಶುಕ್ರ ೬. ಶುಕ್ರ, ಕುಜ, ಬುಧ, ಶನಿ ೭. ಕುಜ, ಬುಧ, ಶನಿ, ಶುಕ್ರ ೮. ಶುಕ್ರ, ಕುಜ, ಗುರು, ಶನಿ ೯. ಕುಜ, ಗುರು, ಶನಿ, ಶುಕ್ರ ೧೦. ಶುಕ್ರ, ಬುಧ, ಗುರು, ಶನಿ ೧೧. ಬುಧ, ಗುರು, ಶುಕ್ರ, ಶನಿ ೧೨. ಶನಿ, ಕುಜ, ಬುಧ, ಗುರು ೧೩. ಕುಜ, ಬುಧ, ಗುರು, ಶನಿ ೧೪. ಶನಿ, ಕುಜ, ಬುಧ, ಶುಕ್ರ ೧೫. ಕುಜ, ಬುಧ, ಶುಕ್ರ, ಶನಿ ೧೬. ಶನಿ, ಕುಜ, ಗುರು, ಶುಕ್ರ ೧೭, ಕುಜ, ಬುಧ, ಶುಕ್ರ, ಶನಿ ೧೮. ಶನಿ, ಬುಧ, ಗುರು, ಶುಕ್ರ ೧೯. ಬುಧ, ಗುರು, ಶುಕ್ರ, ಶನಿ ೨೦. ಇವೆಲ್ಲವೂ ಸೇರಿ ೧೨೦ ಆಯಿತು.

ಒಂದು ಗ್ರಹ ದ್ವಿತೀಯದಲ್ಲಿ ನಾಲ್ಕು ಗ್ರಹ ದ್ವಾದಶದಲ್ಲಿ, ನಾಲ್ಕು ಗ್ರಹ ದ್ವಿತೀಯದಲ್ಲಿ ಒಂದು ಗ್ರಹ ದ್ವಾದಶದಲ್ಲಿ ಈ ಪ್ರಕಾರವಾಗಿ, ಕುಜ, ಬುಧ, ಗುರು, ಶುಕ್ರ, ಶನಿ ೧. ಬುಧ, ಗುರು, ಶುಕ್ರ, ಶನಿ, ಕುಜ ೨. ಬುಧ, ಕುಜ, ಗುರು, ಶುಕ್ರ, ಶನಿ ೩. ಕುಜ, ಗುರು, ಶುಕ್ರ, ಶನಿ, ಬುಧ ೪, ಗುರು, ಕುಜ, ಬುಧ, ಶುಕ್ರ, ಶನಿ ೫, ಕುಜ, ಬುಧ, ಶುಕ್ರ, ಶನಿ, ಗುರು ೬ ಶುಕ್ರ, ಕುಜ, ಬುಧ, ಗುರು, ಶನಿ ೭. ಕುಜ, ಬುಧ, ಗುರು, ಶನಿ, ಶುಕ್ರ ೮. ಶನಿ, ಕುಜ, ಬುಧ, ಗುರು, ಶುಕ್ರ ೯. ಕುಜ, ಬುಧ, ಗುರು, ಶುಕ್ರ, ಶನಿ ೧೦. ಇವೆಲ್ಲವೂ ಸೇರಿ ೧೩೦ ಆಯಿತು.

ಇನ್ನು ಮುಂದೆ ಎರಡು ಗ್ರಹ ದ್ವಾದಶದಲ್ಲಿ ಎರಡು ಗ್ರಹ ದ್ವಿತೀಯದಲ್ಲಿ ಈ ಪ್ರಕಾರ ಕುಜ, ಬುಧ, ಗುರು, ಶುಕ್ರ ೧. ಗುರು, ಶುಕ್ರ, ಕುಜ, ಬುಧ ೨. ಕುಜ, ಬುಧ, ಗುರು, ಶನಿ ೩ ಗುರು,

ಶನಿ, ಕುಜ, ಬುಧ ೪ ಕುಜ, ಬುಧ, ಶುಕ್ರ, ಶನಿ ೫ ಶುಕ್ರ, ಶನಿ, ಕುಜ, ಬುಧ ೬ ಕುಜ, ಗುರು, ಶುಕ್ರ, ಬುಧ ೭ ಶುಕ್ರ, ಬುಧ, ಕುಜ, ಗುರು ೮. ಕುಜ, ಗುರು, ಬುಧ, ಶನಿ ೯. ಬುಧ, ಶನಿ, ಕುಜ, ಗುರು ೧೦ ಕುಜ, ಗುರು, ಶುಕ್ರ, ಶನಿ ೧೧. ಶುಕ್ರ, ಶನಿ, ಕುಜ, ಗುರು ೧೨. ಕುಜ, ಶುಕ್ರ, ಬುಧ, ಗುರು ೧೩ ಬುಧ, ಗುರು, ಕುಜ, ಶುಕ್ರ ೧೪. ಕುಜ, ಶುಕ್ರ, ಬುಧ, ಶನಿ ೧೫. ಬುಧ, ಶನಿ, ಕುಜ, ಶುಕ್ರ ೧೬. ಕುಜ, ಶುಕ್ರ, ಗುರು, ಶನಿ ೧೭. ಗುರು, ಶನಿ, ಕುಜ, ಶುಕ್ರ ೧೮. ಬುಧ, ಗುರು, ಕುಜ, ಶನಿ ೧೯. ಕುಜ, ಶನಿ, ಬುಧ, ಗುರು ೨೦. ಇವೆಲ್ಲವೂ ಕೂಡಿಸಿ ೧೫೦ ಆಯಿತು. ಕುಜ, ಶನಿ, ಬುಧ, ಶುಕ್ರ ೧. ಬುಧ, ಶುಕ್ರ, ಕುಜ, ಶನಿ ೨ ಕುಜ, ಶನಿ, ಗುರು, ಶುಕ್ರ ೩. ಗುರು, ಶುಕ್ರ, ಕುಜ, ಶನಿ ೪ ಬುಧ, ಗುರು, ಶುಕ್ರ, ಶನಿ ೫. ಶುಕ್ರ, ಶನಿ, ಬುಧ, ಗುರು ೬. ಬುಧ, ಶುಕ್ರ, ಗುರು, ಶನಿ ೭. ಗುರು, ಶನಿ, ಬುಧ, ಶುಕ್ರ ೮. ಗುರು, ಶುಕ್ರ, ಬುಧ, ಶನಿ ೯. ಬುಧ, ಶನಿ, ಗುರು, ಶುಕ್ರ ೧೦ ಇವೆಲ್ಲವೂ ಕೂಡಿಸಿ ೧೬೦ ಆಯಿತು.

ಎರಡು ಗ್ರಹ ದ್ವಿತೀಯದಲ್ಲಿ ಮೂರು ಗ್ರಹ ದ್ವಾದಶದಲ್ಲಿ ಮೂರು ಗ್ರಹ ದ್ವಿತೀಯದಲ್ಲಿ ಎರಡು ಗ್ರಹ ದ್ವಾದಶದಲ್ಲಿ ಹ್ಯಾಗಂದರೆ, ಕುಜ, ಬುಧ, ಗುರು, ಶುಕ್ರ, ಶನಿ ೧. ಗುರು, ಶುಕ್ರ, ಶನಿ, ಕುಜ, ಬುಧ ೨ ಕುಜ, ಗುರು, ಬುಧ, ಶುಕ್ರ, ಶನಿ, ೩. ಬುಧ, ಶುಕ್ರ, ಶನಿ, ಕುಜ, ಗುರು ೪ ಕುಜ, ಶುಕ್ರ, ಬುಧ, ಗುರು, ಶನಿ ೫ ಬುಧ, ಗುರು, ಶನಿ, ಕುಜ, ಶುಕ್ರ ೬. ಕುಜ, ಶನಿ, ಬುಧ, ಗುರು, ಶುಕ್ರ ೭. ಬುಧ, ಗುರು, ಶುಕ್ರ, ಕುಜ, ಶನಿ ೮. ಬುಧ, ಗುರು, ಕುಜ, ಶುಕ್ರ, ಶನಿ ೯. ಕುಜ, ಶುಕ್ರ, ಶನಿ, ಬುಧ, ಗುರು ೧೦. ಇವೆಲ್ಲವೂ ಕೂಡಿಸಿ ೧೭೦ ಆಯಿತು.

ಬುಧ, ಶುಕ್ರ, ಕುಜ, ಗುರು, ಶನಿ ೧ ಕುಜ, ಗುರು, ಶನಿ, ಬುಧ, ಶುಕ್ರ ೨. ಬುಧ, ಶನಿ, ಕುಜ, ಗುರು, ಶುಕ್ರ ೩. ಕುಜ, ಗುರು, ಶುಕ್ರ, ಬುಧ, ಶನಿ ೪. ಗುರು, ಶುಕ್ರ, ಕುಜ, ಬುಧ, ಶನಿ ೫. ಕುಜ, ಬುಧ, ಶನಿ, ಗುರು, ಶುಕ್ರ ೬. ಗುರು, ಶನಿ, ಕುಜ, ಬುಧ, ಶುಕ್ರ ೭ ಕುಜ, ಬುಧ, ಶುಕ್ರ, ಗುರು, ಶನಿ ೮. ಶುಕ್ರ, ಶನಿ, ಕುಜ, ಬುಧ, ಗುರು ೯. ಕುಜ, ಬುಧ, ಗುರು, ಶುಕ್ರ, ಶನಿ ೧೦. ಇವೆಲ್ಲವೂ ೧೮೦ ಪ್ರಕಾರವಾದ ಧುರಧುರಾಯೋಗ ಭೇದಗಳು ಆಗುತ್ತವೆ.

> ಸ್ವಯಮಧಿ ಗತವಿತ್ತಃ ಪಾರ್ಥಿವ ಸ್ತತ್ಸಮೋ ವಾ ।
> ಭವತಿ ಹಿ ಸುನಫಾಯಾಂ ಧೀಧನ ಖ್ಯಾತಿಮಾಂಶ್ಚ ॥
> ಪ್ರಭುರಗದ ಶರೀರಃ ಶೀಲವಾನ್ ಖ್ಯಾತ ಕೀರ್ತಿ ।
> ರ್ವಿಷಯ ಸುಖಸುವೇಷೋ ನಿರ್ವೃತಶ್ಚಾನಫಾಯಾಂ ॥೫॥

ಸುನಫಾಯೋಗದಲ್ಲಿ ಹುಟ್ಟಿದವನು ತಾನಾಗಿಯೇ ಕೂಡಿ ಬಂದ ಧನ ಉಳ್ಳವನೂ, ರಾಜನೂ ಅಥವಾ ರಾಜಸದೃಶನೂ ಬುದ್ಧಿ ಮತ್ತು ಧನಗಳುಳ್ಳವನೂ ಖ್ಯಾತಿವಂತನೂ ಆಗಿರುತ್ತಾನೆ ಅನಫಾಯೋಗದಲ್ಲಿ ಹುಟ್ಟಿದವನು ಪ್ರಭುವೂ ನಿರೋಗ ಶರೀರ ಉಳ್ಳವನೂ ಶೀಲವಂತನೂ ವಿಖ್ಯಾತವಾದ ಕೀರ್ತಿಯುಳ್ಳವನೂ ವಿಷಯಸುಖ ಉಳ್ಳವನೂ ಅಲಂಕೃತಕಾಯನೂ ಮನೋ ದುಃಖಗಳಿಲ್ಲದವನೂ ಆಗಿರುತ್ತಾನೆ

> ಉತ್ಪನ್ನ ಭೋಗಸುಖ ಭುಗ್ಧನ ವಾಹನಾಢ್ಯ ।
> ಸ್ತ್ಯಾಗಾನ್ವಿತೋ ಧುರಧುರಾ ಪ್ರಭವಸ್ಸು ಭೃತ್ಯಃ ॥

**ಕೇಮದ್ರುಮೇ ಮಲಿನ ದುಃಖಿತ ನೀಚ ನಿಸ್ವಾಃ ।**
**ಪ್ರೇಷ್ಯಾಃ ಖಲಾಶ್ಚ ನೃಪತೇ ರಪಿವಂಶ ಜಾತಾಃ ॥೬॥**

ಧುರಧುರಾಯೋಗದಲ್ಲಿ ಹುಟ್ಟಿದವನು ಲೋಕದಲ್ಲಿ ಸಕಲ ವಿಧ ಸುಖಭೋಗಗಳನ್ನು ಉತ್ಪತ್ತಿ ಮಾಡಿ ಅನುಭವಿಸುವವನೂ ಧನವಾಹನಾದಿಗಳುಳ್ಳವನೂ ತ್ಯಾಗಶೀಲನೂ ಒಳ್ಳೆಯ ಸೇವಕರುಳ್ಳವನೂ ಆಗಿರುತ್ತಾನೆ

ಕೇಮದ್ರುಮ ಯೋಗದಲ್ಲಿ ಹುಟ್ಟಿದವನು ಮಲಿನನೂ ದುಃಖಿಯೂ ನೀಚನೂ ದರಿದ್ರನೂ ಭೃತ್ಯನೂ ದುಷ್ಟ ನಡತೆಯುಳ್ಳವನೂ ಆಗಿರುತ್ತಾನೆ. ರಾಜವಂಶದಲ್ಲಿ ಹುಟ್ಟಿದವನಾದರೂ ಹೀಗೆಯೇ ಆಗುತ್ತಾನೆ.

**ಉತ್ಸಾಹ ಶೌರ್ಯಧನ ಸಾಹಸವಾನ್ ಮಹೀಜಃ ।**
**ಸೌಮ್ಯಃ ಪಟುಃ ಸುವಚನೋ ನಿಪುಣಃ ಕಲಾಸು ॥**
**ಜೀವೋರ್ಥ ಧರ್ಮ ಸುಖಭುಙ್ನೃಪ ಪೂಜಿತಶ್ಚ ।**
**ಕಾಮೀಭೃಗುರ್ಬಹುಧನೋ ವಿಷಯೋಪ ಭೋಕ್ತಾ ॥೭॥**

ಈ ಮೇಲೆ ಹೇಳಿದ ಸುನಫಾ, ಅನಫಾ, ಧುರಧುರಾ ಯೇಗಗಳಲ್ಲಿ ಯಾವ ಯೋಗಕ್ಕಾದರೂ ಕುಜನು ಯೋಗಕಾರಕನಾಗಿದ್ದರೆ, ಉತ್ಸಾಹ, ಶೌರ್ಯ, ಧನಸಾಹಸಗಳುಳ್ಳವನಾಗುವನು. ಬುಧನು ಯೋಗಕಾರಕನಾಗಿದ್ದರೆ ಚಟುವಟಿಕೆಯುಳ್ಳವನೂ ಚೆನ್ನಾಗಿ ಮಾತನಾಡುವವನೂ ಕಲೆಗಳಲ್ಲಿ ನಿಪುಣನೂ ಆಗುವನು. ಗುರುವು ಯೋಗಕಾರಕನಾಗಿದ್ದರೆ ಧನವಂತನೂ ಧರ್ಮವಂತನೂ ಸುಖಭೋಗಿಯೂ ರಾಜಪೂಜಿತನೂ ಆಗುವನು. ಶುಕ್ರನು ಯೋಗಕಾರಕನಾಗಿದ್ದರೆ ಕಾಮಿಯೂ ಹೆಚ್ಚಾದ ಧನವಂತನೂ ಇಂದ್ರಿಯ ಸುಖವನ್ನನುಭವಿಸುವವನೂ ಆಗುವನು.

**ಪರವಿಭವ ಪರಿಚ್ಛದೋಪ ಭೋಕ್ತಾ ।**
**ರವಿತನಯೋ ಬಹುಕಾರ್ಯಕೃದ್ಗಣೇಶಃ ॥**
**ಅಶುಭ ಕೃದುಡುಪೋಹ್ನಿ ದೃಶ್ಯಮೂರ್ತಿ ।**
**ರ್ಗಳಿತ ತನುಶ್ಚ ಶುಭೋನ್ಯ ಥಾನ್ಯದೂಹ್ಯಮ್ ॥೮॥**

ಶನಿಯು ಯೋಗಕಾರಕನಾಗಿದ್ದರೆ ಇತರರ ವೈಭವೋಪಕರಣಗಳನ್ನು ಉಪಯೋಗಿಸುವವನೂ ಅನೇಕ ಕೆಲಸಗಳನ್ನು ಮಾಡತಕ್ಕವನೂ ಸ್ವಸಮೂಹಕ್ಕೆ ಅಧಿಪತಿಯೂ ಆಗುವನು. ಇದರಲ್ಲಿ ಎರಡು ಮೂರು ಗ್ರಹಗಳು ಯೋಗಕಾರಕರಾಗಿದ್ದರೆ ಅವರವರಿಗೆ ಹೇಳಿದ ಎಲ್ಲಾ ಫಲಗಳೂ ಅನುಭವಕ್ಕೆ ಬರುವುದು ಇಲ್ಲಿ ಹಗಲು ಹುಟ್ಟಿದವನಿಗೆ (ದೃಶ್ಯಾರ್ಧ ಮೂರ್ತಿ) ಹಗಲು ಕಾಣುವ ಚಂದ್ರನು ಅಶುಭಫಲವನ್ನು ಕೊಡುವನು (ಅದೃಶ್ಯಾರ್ಧ ಮೂರ್ತಿ) ಹಗಲು ಕಾಣದಿರುವ ಚಂದ್ರನು ಶುಭಫಲವನ್ನು ಕೊಡುವನು. ರಾತ್ರಿಯಲ್ಲಿ ಹುಟ್ಟಿದವನಿಗೆ ರಾತ್ರಿ ಕಾಣುವ ಚಂದ್ರನು ಶುಭ ಫಲವನ್ನು ಕೊಡುವನು. ರಾತ್ರಿಯಲ್ಲಿ ಕಾಣದಿರುವ ಚಂದ್ರನು ಅಶುಭ ಫಲವನ್ನು ಕೊಡುವನು.

ಲಗ್ನಾದತೀವ ವಸುಮಾನ್ ವಸುಮಾನ್ ಶಶಾಂಕಾ ।
ತ್ಸೌಮ್ಯಗ್ರಹೈ ರುಪಚಯೋಪ ಗತೈಸ್ಸಮಸ್ತೈಃ ॥
ದ್ವಾಭ್ಯಾಂ ಸಮೋಲ್ಪ ವಸುಮಾಂಶ್ಚ ತದೂನತಾಯಾ ।
ಮನ್ಯೇಷು ಸತ್ಸ್ವಪಿ ಫಲೇಷ್ವಿದ ಮುತ್ಕಟೇನ ॥೯॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಚಾಂದ್ರಯೋಗ ನಿರೂಪಣಂ ನಾಮ ತ್ರಯೋದಶೋಧ್ಯಾಯಃ ॥

ಲಗ್ನದಿಂದ ಉಪಚಯ ರಾಶಿಗಳಲ್ಲಿ ಸೌಮ್ಯಗ್ರಹರೆಲ್ಲರೂ ಇದ್ದರೆ ಅತಿ ವಸುಮತಿ ಯೋಗವೂ ಚಂದ್ರನಿಂದ ಉಪಚಯ ರಾಶಿಗಳಲ್ಲಿ ಸೌಮ್ಯ ಗ್ರಹರೆಲ್ಲರೂ ಇದ್ದರೆ ವಸುಮತಿ ಯೋಗವೂ ಈ ಉಪಚಯ ರಾಶಿಗಳಲ್ಲಿ ಎರಡು ಗ್ರಹರಿದ್ದರೆ ಸಮ ವಸುಮತಿ ಯೋಗವೂ ಒಂದೇ ಗ್ರಹವಿದ್ದರೆ ಅಲ್ಪ ವಸುಮತಿ ಯೋಗವೂ ಸಂಭವಿಸುವುದು. ವಸುಮತಿ ಯೋಗವೆಂದರೆ ಸಂಪತ್ತಿಯ ಯೋಗವೆಂದೂ ಕೇಮದ್ರುಮಾದಿ ಇತರ ಯೋಗಗಳಿಂದುಂಟಾಗುವ ಎಷ್ಟು ಅಶುಭಫಲಗಳಿದ್ದರೂ ಈ ಯೋಗವಿದ್ದರೆ ಅಧಿಕವಾಗಿ ಶುಭಫಲಗಳುಂಟಾಗುವುದೆಂದು ತಿಳಿಯತಕ್ಕದ್ದು.

॥ ಚಾಂದ್ರಯೋಗವೆಂಬ ಹದಿಮೂರನೇಯ ಅಧ್ಯಾಯವು ॥

## ॥ ದ್ವಿಗ್ರಹಯೋಗಾಧ್ಯಾಯಃ ॥

ತಿಗ್ಮಾಂಶುರ್ಜನಯತ್ಯುಷೇಶ ಸಹಿತೋ ಯಂತ್ರಾಶ್ಮಕಾರಂ ನರಂ ।
ಭೌಮೇ ಸಾಘರತಂ ಬುಧೇನ ನಿಪುಣಂ ಧೀಕೀರ್ತಿ ಸೌಖ್ಯಾನ್ವಿತಂ ॥
ಕ್ರೂರಂವಾಕ್ಪತಿನಾನ್ಯ ಕಾರ್ಯನಿರತಂ ಶುಕ್ರೇಣ ರಂಗಾಯುಧ್ಯೈ ।
ರ್ಲಬ್ಧಸ್ವಂ ರವಿಜೇನ ಧಾತು ಕುಶಲಂ ಭಾಂಡ ಪ್ರಕಾರೇಷುವಾ ॥೧॥

ಸೂರ್ಯನು ಚಂದ್ರನಿಂದ ಕೂಡಿದ್ದರೆ ಕರ್ಮಗಳನ್ನೂ ಕಲ್ಲಿನ ಕೆಲಸ ಮಾಡುವವನೂ, ಕುಜನಿಂದ ಕೂಡಿದ್ದರೆ ಪಾಪಕರ್ಮಗಳನ್ನು ಮಾಡುವವನೂ, ಬುಧನಿಂದ ಕೂಡಿದ್ದರೆ ಕಾರ್ಯದಲ್ಲಿ ಸೂಕ್ಷ್ಮ ಬುದ್ಧಿಯುಳ್ಳವನೂ ಬುದ್ಧಿ, ಕೀರ್ತಿ, ಸುಖಗಳಿಂದ ಕೂಡಿದವನೂ ಗುರುವಿನಿಂದ ಕೂಡಿದ್ದರೆ ಕ್ರೂರ ಸ್ವಭಾವವುಳ್ಳವನೂ ಅನ್ಯರ ಕಾರ್ಯದಲ್ಲಿ ಆಸಕ್ತಿಯುಳ್ಳವನೂ, ಶುಕ್ರನಿಂದ ಕೂಡಿದ್ದರೆ ಮಲ್ಲಯುದ್ಧ, ನಾಟಕ ಆಯುಧಾದಿಗಳಿಂದ ಸಂಪಾದಿಸಲ್ಪಟ್ಟ ಧನವುಳ್ಳವನೂ ಶನಿಯಿಂದ ಕೂಡಿದ್ದರೆ ಧಾತುದ್ರವ್ಯಾದಿಗಳ ವಿಕ್ರಯದಲ್ಲಿ ಕುಶಲನೂ ಧಾತುಮಯವಾದ ಪಾತ್ರೆಗಳ ವ್ಯಾಪಾರ ಮಾಡುವವನೂ ಹುಟ್ಟುತ್ತಾನೆ.

ಕೂಟಸ್ತ್ರ್ಯಾಸವ ಕುಂಭ ಪಣ್ಯಮಶಿವಂ ಮಾತುಃ ಸ ವಕ್ರಶ್ಯಶೀ ।
ಸಜ್ಞಃ ಪ್ರಶ್ರಿತವಾಕ್ಯಮರ್ಥ ನಿಪುಣಂ ಸೌಭಾಗ್ಯ ಕೀರ್ತ್ಯಾನ್ವಿತಮ್ ॥
ವಿಕ್ರಾಂತಂ ಕುಲಮುಖ್ಯ ಮಸ್ಥಿರಮತಿಂ ವಿತ್ತೇಶ್ವರಂ ಸಾಂಗಿರಾ ।
ವಸ್ತ್ರಾಣಾಂಸಸಿತಃ ಕ್ರಿಯಾದಿ ಕುಶಲಂ ಸಾರ್ಕಿಃ ಪುನರ್ಭೂಸುತಮ್ ॥೨॥

ಚಂದ್ರನು ಕುಜನಿಂದ ಕೂಡಿದ್ದರೆ ವಸ್ತು ವ್ಯತ್ಯಯ, ವಿಕ್ರಯ ಅಥವಾ ನಾನಾ ವಿಧ ವ್ಯಾಪಾರ ವುಳ್ಳವನೂ, ಸ್ತ್ರೀವ್ಯಾಪಾರಿಯೂ, ಮದ್ಯ ವ್ಯಾಪಾರಿಯೂ, ಕೊಡದ ವ್ಯಾಪಾರಿಯೂ, ತಾಯಿಗೆ ಅನಿಷ್ಟವನ್ನುಂಟು ಮಾಡುವವನೂ, ಬುಧನಿಂದ ಕೂಡಿದ್ದರೆ ಸುಜ್ಞನೂ, ಪ್ರಿಯ ಮಾತುಗಳುಳ್ಳ ವನೂ, ಧನಸಂಗ್ರಹದಲ್ಲಿ ಸಮರ್ಥನೂ, ಸೌಭಾಗ್ಯ ಕೀರ್ತಿಗಳಿಂದ ಕೂಡಿದವನೂ, ಗುರುವಿನಿಂದ ಕೂಡಿದ್ದರೆ ಪರಾಕ್ರಮಿಯೂ, ತನ್ನ ವಂಶದಲ್ಲಿ ಪ್ರಧಾನನೂ ಚಂಚಲಚಿತ್ತನೂ ಧನವಂತನೂ, ಶುಕ್ರನಿಂದ ಕೂಡಿದ್ದರೆ ವಸ್ತ್ರಗಳ ಕರ್ಮ ಮತ್ತು ಕ್ರಯವಿಕ್ರಯದಲ್ಲಿ ಕುಶಲನೂ, ಶನಿಯಿಂದ ಕೂಡಿದ್ದರೆ, ಎರಡನೆ ವಿವಾಹ ಮಾಡಿಕೊಂಡವಳ ಮಗನೂ ಆಗುವನು. (ಇಲ್ಲಿ ಒಬ್ಬನಿಗೆ ನಿಶ್ಚಯವಾಗಿ ಮತ್ತೊಬ್ಬನಿಗೆ ಮದುವೆಯಾದರೂ ಪುನರ್ಭೂಸುತಃ ಆಗಬಹುದು).

ಮೂಲಾದಿ ಸ್ನೇಹಕೂಟ್ಯೈರ್ವ್ಯವ ಹರತಿ ವಣಿಗ್ಬಾಹುಯೋದ್ಧಾಸ ಸೌಮ್ಯೇ ।
ಪುರಾಧ್ಯಕ್ಷಸ್ಸ ಜೀವೇ ಭವತಿ ನರಪತಿಃ ಪ್ರಾಪ್ತವಿತ್ತೋದ್ವಿಜೋವಾ ॥
ಗೋಪೋಮಲ್ಲೋಥದಕ್ಷಃ ಪರಯುವತಿ ರತೋದ್ಯೂತಕೃತ್ಸಾ ಸುರೇಜ್ಯೇ ।
ದುಃಖಾರ್ತೋ ಸತ್ಯಸಂಧಸ್ಸ ಸವಿತೃ ತನಯೇ ಭೂಮಿಜೇ ನಿಂದಿತಶ್ಚ ॥೩॥

ಕುಜನು ಬುಧನಿಂದ ಕೂಡಿದ್ದರೆ ಕಂದಮೂಲ, ಫಲಪುಷ್ಪ, ಪತ್ರಾದಿಗಳನ್ನೂ ತೈಲ ಘೃತಾದಿ ಗಳನ್ನೂ ಕೃತ್ರಿಮ ಪದಾರ್ಥಗಳನ್ನೂ ವ್ಯಾಪಾರ ಮಾಡುವವನೂ, ಬಾಹು ಯುದ್ಧದಲ್ಲಿ ಸಮರ್ಥನೂ, ಗುರುವಿನಿಂದ ಕೂಡಿದ್ದರೆ ನಗರಾಧಿಪತಿಯೂ ರಾಜನೂ ಧನವಂತನೂ ಬ್ರಾಹ್ಮಣನೂ ಶುಕ್ರನಿಂದ ಕೂಡಿದ್ದರೆ ಗೋಪಾಲಕನೂ ಬಾಹುಯುದ್ಧ ಮಾಡುವವನೂ ದಕ್ಷತೆ ಇರುವವನೂ ಪರಸ್ತ್ರೀಸಕ್ತನೂ ಜೂಜಾಡುವವನೂ, ಶನಿಯಿಂದ ಕೂಡಿದ್ದರೆ ಶರೀರವು ವ್ಯಾಧಿಗಳಿಂದ ಪೀಡಿತನಾಗಿ ದುಃಖಿಯೂ ದೈನ್ಯದಿಂದಿರುವವನೂ ಸುಳ್ಳು ಹೇಳುವವನೂ ಜನರಿಂದ ನಿಂದಿತನೂ ಆಗುತ್ತಾನೆ.

**ಸೌಮ್ಯೇರಂಗ ಚರೋ ಬೃಹಸ್ಪತಿಯುತೇ ಗೀತಪ್ರಿಯೋ ನೃತ್ಯವಿ ।**
**ದ್ವಾಗ್ಮೀ ಭೂ ಗಣಪಸ್ಸಿತೇನ ಮೃದುನಾ ಮಾಯಾಪಟುರ್ಲಂಘಕಃ ॥**
**ಸದ್ವಿದ್ಯೋಧನದಾರವಾನ್ ಬಹುಗುಣ ಶ್ಶುಕ್ರೇಣಯುಕ್ತೇ ಗುರೌ ।**
**ಜ್ಞೇಯಃ ಶ್ಮಶ್ರುಕರೋ ಸಿತೇನಘಟಕೃಜ್ಜಾತೋನ್ನ ಕಾರೋಪಿವಾ ॥೪॥**

ಬುಧನು ಗುರುವಿನಿಂದ ಕೂಡಿದ್ದರೆ ಮಲ್ಲಯುದ್ಧರಂಗದಲ್ಲಿ ಸಂಚರಿಸುವವನೂ ಗಾನಪ್ರಿಯನೂ ನಾಟ್ಯಶಾಸ್ತ್ರಗಳನ್ನು ತಿಳಿದವನೂ ಶುಕ್ರನಿಂದ ಕೂಡಿದ್ದರೆ ಚೆನ್ನಾಗಿ ಮಾತಾಡುವವನೂ ಭೂಮಿಗೂ ಸಭೆಗೂ ಅಧಿಪತಿಯಾಗುವವನೂ, ಶನಿಯಿಂದ ಕೂಡಿದ್ದರೆ ಪರರಿಗೆ ಮೋಸ ಮಾಡುವುದರಲ್ಲಿ ಸಮರ್ಥನೂ ಆಚಾರ ಮತ್ತು ಗುರುಜನರ ಆಜ್ಞೆಯನ್ನು ಮೀರಿ ನಡೆಯುವವನೂ ಆಗುತ್ತಾನೆ ಗುರುವು ಶುಕ್ರನಿಂದ ಕೂಡಿದ್ದರೆ ಉತ್ತಮ ವಿದ್ಯೆಯುಳ್ಳವನೂ ಧನವಂತನೂ ಒಳ್ಳೆಯ ಭಾಗ್ಯ ವಂತನೂ ಅನೇಕ ಗುಣಗಳುಳ್ಳವನೂ, ಶನಿಯಿಂದ ಕೂಡಿದ್ದರೆ ಕ್ಷೌರ ಮಾಡುವವನೂ ಕುಂಬಾರನೂ ಅಡಿಗೆ ಮಾಡುವುದರಲ್ಲಿ ಸಮರ್ಥನೂ ಆಗುತ್ತಾನೆ

**ಅಸಿತ ಸಿತ ಸಮಾಗಮೇಲ್ಪ ಚಕ್ಷು ।**
**ರ್ಯುವತಿ ಸಮಾಶ್ರಯ ಸಂಪ್ರವೃದ್ಧವಿತ್ತಃ ॥**
**ಭವತಿ ಚ ಲಿಪಿ ಚಿತ್ರಕಾದಿ ವೇತ್ತಾ ।**
**ಕಥಿತ ಫಲೈಃ ಪರತೋ ವಿಕಲ್ಪನೀಯಾಃ ॥೫॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ದ್ವಿಗ್ರಹಯೋಗ ನಿರೂಪಣಂ ನಾಮ ಚತುರ್ದಶೋಧ್ಯಾಯಃ ॥**

ಶುಕ್ರನು ಶನಿ ಸಮಾಗಮದಲ್ಲಿದ್ದರೆ ಸಣ್ಣ ಕಣ್ಣುಗಳುಳ್ಳವನೂ, ಸ್ತ್ರೀಯರ ಆಶ್ರಯದಿಂದ ಅಧಿಕವಾದ ಧನವನ್ನು ಸಂಪಾದಿಸುವವನೂ ಮತ್ತು ಪುಸ್ತಕ ಚಿತ್ರಲೇಖನ ಮುಂತಾದ ಕುಶಲಕರ್ಮಗಳನ್ನು ತಿಳಿದವನೂ ಆಗುವನು. ಮೂರು ನಾಲ್ಕು ಗ್ರಹರು ಕೂಡಿದ್ದರೂ ಆಯಾಯ ಗ್ರಹರ ಫಲಗಳನ್ನು ಕೂಡಿಸಿ ಹೇಳತಕ್ಕದ್ದು ಅದು ಹೇಗೆಂದರೆ, ಒಂದು ರಾಶಿಯಲ್ಲಿ ರವಿ, ಚಂದ್ರ, ಕುಜರು ಕೂಡಿದ್ದರೆ ರವಿ ಚಂದ್ರ ಯೋಗಫಲ, ರವಿ ಕುಜ ಯೋಗಫಲ, ಚಂದ್ರ, ಕುಜ ಯೋಗಫಲ ಹೀಗೆ ಕೂಡಿಸಿ ಫಲವನ್ನು ಹೇಳತಕ್ಕದ್ದು. ಉಳಿದ ಗ್ರಹರ ಫಲಗಳನ್ನು ಹೀಗೆಯೇ ತಿಳಿಯತಕ್ಕದ್ದು

**॥ ದ್ವಿಗ್ರಹಯೋಗವೆಂಬ ಹದಿನಾಲ್ಕನೇಯ ಅಧ್ಯಾಯವು ॥**

## ॥ ಪ್ರವ್ರಜ್ಯಾಯೋಗಾಧ್ಯಾಯಃ ॥

**ಏಕಸ್ಥೈ ಶ್ಚತುರಾದಿಭಿರ್ಬಲಯುತೈರ್ಜಾತಾಃ ಪೃಥಗ್ವೀರ್ಯಗೈಃ ।**
**ಶಾಕ್ಯಾಜೀವಕ ಭಿಕ್ಷುವೃದ್ಧ ಚರಕಾ ನಿರ್ಗ್ರಂಥವನ್ಯಾಶನಾಃ ॥**
**ಮಾಹೇಯಜ್ಞ ಗುರುಕ್ಷಪಾ ಕರಸಿತ ಪ್ರಾಭಾಕರೀ ನೈಃ ಕ್ರಮಾತ್ ।**
**ಪ್ರವ್ರಜ್ಯಾಬಲಿಭಿಸ್ಸಮಾಃ ಪರಜಿತೈಸ್ತತ್ಸ್ವಾಮಿಭಿಃ ಪ್ರಚ್ಯುತಿಃ ॥೧॥**

ಒಂದೇ ರಾಶಿಯಲ್ಲಿ ಬಲಯುಕ್ತರಾದ ನಾಲ್ಕು, ಐದು, ಆರು, ಏಳು ಗ್ರಹಗಳು ಇರುವಾಗ ಹುಟ್ಟಿದವನು ಸನ್ಯಾಸವನ್ನು ಹೊಂದುವನು ಇವರಲ್ಲಿ ಬಲಿಷ್ಠರಾದ ಕುಜ, ಬುಧ, ಗುರು, ಚಂದ್ರ, ಶುಕ್ರ, ಶನಿ, ರವಿ ಇವರುಗಳಿಗೆ ಕ್ರಮವಾಗಿ ಶಾಕ್ಯ, ಆಜೀವಕ, ಭಿಕ್ಷು, ವೃದ್ಧ, ಚರಕ, ನಿರ್ಗ್ರಂಥ, ವನ್ಯಾಶನ ಎಂಬ ಏಳು ವಿಧವಾದ ಸನ್ಯಾಸವನ್ನುಂಟು ಮಾಡುವರು ಕುಜನಿಂದ ಶಾಕ್ಯ, ಎಂದರೆ ಬುದ್ಧೋಪಾಸಕನೂ, ಬುಧನಿಂದ ಆಜೀವಕ, ಏಕದಂಡ ಸನ್ಯಾಸವೂ, ಗುರುವಿನಿಂದ ಭಿಕ್ಷುತ್ರಿದಂಡ ಸನ್ಯಾಸವೂ, ಚಂದ್ರನಿಂದ ವೃದ್ಧ ಶ್ರಾವಕ (ಕಾಪಾಲಿಕ)ನೂ ಶುಕ್ರನಿಂದ ಚಕ್ರರಾಖ್ಯ ಸನ್ಯಾಸವೂ ಶನಿಯಿಂದ ದಿಗಂಬರ ಸನ್ಯಾಸವೂ, ಸೂರ್ಯನಿಂದ ಅರಣ್ಯದಲ್ಲಿರುವ ಕಂದಮೂಲಾದಿಗಳನ್ನು ಭಕ್ಷಿಸುವ ಸನ್ಯಾಸವೂ ನಾಲ್ಕು ಮೊದಲುಗೊಂಡು ಏಕರಾಶಿಗತರಾದ ಗ್ರಹಗಳಲ್ಲಿ ಬಲಿಷ್ಠನಾದವನು ಯಾರೋ ಅವನಿಗೆ ಸಂಬಂಧಿಸಿದ ಸನ್ಯಾಸವು ಜಾತಕನಿಗೆ ಉಂಟಾಗುವುದೆಂದು ತಿಳಿಯತಕ್ಕದ್ದು ನಾಲ್ಕಾರು ಗ್ರಹರು ಬಲವಂತರಾಗಿದ್ದರೆ ಎಲ್ಲಾ ಗ್ರಹರಿಗೂ ಹೇಳಿದ ಸನ್ಯಾಸವನ್ನು ಆಯಾಯ ದಶಾಭುಕ್ತಿ ಕಾಲಗಳಲ್ಲಿ ಅನುಭವಿಸುವ ನೆಂದು ಹೇಳಬೇಕು. ಬಲಿಗಳಾದ ಗ್ರಹರು ಗ್ರಹಯುದ್ಧದಲ್ಲಿ ಸೋತರೆ ಸ್ವೀಕರಿಸಿದ ಸನ್ಯಾಸವು ಬಿಡಲ್ಪಡುವುದಾಗಿ ತಿಳಿಯಬೇಕು. ಗ್ರಹವು ದುರ್ಬಲವಾಗಿದ್ದರೆ ಸನ್ಯಾಸವು ಲಭಿಸುವುದಿಲ್ಲವೆಂದು ತಿಳಿಯತಕ್ಕದ್ದು.

**ರವಿಲುಪ್ತಕರೈರದೀಕ್ಷಿತಾ ।**
**ಬಲಿಭಿಸ್ತದ್ಗತ ಭಕ್ತಯೋ ನರಾಃ ॥**
**ಅಭಿಯಾಚಿತ ಮಾತ್ರ ದೀಕ್ಷಿತಾ ।**
**ನಿಹತೈರನ್ಯ ನಿರೀಕ್ಷಿತೈ ರಪಿ ॥೨॥**

ಸನ್ಯಾಸ ಯೋಗಕಾರಕ ಗ್ರಹರು ಅಸ್ತಂಗತರಾಗಿದ್ದರೆ ಆ ಗ್ರಹಕ್ಕೆ ಹೇಳಿದ ಸನ್ಯಾಸ ದೀಕ್ಷೆಯನ್ನು ಪಡೆದು ಅನುಭವಿಸಲ್ಪಡುವುದಿಲ್ಲ ಆ ಗ್ರಹರು ಬಲಿಷ್ಠರಾಗಿದ್ದರೆ ಆ ಗ್ರಹಕ್ಕೆ ಹೇಳಿದ ಸನ್ಯಾಸದಲ್ಲಿ ಭಕ್ತಿಯುಳ್ಳವನಾಗುತ್ತಾನೆ. ಯೋಗಕಾರಕ ಗ್ರಹರು ಯುದ್ಧದಲ್ಲಿ ಪರಾಜಿತರಾಗಿ ಅನ್ಯ ಗ್ರಹರಿಂದ ನೋಡಲ್ಪಟ್ಟರೆ ಆ ಗ್ರಹಕ್ಕೆ ಉಕ್ತವಾದ ಸನ್ಯಾಸದಲ್ಲಿ ಅಭಿರುಚಿ ಇರುವುದೇ ಹೊರತು ಅದನ್ನು ಈತನು ಹೊಂದುವುದಿಲ್ಲ.

ಜನ್ಮೇಶೋನ್ಯೈರ್ಯದ್ಯದೃಷ್ಟೋರ್ಕ ಪುತ್ರಂ ।
ಪಶ್ಯತ್ಯರ್ಕೀ ಜನ್ಮಪಂ ವಾ ಬಲೋನಮ್ ॥
ದೀಕ್ಷಾಂ ಪ್ರಾಪ್ನೋತ್ಯರ್ಕಿ ದ್ರೇಕ್ಕಾಣ ಸಂಸ್ಥೇ ।
ಭೌಮಾರ್ಕ್ಯಂಶೇ ಸೌರದೃಷ್ಟೇ ಚ ಚಂದ್ರೇ ॥೩॥

ಜನ್ಮಕಾಲದಲ್ಲಿ ಚಂದ್ರ ಲಗ್ನಾಧಿಪತಿಯು ಅನ್ಯ ಗ್ರಹರಿಂದ ನೋಡಲ್ಪಡದೆ ಶನಿಯನ್ನು ನೋಡಿದರೆ ಆತನು ಆ ಶನಿಗೆ ಹೇಳಿದ ದಿಗಂಬರ ಸನ್ಯಾಸವನ್ನು ಹೊಂದುತ್ತಾನೆ ಶನಿಯು ಬಲವಂತನಾಗಿದ್ದು ಬಲಹೀನ ಚಂದ್ರನು ಶನಿ ದ್ರೇಕ್ಕಾಣದಲ್ಲಿದ್ದರೂ ಶನಿ ಕುಜರ ನವಾಂಶದಲ್ಲಿದ್ದು ಶನಿ ದೃಷ್ಟನಾಗಿದ್ದರೂ ದಿಗಂಬರ ಸನ್ಯಾಸಿಯಾಗುವನು. ಬಲಹೀನನಾಗಿರುವ ಜನ್ಮೇಶನನ್ನು ಶನಿ ನೋಡಿದರೂ ಆತನಿಗೆ ಹೇಳಿದ ದಿಗಂಬರ ಸನ್ಯಾಸವನ್ನು ಹೊಂದುತ್ತಾನೆ.

ಸುರಗುರು ಶಶಿ ಹೋರಾ ಸ್ವಾರ್ಕಿದೃಷ್ಟಾಸು ಧರ್ಮೇ ।
ಗುರುರಥ ನೃಪತೀನಾಂ ಯೋಗಜಸ್ತೀರ್ಥ ಕೃತ್ಸ್ಯಾತ್ ॥
ನವಮ ಭವನ ಸಂಸ್ಥೇ ಮಂದಗೇನ್ಯೈರ ದೃಷ್ಟೇ ।
ಭವತಿ ನರಪಯೋಗೇ ದೀಕ್ಷಿತಃ ಪಾರ್ಥಿವೇಂದ್ರಃ ॥೪॥

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಪ್ರವ್ರಜ್ಯಾಯೋಗ ನಿರೂಪಣಂ ನಾಮ ಪಂಚದಶೋಧ್ಯಾಯಃ ॥**

ಗುರು ಚಂದ್ರ ಲಗ್ನ ಈ ಮೂರು ಶನಿಯಿಂದ ನೋಡಲ್ಪಟ್ಟು ನವಮದಲ್ಲಿ ಗುರುವಿದ್ದರೆ ರಾಜಯೋಗದಲ್ಲಿ ಹುಟ್ಟಿದವನಾದರೂ ಶಾಸ್ತ್ರಕರ್ತೃನಾಗುತ್ತಾನೆ ಇದಕ್ಕೆ ಕೆಲವರು ಧನುರ್ಮೀನ ಕರ್ಕಾಟಕಗಳಲ್ಲಿ ಒಂದು ಲಗ್ನವಾಗಿ ಅಲ್ಲಿಗೆ ಶನಿದೃಷ್ಟಿಯೂ ನವಮದಲ್ಲಿ ಗುರುವೂ ಇರುವಾಗ ಜನಿಸಿದವನು ರಾಜಯೋಗದಲ್ಲಿ ಹುಟ್ಟಿದವನಾದರೂ ಶಾಸ್ತ್ರಕರ್ತೃನಾಗುತ್ತಾನೆ. ನವಮದಲ್ಲಿ ಶನಿಯು ಅನ್ಯಗ್ರಹರಿಂದ ನೋಡಲ್ಪಡದೆ ಇದ್ದರೆ ರಾಜಯೋಗದಲ್ಲಿ ಜನಿಸಿದ ರಾಜಾಧಿರಾಜನು ಕೂಡಾ ಯಜ್ಞಯಾಗಾದಿಗಳನ್ನು ಮಾಡತಕ್ಕವನೂ ಅಂದರೆ ಸನ್ಯಾಸವನ್ನಾಶ್ರಯಿಸಿ ದೀಕ್ಷಿತನಾಗುತ್ತಾನೆ. (ಇಲ್ಲಿ ರಾಜಯೋಗವಿಲ್ಲದವನು ಕೇವಲ ಸನ್ಯಾಸವನ್ನು ಮಾತ್ರ ಆಶ್ರಯಿಸುವನು)

**॥ ಇತಿ ಶ್ರೀ ಪ್ರವ್ರಜ್ಯಾಯೋಗವೆಂಬ ಹದಿನೈದನೇಯ ಅಧ್ಯಾಯವು ॥**

ಅಧ್ಯಾಯ ೧೬

## ॥ ರಾಶಿಶೀಲಾಧ್ಯಾಯಃ ॥

### ॥ ನಕ್ಷತ್ರ ಫಲಂ ॥

ಪ್ರಿಯ ಭೂಷಣಸ್ಸು ರೂಪಃ ।
ಸುಭಗೋದಕ್ಷೋಶ್ವಿನೀಷು ಮತಿಮಾಂಶ್ಚ ॥
ಕೃತ ನಿಶ್ಚಯ ಸತ್ಯಾರು ।
ಗ್ದಕ್ಷಸ್ಸುಖಿತಶ್ಚ ಭರಣೀಷು ॥೧॥

ಅಶ್ವಿನೀ ನಕ್ಷತ್ರದಲ್ಲಿ ಹುಟ್ಟಿದವನು ಅಲಂಕಾರ ಪ್ರಿಯನೂ ಸುಂದರನೂ ಮನೋಹರನೂ ಸಮರ್ಥನೂ ಬುದ್ಧಿವಂತನೂ ಆಗುತ್ತಾನೆ. ಭರಣಿ ನಕ್ಷತ್ರದಲ್ಲಿ ಹುಟ್ಟಿದವನು ಧೃಢಸಂಕಲ್ಪವುಳ್ಳವನೂ ಸತ್ಯವಂತನೂ ರೋಗವರ್ಜಿತನೂ ದಕ್ಷನೂ ಚಾತುರ್ಯವುಳ್ಳವನೂ ಸುಖವಂತನೂ ಆಗುತ್ತಾನೆ

ಬಹುಭುಕ್ಪರದಾರರತ ।
ಸ್ತೇಜಸ್ವೀ ಕೃತ್ತಿಕಾಸು ವಿಖ್ಯಾತಃ ॥
ರೋಹಿಣ್ಯಾಂ ಸತ್ಯಶುಚಿಃ ।
ಪ್ರಿಯಂ ವದಸ್ಥಿರಮತಿಸ್ಸು ರೂಪಶ್ಚ ॥೨॥

ಕೃತ್ತಿಕಾ ನಕ್ಷತ್ರದಲ್ಲಿ ಹುಟ್ಟಿದವನು, ಹೆಚ್ಚು ಊಟ ಮಾಡುವವನೂ ಪರದಾರರತನೂ ತೇಜಸ್ವಿಯೂ ಪ್ರಸಿದ್ಧನೂ ಆಗುತ್ತಾನೆ. ರೋಹಿಣಿಯಲ್ಲಿ ಹುಟ್ಟಿದವನು ಸತ್ಯವಂತನೂ ಶುಚಿಯೂ ಪ್ರಿಯವಾದ ಮಾತುಗಳನ್ನಾಡುವವನೂ ದೃಢಮತಿಯೂ ಸುಂದರನೂ ಆಗುತ್ತಾನೆ

ಚಪಲ ಶ್ಚತುರೋಭೀರುಃ ।
ಪಟುರುತ್ಸಾಹೀ ಧನೀಮೃಗೇ ಭೋಗೀ ॥
ಶಠಗರ್ವಿತೋ ಕೃತಘ್ನೋ ।
ಹಿಂಸ್ರಃ ಪಾಪಶ್ಚ ರೌದ್ರೆರ್ಕ್ಷೇ ॥೩॥

ಮೃಗಶಿರ ನಕ್ಷತ್ರದಲ್ಲಿ ಹುಟ್ಟಿದವನು ಚಪಲನೂ ಚತುರನೂ ಭಯಶೀಲನೂ ಚಟುವಟಿಕೆಯುಳ್ಳವನೂ ಉತ್ಸಾಹವುಳ್ಳವನೂ ಧನವಂತನೂ ಭೋಗಿಯು ಆಗುತ್ತಾನೆ. ಆರ್ದ್ರ ನಕ್ಷತ್ರದಲ್ಲಿ ಹುಟ್ಟಿದವನು ಶಠನೂ ಗರ್ವಿತನೂ ಮಾಡಿದ ಉಪಕಾರವನ್ನು ಸ್ಮರಿಸದವನೂ ಹಿಂಸಾಶೀಲನೂ ಪಾಪಿಯೂ ಆಗುತ್ತಾನೆ.

ದಾಂತಃ ಸುಖೀ ಸುಶೀಲೋ ।
ದುರ್ಮೇಧಾ ರೋಗಭಾ ಕ್ಪಿಪಾಸುಶ್ಚ ॥

ಅಲ್ಪೇನ ಚ ಸಂತುಷ್ಟಃ ಪುನರ್ವಸೌ ।
ಜಾಯತೇ ಮನುಜಃ ॥೪॥

ಪುನರ್ವಸು ನಕ್ಷತ್ರದಲ್ಲಿ ಹುಟ್ಟಿದವನು ದಮನಶೀಲನೂ ಸುಖಿಯೂ ಸುಶೀಲನೂ ಮೇಧಾವಿಯಲ್ಲದವನೂ ರೋಗಭಾಗಿಯೂ ನೀರಡಿಕೆಯುಳ್ಳವನೂ ಸ್ವಲ್ಪದಿಂದಲೇ ಸಂತುಷ್ಟನೂ ಆಗುತ್ತಾನೆ.

ಶಾಂತಾತ್ಮಾ ಸುಭಗಃ ಪಂಡಿತೋ ।
ಧನಿಧರ್ಮ ಸಂಶ್ರಿತಃ ಪುಷ್ಯೇ ॥
ಶಠಸರ್ವ ಭಕ್ಷ ಪಾಪಾಃ ।
ಕೃತಘ್ನ ಧೂರ್ತೌ ಚ ಭೌಜಂಗೇ ॥೫॥

ಪುಷ್ಯಾ ನಕ್ಷತ್ರದಲ್ಲಿ ಹುಟ್ಟಿದವನು ಶಾಂತವಾದ ಆತ್ಮವುಳ್ಳವನೂ ಸುಭಗನೂ ಪಂಡಿತನೂ ಧನಿಯೂ ಧರ್ಮವನ್ನು ಆಶ್ರಯಿಸಿರುವವನೂ ಆಗುತ್ತಾನೆ ಆಶ್ಲೇಷಾ ನಕ್ಷತ್ರದಲ್ಲಿ ಹುಟ್ಟಿದವನು ಶಠನೂ ಎಲ್ಲವನ್ನೂ ಭಕ್ಷಿಸುವವನೂ ಪಾಪಿಯೂ ಕೃತಘ್ನನೂ ಆಗುತ್ತಾನೆ

ಬಹುಭೃತ್ಯ ಧನೋಭೋಗೀ ।
ಸುರಪಿತೃಭಕ್ತೋ ಮಹೋದ್ಯಮಃ ಪಿತ್ರ್ಯೇ ॥
ಪ್ರಿಯವಾಗ್ದಾತಾ ದ್ಯುತಿಮಾ ।
ನಟನೋ ನೃಪ ಸೇವಕೋ ಭಾಗ್ಯೇ ॥೬॥

ಮಘಾ ನಕ್ಷತ್ರದಲ್ಲಿ ಹುಟ್ಟಿದವನು ಹೆಚ್ಚು ಭೃತ್ಯರುಳ್ಳವನೂ ಧನವಂತನೂ ಭೋಗಿಯೂ ದೇವರು ಪಿತೃಗಳಲ್ಲಿ ಭಕ್ತಿಯುಳ್ಳವನೂ ಮಹೋತ್ಸಾಹಿಯೂ ಆಗುತ್ತಾನೆ ಹುಬ್ಬಾ ನಕ್ಷತ್ರದಲ್ಲಿ ಹುಟ್ಟಿದವನು ಪ್ರಿಯವಾದ ಮಾತುಗಳುಳ್ಳವನೂ ದಾನಶೀಲನೂ ಕಾಂತಿವಂತನೂ ಸಂಚರಣ ಪ್ರಿಯನೂ ರಾಜಸೇವಕನೂ ಆಗುತ್ತಾನೆ

ಸುಭಗೋ ವಿದ್ಯಾಪ್ತ ಧನೋ ।
ಭೋಗೀ ಸುಖಭಾಗ್ದ್ವಿತೀಯ ಫಲ್ಗುನ್ಯಾಂ ॥
ಉತ್ಸಾಹೀ ಧೃಷ್ಟಃ ಪಾನಪೋ ।
ಘೃಣೀತಸ್ಕರೋ ಹಸ್ತೇ ॥೭॥

ಉತ್ತರಾ ನಕ್ಷತ್ರದಲ್ಲಿ ಹುಟ್ಟಿದವನು ಸುಂದರನೂ ವಿದ್ಯೆಯಿಂದ ಧನಾರ್ಜನೆ ಮಾಡುವವನೂ ಭೋಗಿಯೂ ಸುಖವಂತನೂ ಆಗುತ್ತಾನೆ ಹಸ್ತಾ ನಕ್ಷತ್ರದಲ್ಲಿ ಹುಟ್ಟಿದವನು ಉತ್ಸಾಹಿಯೂ ಧೈರ್ಯಶಾಲಿಯೂ ಪೇಯವಸ್ತು ಕುಡಿತದಲ್ಲಿ ನಿರತನೂ (ನಿರ್ದಯಿಯಲ್ಲದವನೂ) ದಯಾಶೀಲನೂ ಕಳ್ಳನೂ ಆಗುತ್ತಾನೆ.

ಚಿತ್ರಾಂಬರ ಮಾಲ್ಯಧರಃ ।
ಸುಲೋಚನಾಂ ಗಶ್ಚ ಭವತಿ ಚಿತ್ರಾಯಾಂ ॥
ದಾಂತೋವಣಿಕ್ಕೃಪಾಲುಃ ಪ್ರಿಯ ।
ವಾಗ್ಧರ್ಮಾಶ್ರಿತಃ ಸ್ವಾತೌ ॥೮॥

ಚಿತ್ರಾ ನಕ್ಷತ್ರದಲ್ಲಿ ಹುಟ್ಟಿದವನು ಚಿತ್ರವಿಚಿತ್ರವಾದ ವಸ್ತ್ರಮಾಲಾದಿಗಳುಳ್ಳವನೂ ಒಳ್ಳೆಯ ಕಣ್ಣು ಮತ್ತು ಅವಯವಗಳುಳ್ಳವನೂ ಆಗಿರುತ್ತಾನೆ. ಸ್ವಾತಿ ನಕ್ಷತ್ರದಲ್ಲಿ ಹುಟ್ಟಿದವನು ದಮನಶೀಲನೂ (ಇಂದ್ರಿಯ ನಿಗ್ರಹ ಮಾಡುವವನು) ವ್ಯಾಪಾರಿಯೂ ಕೃಪಾಲುವೂ ಪ್ರಿಯವಚನನೂ ಧರ್ಮಕ್ಕೆ ಆಶ್ರಿತನೂ ಆಗುತ್ತಾನೆ

ಈರ್ಷ್ಯುರ್ಲುಬ್ಧೋ ದ್ಯುತಿಮಾನ್ ।
ವಚನ ಪಟುಃ ಕಲಹಕೃದ್ವಿಶಾಖಾಸು ॥
ಆಢ್ಯೋ ವಿದೇಶವಾಸೀ ।
ಕ್ಷುಧಾಲು ರಟನೋನು ರಾಧಾಸು ॥೯॥

ವಿಶಾಖೆ ನಕ್ಷತ್ರದಲ್ಲಿ ಹುಟ್ಟಿದವನು ಹೊಟ್ಟೆಕಿಚ್ಚುಳ್ಳವನೂ, ಲೋಭಿಯೂ, ಕಾಂತಿವಂತನೂ, ಮಾತಿನಲ್ಲಿ ಸಮರ್ಥನೂ, ಜಗಳಗಂಟನೂ ಆಗುತ್ತಾನೆ. ಅನುರಾಧಾ ನಕ್ಷತ್ರದಲ್ಲಿ ಹುಟ್ಟಿದವನು ಧನವಂತನೂ ಪರದೇಶವಾಸಿಯೂ ಹೆಚ್ಚು ಹಸಿವುಳ್ಳವನೂ ಸಂಚಾರಶೀಲನೂ ಆಗುತ್ತಾನೆ.

ಜ್ಯೇಷ್ಠಾಸು ನ ಬಹುಮಿತ್ರಃ ।
ಸಂತುಷ್ಟೋ ಧರ್ಮ ವಿತ್ಪ್ರಚುರ ಕೋಪಃ ॥
ಮೂಲೇ ಮಾನೀ ಧನವಾನ್ ।
ಸುಖೀ ನ ಹಿಂಸ್ರಃ ಸ್ಥಿರೋಭೋಗೀ ॥೧೦॥

ಜ್ಯೇಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು ಹೆಚ್ಚು ಸ್ನೇಹಿತರಿಲ್ಲದವನೂ, ಸಂತುಷ್ಟನೂ ಧರ್ಮಜ್ಞನೂ, ಹೆಚ್ಚಾದ ಕೋಪ ಉಳ್ಳವನೂ ಆಗುತ್ತಾನೆ ಮೂಲಾ ನಕ್ಷತ್ರದಲ್ಲಿ ಹುಟ್ಟಿದವನು ಮಾನಿಯೂ ಧನವಂತನೂ ಸುಖಿಯೂ ಹಿಂಸೆ ಪಡುವವನೂ ಸುಸ್ಥಿರನೂ ಭೋಗಿಯೂ ಆಗುತ್ತಾನೆ.

ಇಷ್ಟಾನಂದ ಕಲತ್ರೋ ।
ಮಾನೀದೃಢ ಸೌಹೃದಶ್ಚ ಜಲದೈವೇ ॥
ವೈಶ್ವೇ ವಿನೀತ ಧಾರ್ಮಿಕ ।
ಬಹುಮಿತ್ರ ಕೃತಜ್ಞ ಸುಭಗಾಶ್ಚ ॥೧೧॥

ಪೂರ್ವಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು ಇಷ್ಟಳಾಗಿಯೂ ಆನಂದಳಾಗಿಯೂ ಇರುವ ಹೆಂಡತಿಯುಳ್ಳವನೂ ಮಾನಿಯೂ ದೃಢವಾದ ಸ್ನೇಹವುಳ್ಳವನೂ ಆಗುತ್ತಾನೆ. ಉತ್ತರಾಷಾಢಾ ನಕ್ಷತ್ರದಲ್ಲಿ ಹುಟ್ಟಿದವನು ವಿನಯವುಳ್ಳವನೂ ಧಾರ್ಮಿಕನೂ ಅನೇಕ ಮಿತ್ರರುಳ್ಳವನೂ ಕೃತಜ್ಞನೂ ಸುಂದರನೂ ಆಗುತ್ತಾನೆ

ಶ್ರೀಮಾನ್ ಶ್ರವಣೇ ಶ್ರುತವಾ ।
ನುದಾರದಾರೋ ಧನಾನ್ವಿತಃ ಖ್ಯಾತಃ ॥
ದಾತಾಬಾಢ್ಯಃ ಶೂರೋ ।
ಗೀತಪ್ರಿಯೋ ಧನಿಷ್ಠಾಸು ಧನ ಲುಬ್ಧಃ ॥೧೨॥

ಶ್ರವಣ ನಕ್ಷತ್ರದಲ್ಲಿ ಹುಟ್ಟಿದವನು ಶ್ರೀಮಂತನೂ ವೇದಗಳನ್ನರಿತವನೂ, ಉದಾರ ಗುಣವುಳ್ಳ ಹೆಂಡತಿಯುಳ್ಳವನೂ ಧನವಂತನೂ ಪ್ರಖ್ಯಾತನೂ ಆಗುತ್ತಾನೆ. ಧನಿಷ್ಠಾ ನಕ್ಷತ್ರದಲ್ಲಿ ಹುಟ್ಟಿದವನು ದಾನಶೀಲನೂ ಧನವಂತನೂ ಶೂರನೂ ಗೀತಪ್ರಿಯನೂ ಲೋಭಿಯೂ ಆಗುತ್ತಾನೆ

ಸ್ಫುಟವಾಗ್ವ್ಯಸನೀ ರಿಪುಹಾ ।
ಸಾಹಸಿಕ ಶ್ಶತಭಿಷಜಿ ದುರ್ಗ್ರಾಹ್ಯಃ ॥
ಭಾದ್ರಪದಾ ಸೂದ್ವಿಗ್ನಃ ।
ಸ್ತ್ರೀ ವಿಜಿತಧನೀ ಪಟುರದಾತಾ ॥೧೩॥

ಶತತಾರಾ ನಕ್ಷತ್ರದಲ್ಲಿ ಹುಟ್ಟಿದವನು ಸ್ಪಷ್ಟವಾಗಿ ಮಾತನಾಡುವವನೂ ವ್ಯಸನಿಯೂ ಶತ್ರುಗಳನ್ನು ಧ್ವಂಸ ಮಾಡುವವನೂ ಸಾಹಸಿಕನೂ ಹಿಡಿತಕ್ಕೆ ಸಿಕ್ಕದವನೂ ಆಗುತ್ತಾನೆ. ಪೂರ್ವಾಭಾದ್ರಾ ನಕ್ಷತ್ರದಲ್ಲಿ ಹುಟ್ಟಿದವನು ದುಃಖಿತನೂ ಹೆಂಗಸರಿಂದ ಗೆಲ್ಲಲ್ಪಟ್ಟವನೂ ಧನವಂತನೂ ಸಮರ್ಥನೂ ದಾನ ಕೊಡದವನೂ ಆಗುತ್ತಾನೆ

ವಕ್ತಾ ಸುಖೀ ಪ್ರಜಾವಾನ್ ।
ಜಿತಶತ್ರು ಧಾರ್ಮಿಕೋ ದ್ವಿತೀಯಾಸು ॥
ಸಂಪೂರ್ಣಾಂಗ ಸ್ಸುಭಗಶ್ಶೂರಃ ।
ಶುಚಿರರ್ಥವಾನ್ ಪೌಷ್ಣೇ ॥೧೪॥

ಉತ್ತರಾಭಾದ್ರಾ ನಕ್ಷತ್ರದಲ್ಲಿ ಹುಟ್ಟಿದವನು ವಾಚಾಳಿಯೂ ಸುಖಿಯೂ ಮಕ್ಕಳುಳ್ಳವನೂ ಶತ್ರುಗಳನ್ನು ಜಯಿಸಿದವನೂ ಧಾರ್ಮಿಕನೂ ಆಗುತ್ತಾನೆ. ರೇವತಿ ನಕ್ಷತ್ರದಲ್ಲಿ ಹುಟ್ಟಿದವನು ಸಂಪೂರ್ಣವಾದ ಅವಯವಗಳುಳ್ಳವನೂ ಸುಭಗನೂ ಶೂರನೂ ಶುಚಿಯೂ ಧನವಂತನೂ ಆಗುತ್ತಾನೆ

॥ಚಂದಾಧಿಷ್ಠಿತ ರಾಶಿಫಲಂ ॥

ವೃತ್ತಾ ತಾಮ್ರ ದೃಗುಷ್ಣ ಶಾಕಲಘುಭುಕ್ ಕ್ಷಿಪ್ರಪ್ರಸಾದೋಟನಃ ।
ಕಾಮೀ ದುರ್ಬಲ ಜಾನುರಸ್ಥಿರ ಧನಶ್ಶೂರೋಂಗನಾವಲ್ಲಭಃ ॥
ಸೇವಾಜ್ಞಃ ಕುನಖೀ ವ್ರಣಾಂಕಿತ ಶಿರಾಮಾನೀ ಸಹೋತ್ಥಾಗ್ರಜಃ ।
ಶಕ್ತ್ಯಾ ಪಾಣಿತಲೇಂಕಿತೋತಿ ಚಪಲಸ್ತೋಯೇತಿ ಭೀರುಃ ಕ್ರಿಯೇ ॥೧೫॥

ಚಂದ್ರನು ಮೇಷದಲ್ಲಿರುವಾಗ ಹುಟ್ಟಿದವನು ಗುಂಡಾದ ಕೆಂಪು ಕಣ್ಣುಗಳುಳ್ಳವನೂ ಉಷ್ಣಾಹಾರ ಶಾಕಾಹಾರಗಳಲ್ಲಿ ಪ್ರೀತಿಯುಳ್ಳವನೂ ಅಲ್ಪಾಹಾರಿಯೂ ಬೇಗ ಪ್ರಸನ್ನನಾಗುವವನೂ ಸಂಚಾರ ಶೀಲನೂ, ಕಾಮಿಯೂ ದುರ್ಬಲವಾದ ಕಣಕಾಲುಗಳುಳ್ಳವನೂ ಚಂಚಲವಾದ ಧನ ಉಳ್ಳವನೂ ಶೂರನೂ ಹೆಂಗಸರಿಗೆ ಬೇಕಾದವನೂ ಸೇವೆಯನ್ನರಿತವನೂ ಕುತ್ಸಿತವಾದ ಉಗುರುಳ್ಳವನೂ ವ್ರಣಗಳ ಚಿಹ್ನೆಯಿಂದ ಕೂಡಿರುವ ಶಿರಸ್ಸುಳ್ಳವನೂ ಮಾನಿಯೂ ಅಣ್ಣ ತಮ್ಮಂದಿರಲ್ಲಿ ಹಿರಿಯವನೂ ಶಕ್ತಿಯೆಂಬ ರೇಖೆಯು ಕೈಯ್ಯಲ್ಲುಳ್ಳವನೂ ಅತಿ ಚಪಲನೂ ನೀರಿನಲ್ಲಿ ಭಯಪಡುವವನೂ ಆಗಿರುತ್ತಾನೆ.

ಕಾಂತಃ ಖೇಲಗತಿಃ ಪೃಥೂರು ವದನಃ ಪೃಷ್ಠಾಸ್ಯ ಪಾರ್ಶ್ವೇಂಕಿತಃ ।
ತ್ಯಾಗೀಕ್ಲೇಶ ಸಹಃ ಪ್ರಭುಃ ಕಕುದವಾನ್ ಕನ್ಯಾಪ್ರಜಃ ಶ್ಲೇಷ್ಮಲಃ ॥
ಪೂರ್ವೈರ್ಬಂಧುಧನಾತ್ಮಜೈರ್ವಿರಹಿತಃ ಸೌಭಾಗ್ಯ ಯುಕ್ತಃ ಕ್ಷಮೀ ।
ದೀಪ್ತಾಗ್ನಿಃ ಪ್ರಮದಾ‌ಪ್ರಿಯಃ ಸ್ಥಿರ ಸುಹೃನ್ಮಧ್ಯಾಂತ ಸೌಖ್ಯೋ ಗವಿ ॥೧೬॥

ಚಂದ್ರನು ವೃಷಭದಲ್ಲಿರುವಾಗ ಹುಟ್ಟಿದವನು ಮನೋಹರನೂ ವಿಲಾಸ ಪ್ರಿಯನೂ ದೊಡ್ಡದಾದ ಮುಖವೂ ತೊಡೆಗಳೂ ಉಳ್ಳವನೂ ಪೃಷ್ಠ ಮುಖ, ಪಾರ್ಶ್ವಗಳು ಈ ಭಾಗಗಳಲ್ಲಿ ಚಿಹ್ನೆ (ಗುರುತು)ಗಳುಳ್ಳವನೂ ತ್ಯಾಗಿಯೂ ದುಃಖವನ್ನು ಸಹಿಸುವವನೂ ಪ್ರಭುವೂ ಬಲವಾದ (ದಪ್ಪವಾದ) ಭುಜಗಳುಳ್ಳವನೂ ಹೆಣ್ಣು ಮಕ್ಕಳುಳ್ಳವನೂ ಕಫಪ್ರಕೃತಿಯವನೂ ಹಿಂದಿನ ಬಂಧುಗಳು ಧನ, ಮಕ್ಕಳು ಇವರಿಂದ ದೂರ ಮಾಡಲ್ಪಟ್ಟವನೂ ಸೌಭಾಗ್ಯದಿಂದ ಕೂಡಿದವನೂ (ಶಾಂತ ಶೀಲನೂ) ಕ್ಷಮಾಗುಣವುಳ್ಳವನೂ ಅಧಿಕವಾದ ಹಸಿವು ಉಳ್ಳವನೂ ಹೆಂಗಸರಿಗೆ ಪ್ರಿಯನೂ ಸ್ಥಿರವಾದ ಸ್ನೇಹಿತನುಳ್ಳವನೂ ಮಧ್ಯ ಮತ್ತು ಕೊನೆಯಲ್ಲಿ ಸೌಖ್ಯವುಳ್ಳ ವನೂ ಆಗಿರುತ್ತಾನೆ.

ಸ್ತ್ರೀಲೋಲ ಸ್ಸುರತೋಪಚಾರ ಕುಶಲ ಸ್ತಾಮ್ರೇಕ್ಷಣಃ ಶಾಸ್ತ್ರವಿತ್ ।
ದೂತಃ ಕುಂಚಿತ ಮೂರ್ಧಜಃ ಪಟುಮತಿರ್ಹಾಸ್ಯೇಂ ಗಿತದ್ಯೂತವಿತ್ ॥
ಚಾರ್ವಂಗಃ ಪ್ರಿಯವಾಕ್ ಪ್ರಭಕ್ಷಣ ರುಚಿರ್ಗೀತ ಪ್ರಿಯೋ ನೃತ್ಯವಿತ್ ।
ಕ್ಲೀಬೈರ್ಯಾತಿ ರತಿಂ ಸಮುನ್ನತ ನಸಶ್ಚಂದ್ರೇ ತೃತೀಯರ್ಕ್ಷಗೇ ॥೧೭॥

ಚಂದ್ರನು ಮಿಥುನದಲ್ಲಿರುವಾಗ ಹುಟ್ಟಿದವನು ಸ್ತ್ರೀಲೋಲನೂ ಸುರತೋಪಚಾರದಲ್ಲಿ ಕುಶಲನೂ ಕೆಂಪಾದ ನೇತ್ರಗಳುಳ್ಳವನೂ (ಶ್ಯಾಮಲ ವರ್ಣವೆಂತ ಪಾಠಾಂತರವಿದೆ) ಶಾಸ್ತ್ರ ವನ್ನು ತಿಳಿ

ದವನೂ ಧೂರ್ತನೂ ವಕ್ರವಕ್ರವಾದ ತಲೆಗೂದಲುಳ್ಳವನು (ಗುಂಗುರು ಕೂದಲು) ಚುರುಕು ಬುದ್ಧಿಯುಳ್ಳವನೂ ಹಾಸ್ಯ, ಇಂಗಿತ ಜ್ಞಾನ, ದ್ಯೂತ ಇವುಗಳನ್ನು ತಿಳಿದವನೂ ಸುಂದರನೂ ಪ್ರಿಯವಾದ ಮಾತನಾಡುವವನೂ ಭಕ್ಷಣಪ್ರಿಯನೂ ಸಂಗೀತಪ್ರಿಯನೂ ನೃತ್ಯವನ್ನರಿತವನೂ ನಪುಂಸಕರೊಡನೆ ರತಿಯನ್ನು ಹೊಂದುವವನೂ ಉದ್ದವಾದ ಮೂಗುಳ್ಳವನೂ ಆಗಿರುತ್ತಾನೆ.

ಆವಕ್ರ ದ್ರುತಗಃ ಸಮುನ್ನತ ಕಟಿಃ ಸ್ತ್ರೀ ನಿರ್ಜಿತಃ ಸತ್ಸುಹೃತ್ ।
ದೈವಜ್ಞಃ ಪ್ರಚುರಾಲಯಃ ಕ್ಷಯ ಧನೈಃ ಸಂಯುಜ್ಯತೇ ಚಂದ್ರವತ್ ॥
ಹ್ರಸ್ವಃ ಪೀನಗಳಃ ಸಮೇತಿ ಚ ವಶಂ ಸಾಮ್ನಾ ಸುಹೃದ್ವತ್ಸಲ ।
ಸ್ತೋಯೋದ್ಯಾನ ರತಃ ಸ್ವವೇಶ್ಮ ಸಹಿತೇ ಜಾತಃ ಶಶಾಂಕೇ ನರಃ ॥೧೮॥

ಚಂದ್ರನು ಕರ್ಕಾಟಕದಲ್ಲಿರುವಾಗ ಹುಟ್ಟಿದವನು ಒಲೆದಾಡುತ್ತಾ ವೇಗವಾಗಿ ನಡೆಯುವವನೂ, ಉನ್ನತವಾದ ಸೊಂಟವುಳ್ಳವನೂ, ಸ್ತ್ರೀಯರಿಂದ ಜಯಿಸಲ್ಪಟ್ಟವನೂ ಒಳ್ಳೆಯ ಸ್ನೇಹಿತರುಳ್ಳ ವನೂ ಜ್ಯೋತಿಷ ತಿಳಿದವನೂ ಒಳ್ಳೆಯ ಮನೆಯುಳ್ಳವನೂ ಚಂದ್ರನ ಹಾಗೆ (ವೃದ್ಧಿ ಕ್ಷಯ) ಹೆಚ್ಚು ಕಡಿಮೆಯಾಗುವ ಹಣದಿಂದ ಕೂಡಿದವನೂ ಕುಳ್ಳನೂ ಸ್ಥೂಲವಾದ ಕೊರಳುಳ್ಳವನೂ ಸಾಮೋಪಾಯದಿಂದ ವಶನಾಗತಕ್ಕವನೂ ಸ್ನೇಹಿತರಿಗೆ ಪ್ರೀತಿಯುಳ್ಳವನೂ ನೀರು, ಉದ್ಯಾನ ಇವುಗಳಲ್ಲಿ ರತಿಯುಳ್ಳವನೂ ಆಗಿರುತ್ತಾನೆ.

ತೀಕ್ಷ್ಣಃ ಸ್ಥೂಲ ಹನುರ್ವಿಶಾಲ ವದನಃ ಪಿಂಗೇ ಕ್ಷಣೋಲ್ಪಾತ್ಮಜಃ ।
ಸ್ತ್ರೀದ್ವೇಷೀ ಪ್ರಿಯಮಾಂಸ ಕಾನನ ನಗಃ ಕುಪ್ಯತ್ಯ ಕಾರ್ಯೇ ಚಿರಮ್ ॥
ಕ್ಷುತ್ತೃಷ್ಣೋದರ ದಂತಮಾನ ಸರುಜಾ ಸಂಪೀಡಿತಸ್ತ್ಯಾಗವಾನ್ ।
ವಿಕ್ರಾಂತಃ ಸ್ಥಿರಧೀಸ್ಸು ಗರ್ವಿತಮನಾ ಮಾತುರ್ವಿಧೇಯೋರ್ಕಭೇ ॥೧೯॥

ಚಂದ್ರನು ಸಿಂಹದಲ್ಲಿರುವಾಗ ಹುಟ್ಟಿದವನು ಕ್ರೂರ ಸ್ವಭಾವದವನೂ ದಪ್ಪವಾದ ಭುಜವುಳ್ಳ ವನೂ ದೊಡ್ಡದಾದ ಮುಖವುಳ್ಳವನೂ ಕೆಂಪು ಬೆಳ್ಪುಗಳುಳ್ಳ ಕಣ್ಣುಗಳುಳ್ಳವನೂ ಸ್ವಲ್ಪ ಮಕ್ಕಳುಳ್ಳವನೂ ಹೆಂಗಸರಲ್ಲಿ ದ್ವೇಷ ಉಳ್ಳವನೂ ಮಾಂಸಪ್ರಿಯನೂ ಬೆಟ್ಟ, ಕಾಡುಗಳಲ್ಲಿ ಪ್ರೀತಿಯುಳ್ಳವನೂ ಕೆಲಸವಿಲ್ಲದ ಕೆಲಸಕ್ಕಾಗಿ ಬಹುಕಾಲ ಶ್ರಮಿಸಿ ಕೋಪಿಸತಕ್ಕವನೂ ಹಸಿವು, ಬಾಯಾರಿಕೆ, ಹೊಟ್ಟೆ, ಹಲ್ಲುಗಳು, ಮನಸ್ಸು ಇವುಗಳಿಂದ ಹುಟ್ಟಿದ ರೋಗದಿಂದ ಪೀಡಿತ ನಾದವನೂ, ತ್ಯಾಗಶೀಲನೂ ಜಯಶಾಲಿಯೂ ನಿಶ್ಚಲಬುದ್ಧಿಯೂ ಅಹಂಕಾರಚಿತ್ತನೂ ತಾಯಿಗೆ ವಿಧೇಯನೂ ಆಗಿರುತ್ತಾನೆ.

ವ್ರೀಡಾಮಂಥರ ಚಾರುವೀಕ್ಷಣ ಗತಿಃ ಸ್ರಸ್ತಾಂ ಸ ಬಾಹುಃ ಸುಖೀ ।
ಶ್ಲಕ್ಷ್ಣಃ ಸತ್ಯರತಃ ಕಲಾಸು ನಿಪುಣಃ ಶಾಸ್ತ್ರಾರ್ಥ ವಿದ್ಧಾರ್ಮಿಕಃ ॥
ಮೇಧಾವೀ ಸುರತಪ್ರಿಯಃ ಪರಗೃಹೈರ್ವಿತ್ತೈಶ್ಚ ಸಂಯುಜ್ಯತೇ ।
ಕನ್ಯಾಯಾಂ ಪರದೇಶಗಃ ಪ್ರಿಯವಚಾಃ ಕನ್ಯಾ ಪ್ರಜೋಲ್ಪಾತ್ಮಜಃ ॥೨೦॥

ಚಂದ್ರನು ಕನ್ಯಾ ರಾಶಿಯಲ್ಲಿರುವಾಗ ಹುಟ್ಟಿದವನು ನಾಚಿಕೆಯಿಂದ ಆಲಸ್ಯದಿಂದ ಕೂಡಿ ಮನೋಹರವಾದ ಕಣ್ಣುಗಳುಳ್ಳವನೂ ಹಾಗೆಯೇ ಇರುವ ನಡಿಗೆಯುಳ್ಳವನೂ, ಜಗುಳಿದ (ಶಿಥಿಲವಾದ) ಭುಜ ಮೂಲ ಮತ್ತು ಕೈಗಳುಳ್ಳವನೂ, ಸುಖಿಯೂ, ಮೃದುಸ್ವಭಾದವನೂ, ಸತ್ಯರತನೂ, ಕಲೆಗಳಲ್ಲಿ ನಿಪುಣನೂ, ಶಾಸ್ತ್ರಾರ್ಥ ಪರಿಜ್ಞಾನಿಯೂ, ಧಾರ್ಮಿಕನೂ, ಧಾರಣಾ ಶಕ್ತಿಯುಳ್ಳವನೂ, ಸುರತ ಪ್ರಿಯನೂ, ಬೇರೆಯವರ ಮನೆ ಮತ್ತು ಧನಗಳಿಂದ ಕೂಡಿದವನೂ, ಪರದೇಶಕ್ಕೆ ಹೋಗತಕ್ಕವನೂ, ಇಷ್ಟವಾದ ಮಾತುಗಳನ್ನಾಡತಕ್ಕವನೂ, ಹೆಚ್ಚು ಹೆಣ್ಣು ಸ್ವಲ್ಪ ಗಂಡು ಮಕ್ಕಳುಳ್ಳವನೂ ಆಗಿರುತ್ತಾನೆ.

**ದೇವಬ್ರಾಹ್ಮಣ ಸಾಧು ಪುಜನರತಃ ಪ್ರಾಜ್ಞ: ಶುಚಿ: ಸ್ತ್ರೀಜಿತಃ ।**
**ಪ್ರಾಂಶುಶ್ಚೋನ್ನತ ನಾಸಿಕಃ ಕೃಶ ಚಲದ್ಗಾತ್ರೋಟನೋರ್ಥಾನ್ವಿತಃ ॥**
**ಹೀನಾಂಗಃ ಕ್ರಯವಿಕ್ರಯೇಷು ಕುಶಲೋ ದೇವದ್ವಿನಾಮಾ ಸರುಕ್ ।**
**ಬಂಧೂನಾಮುಪಕಾರ ಕೃದ್ವಿರುಷಿತ ಸ್ತ್ಯಕ್ತಸ್ತುತೈಃ ಸಪ್ತಮೇ ॥೨೧॥**

ಚಂದ್ರನು ತುಲಾ ರಾಶಿಯಲ್ಲಿದ್ದಾಗ ಹುಟ್ಟಿದವನು, ದೇವರು, ಬ್ರಾಹ್ಮಣರು, ಸಾಧುಗಳು ಇವರ ಪೂಜೆಯಲ್ಲಿ ನಿರತನೂ, ಹೆಚ್ಚು ತಿಳಿವಳಿಕೆಯುಳ್ಳವನೂ, ಸ್ತ್ರೀಯರಿಂದ ಗೆಲ್ಲಲ್ಪಟ್ಟವನೂ, ಉದ್ದವಾಗಿರುವವನೂ, ಉನ್ನತವಾದ ಮೂಗುಳ್ಳವನೂ, ಕೃಶವಾಗಿ ಒಲೆದಾಡುವ ಮೈಯುಳ್ಳವನೂ, ಅಟನಶೀಲನೂ, ಧನವಂತನೂ, ಅಂಗಹೀನನೂ, ಕೊಳ್ಳುವುದು ಮಾರುವುದರಲ್ಲಿ ಕುಶಲನೂ, ದೇವರ ಹೆಸರುಳ್ಳವನೂ ಅಥವಾ ಎರಡು ಹೆಸರುಗಳುಳ್ಳವನೂ, ರೋಗಿಯೂ, ಬಂಧುಗಳಿಗೆ ಉಪಕಾರ ಮಾಡುವವನೂ ಮತ್ತು ಅವರಿಂದ ತಿರಸ್ಕರಿಸಲ್ಪಡುವವನೂ, ಅವರಿಂದಲೇ ಬಿಡಲ್ಪಡ ತಕ್ಕವನೂ ಆಗಿರುತ್ತಾನೆ.

**ಪೃಥುಲ ನಯನ ವಕ್ಷಾ ವೃತ್ತ ಜಂಘೋರುಜಾನುಃ ।**
**ಜನಕ ಗುರುವಿಯುಕ್ತ: ಶೈಶವೇ ವ್ಯಾಧಿತಶ್ಚ ॥**
**ನರಪತಿ ಕುಲಪೂಜ್ಯಃ ಪಿಂಗಲಃ ಕ್ರೂರಚೇಷ್ಟೋ ।**
**ಝಷ ಕುಲಿಶ ಖಗಾಂಕಶ್ಛನ್ನ ಪಾಪೋಲಿ ಜಾತಃ ॥೨೨॥**

ಚಂದ್ರನು ವೃಶ್ಚಿಕದಲ್ಲಿದ್ದಾಗ ಹುಟ್ಟಿದವನು ವಿಸ್ತಾರವಾದ ಕಣ್ಣೂ ಎದೆಯೂ ಉಳ್ಳವನೂ ಗುಂಡಾದ ಮೊಣಕಾಲು, ತೊಡೆ, ಮತ್ತು ತೋಳುಗಳುಳ್ಳವನೂ, ತಂದೆ ಮತ್ತು ಗುರುಗಳಿಂದ ಬಿಡಲ್ಪಟ್ಟವನೂ ಬಾಲ್ಯದಲ್ಲಿ ರೋಗಿಯೂ ರಾಜಪೂಜ್ಯನೂ, ಪಿಂಗಳ (ಕೆಂಪು ಬಿಳಿಯ ಮಿಶ್ರ) ವರ್ಣದವನೂ ಕ್ರೂರವಾದ ವ್ಯಾಪಾರ ಉಳ್ಳವನೂ, ಅಂಗದಲ್ಲಿ ಮತ್ಸ್ಯ ವಜ್ರ ಗರುಡರೇಖೆಗಳುಳ್ಳವನೂ ರಹಸ್ಯವಾಗಿ ಪಾಪ ಮಾಡತಕ್ಕವನೂ ಆಗಿರುತ್ತಾನೆ.

**ವ್ಯಾದೀರ್ಘಾಸ್ಯ ಶಿರೋಧರಃ ಪಿತೃಧನಸ್ತ್ಯಾಗೀ ಕವಿರ್ವೀರ್ಯವಾನ್ ।**
**ವಕ್ತಾಸ್ಥೂಲರದಶ್ರವೋ ಧರನಸಃ ಕರ್ಮೋದ್ಯತಃ ಶಿಲ್ಪವಿತ್ ॥**

ಕುಬ್ಜಾಂ ಸಃ ಕುನಖೀ ಸಮಾಂಸಲ ಭುಜಃ ಪ್ರಾಗಲ್ಭ್ಯವಾನ್ ಧರ್ಮವಿತ್ ।
ಬಂಧುದ್ವಿಟ್ ನ ಬಲಾತ್ಸಮೇತಿ ಚ ವಶಂ ಸಾಮ್ನೈಕ ಸಾಧ್ಯೋಽಶ್ವಜಃ ॥೨೩॥

ಚಂದ್ರನು ಧನುರಾಶಿಯಲ್ಲಿರುವಾಗ ಹುಟ್ಟಿದವನು ಉದ್ದವಾದ ಮುಖವೂ, ಕಂಠವೂ ಉಳ್ಳವನೂ, ಪಿತೃಧನವುಳ್ಳವನೂ, ತ್ಯಾಗಿಯೂ, ಕವಿಯೂ, ವೀರ್ಯವಂತನೂ, ವಾಚಾಳಿಯೂ, ಸ್ಥೂಲವಾಗಿರುವ ಹಲ್ಲುಗಳು, ಕಿವಿ, ತುಟಿ ಮತ್ತು ಮೂಗುಳ್ಳವನೂ, ಕೆಲಸ ಮಾಡಲು ಯತ್ನಿಸುವವನೂ, ಶಿಲ್ಪಜ್ಞಾನಿಯೂ, ಕುಗ್ಗಿದ ಭುಜವುಳ್ಳವನೂ, ಕುತ್ಸಿತವಾದ ಉಗುರುಳ್ಳವನೂ, ಮಾಂಸಭರಿತವಾದ ಭುಜಗಳುಳ್ಳವನೂ, ಪ್ರೌಢಿಮೆಯುಳ್ಳವನೂ ಧರ್ಮಜ್ಞನೂ, ಬಂಧುದ್ವೇಷಿಯೂ, ಬಲದಿಂದ ವಶನಾಗದೆ ಸಾಮೋಪಾಯದಿಂದಲೇ ವಶನಾಗತಕ್ಕವನೂ ಆಗಿರುತ್ತಾನೆ.

ನಿತ್ಯಂ ಲಾಲಯತಿ ಸ್ವದಾರ ತನಯಾನ್ ಧರ್ಮಧ್ವಜೋಽಧಃ ಕೃಶಃ ।
ಸ್ವಕ್ಷಃ ಕ್ಷಾಮಕಟಿರ್ಗೃಹೀತ ವಚನಃ ಸೌಭಾಗ್ಯ ಯುಕ್ತೋಽಲಸಃ ॥
ಶೀತಾಲುರ್ಮನು ಜೋಽಟನಶ್ಚ ಮಕರೇ ಸತ್ವಾಧಿಕಃ ಕಾವ್ಯಕೃತ್ ।
ಲುಬ್ಧೋಽಗಮ್ಯ ಜರಾಂಗನಾ ಸುನಿರತಃ ಸಂತ್ಯಕ್ತ ಲಜ್ಜೋಽಘೃಣಃ ॥೨೪॥

ಚಂದ್ರನು ಮಕರದಲ್ಲಿದ್ದಾಗ ಹುಟ್ಟಿದವನು ಯಾವಾಗಲೂ ಹೆಂಡಿರು ಮಕ್ಕಳನ್ನು ಲಾಲಿಸುವವನೂ, ಧರ್ಮವೇ ಗುರುತಾಗುಳ್ಳವನೂ, ಶರೀರದ ಕೆಳಭಾಗದಲ್ಲಿ ಕೃಶನೂ, ಒಳ್ಳೆಯ ಕಣ್ಣುಳ್ಳವನೂ, ಬಡ ನಡುವಿರುವವನೂ, ಹೇಳಿದ ಮಾತನ್ನು ಕೂಡಲೇ ತಿಳಿದುಕೊಳ್ಳುವವನೂ, ಸೌಭಾಗ್ಯವಂತನೂ, ಆಲಸ್ಯನೂ, ಶೀತಸ್ವಭಾವದವನೂ, ಸಂಚಾರಶೀಲನೂ, ಸತ್ವಗುಣವೇ ಹೆಚ್ಚಿರುವವನೂ, ಕಾವ್ಯಕರ್ತನೂ, ಲೋಭಿಯೂ, ಅಗಮ್ಯಳಾದ ವೃದ್ಧಸ್ತ್ರೀಯರಲ್ಲಿ ರತಿಯುಳ್ಳವನೂ, ಲಜ್ಜೆಯನ್ನು ಬಿಟ್ಟವನೂ, ದಯೆಯಿಲ್ಲದವನೂ, ಆಗಿರುತ್ತಾನೆ.

ಕರಭಗಲಃ ಸಿರಾಲುಃ ಖರಲೋಮಶ ದೀರ್ಘತನುಃ ।
ಪೃಥು ಚರಣೋರು ಪೃಷ್ಠ ಜಘನಾಸ್ಯ ಕಟಿರ್ಬಧಿರಃ ॥
ಪರವನಿತಾರ್ಥ ಪಾಪನಿರತಃ ಕ್ಷಯವೃದ್ಧಿಯುತಃ ।
ಪ್ರಿಯ ಕುಸುಮಾನುಲೇಪನ ಸುಹೃದ್ಘಟ ಜೋಽಧ್ವ ಸಹಃ ॥೨೫॥

ಚಂದ್ರನು ಕುಂಭದಲ್ಲಿರುವಾಗ ಹುಟ್ಟಿದವನು ಕತ್ತೆಯ ಕೊರಳಂತೆ ಕೊರಳುಳ್ಳವನೂ, ನರಗಳು ಹೆಚ್ಚಾಗಿ ಕಾಣುತ್ತಿರುವವನೂ, ಒರಟು ಕೂದಲುಳ್ಳವನೂ, ಉದ್ದವಾದ ಶರೀರವುಳ್ಳವನೂ, ದೊಡ್ಡದಾದ ಕಾಲುಗಳು, ತೊಡೆಗಳು, ಪೃಷ್ಠಭಾಗ, ಜಘನ, (ಕಟಿ ಪಶ್ಚಾದ್ಭಾಗ) ಮುಖ ಮತ್ತು ಸೊಂಟವುಳ್ಳವನೂ, ಕಿವುಡನೂ, ಬೇರೆ ಹೆಂಗಸರು, ಬೇರೆಯವರ ಧನ, ಇವುಗಳಲ್ಲಿ ನಿರತನೂ, ಪಾಪಿಯೂ, ಕ್ಷಯ ಮತ್ತು ವೃದ್ಧಿಗಳುಳ್ಳವನೂ, ಹೂ, ಗಂಧ, ಮುಂತಾದುವುಗಳಲ್ಲಿಯೂ, ಸ್ನೇಹಿತರಲ್ಲಿಯೂ ಹೆಚ್ಚು ಪ್ರೀತಿಯುಳ್ಳವನೂ, ದಾರಿ ನಡೆಯುವುದನ್ನು ಸಹಿಸುವವನೂ ಆಗಿರುತ್ತಾನೆ.

ಜಲಪರಧನ ಭೋಕ್ತಾದಾರ ವಾಸೋನುರಕ್ತಃ ।
ಸಮರುಚಿರ ಶರೀರ ಸ್ತುಂಗನಾಸೋ ಬೃಹತ್ಕಃ ॥
ಅಭಿಭವತಿ ಸಪತ್ನಾನ್ ಸ್ತ್ರೀ ಜಿತಶ್ಚಾರು ದೃಷ್ಟಿ ।
ದ್ಯುತಿನಿಧಿ ಧನಭೋಗೀ ಪಂಡಿತಶ್ಚಾಂತ್ಯರಾಶೌ ॥೨೬॥

ಚಂದ್ರನು ಮೀನದಲ್ಲಿರುವಾಗ ಹುಟ್ಟಿದವನು ನೀರಿನಲ್ಲಿರುವ ವಸ್ತುಗಳಿಂದುಂಟಾದ ಧನವನ್ನನು ಭವಿಸುವವನೂ, ಹೆಂಡತಿ ಮತ್ತು ವಸ್ತ್ರಗಳಲ್ಲಿ ಅನುರಕ್ತನೂ, ಸಮವಾಗಿಯೂ ಮನೋಹರ ವಾಗಿಯೂ ಇರುವ ದೇಹವುಳ್ಳವನೂ, ಉನ್ನತವಾದ ಮೂಗುಳ್ಳವನೂ, ಸ್ಥೂಲನೂ, ಶತ್ರು ಗಳನ್ನು ಗೆಲ್ಲತಕ್ಕವನೂ, ಹೆಂಗಸರಿಂದ ಗೆಲ್ಲಲ್ಪಟ್ಟವನೂ, ಮನೋಹರವಾದ ಕಣ್ಣುಳ್ಳವನೂ, ಕಾಂತಿಯುಳ್ಳವನೂ, ನಿಧಿಧನವನ್ನನುಭವಿಸುವವನೂ, ಪಂಡಿತನೂ ಆಗಿರುತ್ತಾನೆ.

ಬಲವತಿ ರಾಶೌತದಧಿ ಪತೌ ಚ ।
ಸ್ವಬಲಯುತಃ ಸ್ಯಾದ್ಯದಿ ತುಹಿನಾಂಶುಃ ॥
ಕಥಿತ ಫಲಾನಾಮ ವಿಕಲದಾತಾ ।
ಶಶಿವದತೋನ್ಯೆಪ್ಯನು ಪರಿಚಿಂತ್ಯಾಃ ॥೨೭॥

ರಾಶಿಯೂ ರಾಶ್ಯಧಿಪತಿಯೂ ಚಂದ್ರನೂ ಬಲಶಾಲಿಗಳಾಗಿದ್ದರೆ ಮೇಲೆ ಹೇಳಿದ ಫಲಗಳನ್ನು ಸಂಪೂರ್ಣವಾಗಿ ಕೊಡುತ್ತಾನೆ ಇವರಲ್ಲಿ ಇಬ್ಬರು ಬಲಶಾಲಿಗಳಾಗಿದ್ದರೆ ಅಥವಾ ಒಬ್ಬನೇ ಬಲಶಾಲಿಯಾಗಿದ್ದರೆ ಫಲವು ಕಡಿಮೆಯಾಗುವುದು

## ॥ ರವ್ಯಾದಿ ಗ್ರಹಾಧಿಷ್ಟಿತ ರಾಶಿಫಲಂ ॥

ಪ್ರಥಿತಶ್ಚ ತುರೋಟನೋಲ್ಪವಿತ್ತಃ ।
ಕ್ರಿಯಗೇತ್ಸ್ವಾಯುಧ ಭೃದ್ವಿ ತುಂಗಭಾಗೇ ॥
ಗನಿವಸ್ತ್ರ ಸುಗಂಧಪಣ್ಯ ಜೀವೀ ।
ವನಿತಾದ್ವಿಟ್ ಕುಶಲಶ್ಚಗೇಯವಾದ್ಯೇ ॥೨೮॥

ಸೂರ್ಯನು ಮೇಷದಲ್ಲಿದ್ದರೆ ಪ್ರಖ್ಯಾತನೂ, ಚತುರನೂ, . ಸಂಚಾರಶೀಲನೂ, ಅಲ್ಪದ್ರವ್ಯವುಳ್ಳವನೂ, ಆಯುಧಧಾರಿಯೂ ಆಗುವನು. ಇದು ಸೂರ್ಯನು ಉಚ್ಚಭಾಗದಲ್ಲಿಲ್ಲದಿರುವಾಗಿನ ಫಲ ವಾಗಿರುತ್ತದೆ. ಉಚ್ಚಭಾಗದಲ್ಲಿದ್ದರೆ ಧನವಂತನಾಗುತ್ತಾನಲ್ಲದೆ ಮೇಲಿನ ಫಲಗಳನ್ನು ವಿಶೇಷ ವಾಗಿ ಹೊಂದುತ್ತಾನೆ. ರವಿಯು ವೃಷಭದಲ್ಲಿದ್ದರೆ ವಸ್ತ್ರ ಸುಗಂಧದ್ರವ್ಯ ಇವುಗಳ ವ್ಯಾಪಾರದಿಂದ ಜೀವಿಸುವವನು. ಸ್ತ್ರೀಯರಲ್ಲಿ ದ್ವೇಷವುಳ್ಳವನೂ, ಸಂಗೀತ ವಾದ್ಯಗಳಲ್ಲಿ ಕುಶಲನೂ ಆಗಿರುತ್ತಾನೆ.

ವಿದ್ಯಾಜ್ಯೋತಿಷವಿತ್ತವಾನ್ ಮಿಥುನಗೇ ಭಾನೌ ಕುಳೀರೇಸ್ಥಿತೇ ।
ತೀಕ್ಷ್ಣೋ ಸ್ವಃ ಪರಕಾರ್ಯ ಕೃಚ್ಛ್ರಮ ಪಥಃ ಕ್ಲೇಶೈಶ್ಚ ಸಂಯುಜ್ಯತೇ ॥

ಸಿಂಹಸ್ಥೇ ವನಶೈಲ ಗೋಕುಲ ರತಿರ್ವೀರ್ಯಾನ್ವಿತೋಜ್ಞಃ ಪುಮಾನ್ ।
ಕನ್ಯಾಸ್ಥೇ ಲಿಪಿಲೇಖ್ಯ ಕಾವ್ಯಗಣಿತ ಜ್ಞಾನಾನ್ವಿತಃ ಸ್ತ್ರೀ ವಪುಃ ॥೨೯॥

ಸೂರ್ಯನು ಮಿಥುನದಲ್ಲಿದ್ದರೆ ಜ್ಯೋತಿಷಶಾಸ್ತ್ರಜ್ಞನೂ ಸಂಪತ್ತುಳ್ಳವನೂ ಆಗಿರುತ್ತಾನೆ. ಸೂರ್ಯನು ಕರ್ಕಾಟಕದಲ್ಲಿದ್ದರೆ ಕಠಿಣ ಸ್ವಭಾವದವನೂ, ನಿರ್ಧನನೂ, ಇತರರ ಕೆಲಸಗಳನ್ನು ಮಾಡತಕ್ಕವನೂ, ಶ್ರಮಪಡತಕ್ಕವನೂ, ದುಃಖಿಯೂ ಆಗಿರುತ್ತಾನೆ. ಸೂರ್ಯನು ಸಿಂಹದಲ್ಲಿದ್ದರೆ ವನ, ಬೆಟ್ಟ, ಪಶುಗಳು ಮುಂತಾದವುಗಳಲ್ಲಿ ಪ್ರೀತಿಯುಳ್ಳವನೂ, ವೀರ್ಯವಂತನೂ, ತಿಳುವಳಿಕೆ ಇಲ್ಲದವನೂ ಆಗಿರುತ್ತಾನೆ. ಸೂರ್ಯನು ಕನ್ಯೆಯಲ್ಲಿದ್ದರೆ ಬರಹ, ಚಿತ್ರ, ಲೇಖನಾದಿಗಳು, ಕಾವ್ಯ, ಗಣಿತ ಇವುಗಳಲ್ಲಿ ತಿಳುವಳಿಕೆಯುಳ್ಳವನೂ, ಸ್ತ್ರೀ ಸ್ವಭಾವವುಳ್ಳವನೂ, ಆಗಿರುತ್ತಾನೆ.

ಜಾತಸ್ತೌಲಿನಿ ಶೌಂಡಿಕೋಧ್ವನಿರತೋ ಹೈರಣ್ಯಕೋ ನೀಚಕೃತ್ ।
ಕ್ರೂರಸ್ಸಾಹಸಿಕೋ ವಿಷಾರ್ಜಿತ ಧನಃ ಶಾಸ್ತ್ರಾಂತ ಗೋಲಿಸ್ಥಿತೇ ॥
ಸತ್ಪೂಜ್ಯೋ ಧನವಾನ್ ಧನುರ್ಧರಗತೇ ತೀಕ್ಷ್ಣೋ ಭಿಷಕ್ಕಾರುಕೋ ।
ನೀಚೋಜ್ಞಃ ಕುವಣಿಜ್ಮೃಗೇಲ್ಪ ಧನವಾನ್ ಲುಬ್ಧೋನ್ಯ ಭಾಗ್ಯೇರತಃ ॥೩೦॥

ಸೂರ್ಯನು ತುಲೆಯಲ್ಲಿದ್ದರೆ ಹೆಂಡವನ್ನು ಮಾಡಿ ಮಾರುವವನೂ, ಪ್ರಯಾಣದಲ್ಲಿ ಆಸಕ್ತಿಯುಳ್ಳವನೂ, ಸ್ವರ್ಣಕಾರನೂ, ಕೆಟ್ಟ ಕೆಲಸ ಮಾಡತಕ್ಕವನೂ ಆಗಿರುತ್ತಾನೆ. ಸೂರ್ಯನು ವೃಶ್ಚಿಕದಲ್ಲಿದ್ದರೆ ಶೂರನೂ, ಸಾಹಸಿಕನೂ, ವಿಷದಿಂದ ಸಂಪಾದಿಸಿದ ಧನವುಳ್ಳವನೂ, ವಿದ್ಯೆಯಲ್ಲಿ ಪಾರಂಗತನೂ ಆಗಿರುತ್ತಾನೆ. ಸೂರ್ಯನು ಧನುಸ್ಸಿನಲ್ಲಿದ್ದರೆ ಸಜ್ಜನರಿಂದ ಪೂಜಿಸಲ್ಪಡತಕ್ಕವನೂ, ಧನವಂತನೂ, ಕ್ರೂರನೂ, ವೈದ್ಯನೂ, ಶಿಲ್ಪಜ್ಞನೂ ಆಗಿರುತ್ತಾನೆ. ಸೂರ್ಯನು ಮಕರದಲ್ಲಿದ್ದರೆ ನೀಚನೂ ತಿಳಿವಿಲ್ಲದವನೂ (ಮೂರ್ಖನೂ), ದುಷ್ಟ ವ್ಯಾಪಾರ ಮಾಡುವವನೂ, ಅಲ್ಪ ಧನವಿರುವವನೂ, ಲೋಭಿಯೂ ಇತರರ ಭಾಗ್ಯದಲ್ಲಿ ಪ್ರೀತಿಯುಳ್ಳವನೂ ಆಗಿರುತ್ತಾನೆ.

ನೀಚೋ ಘಟೇ ತನಯ ಭಾಗ್ಯ ಪರಿಚ್ಯುತೋಸ್ವ ।
ಸ್ತೋಯೋತ್ಥಪಣ್ಯ ವಿಭವೋ ವನಿತಾದೃತೋಂತ್ಯೇ ॥
ನಕ್ಷತ್ರ ಮಾನವತನು ಪ್ರತಿಮೇ ವಿಭಾಗೇ ।
ಲಕ್ಷ್ಯಾದಿ ಶೇತ್ತುಹಿನರಶ್ಮಿ ದಿನೇಶಯುಕ್ತೇ ॥೩೧॥

ಸೂರ್ಯನು ಕುಂಭದಲ್ಲಿದ್ದರೆ ನೀಚನೂ, ಮಕ್ಕಳು ಮತ್ತು ಭಾಗ್ಯಗಳನ್ನು ಕಳೆದುಕೊಂಡವನೂ, ಧನರಹಿತನೂ ಆಗಿರುತ್ತಾನೆ. ಸೂರ್ಯನು ಮೀನದಲ್ಲಿದ್ದರೆ ನೀರಿನಲ್ಲಿ ಸಿಕ್ಕುವ ಪದಾರ್ಥಗಳ ವ್ಯಾಪಾರದಿಂದ ಐಶ್ವರ್ಯವನ್ನು ಹೊಂದಿದವನೂ, ಹೆಂಗಸರಿಂದ ಆದರಿಸಲ್ಪಡತಕ್ಕವನೂ ಆಗಿರುತ್ತಾನೆ. ಸೂರ್ಯಚಂದ್ರರು ಒಂದೇ ರಾಶಿಯಲ್ಲಿ ಕೂಡಿದ್ದರೆ ಆ ರಾಶಿಗೆ ಹೇಳಿದ ಅವಯವದಲ್ಲಿ "ಕಾಲಾಂಗಾನಿ" ಎಂಬಂತೆ ಮಚ್ಚೆ ಇರುವುದೆಂದು ಹೇಳಬೇಕು. ಮೇಷದಲ್ಲಿ ರವಿ ಚಂದ್ರರಿದ್ದರೆ ತಲೆಯಲ್ಲಿ ಮಚ್ಚೆ ಇರುವುದೆಂದು ಹೀಗೆ ವೃಷಭಾದಿ ರಾಶಿಗಳಿಗೂ ತಿಳಿಯಬೇಕು.

ನರಪತಿ ಸತ್ಕೃತಾಟನ ಚಮೂಪ ವಣಿಕ್ಸಧನಾನ್ ।
ಕ್ಷತತನು ಚೋರಭೂರಿ ವಿಷಯಾಂಶ್ಚ ಕುಜಃ ಸ್ವಗೃಹೇ ॥
ಯುವತಿ ಜಿತಾನ್ ಸುಹೃತ್ಸು ವಿಷಮಾನ್ ಪರದಾರರತಾನ್ ।
ಕುಹಕ ಸುವೇಷ ಭೀರು ಪರುಷಾನ್ ಸಿತಭೇ ಜನಯೇತ್ ॥೩೨॥

ಕುಜನು ಮೇಷ ವೃಶ್ಚಿಕ ರಾಶಿಗಳಲ್ಲಿದ್ದರೆ, ರಾಜನಿಂದ ಸತ್ಕರಿಸಲ್ಪಡತಕ್ಕವನೂ, ಸಂಚಾರ ಶೀಲನೂ, ಸೈನ್ಯಾಧಿಪತಿಯೂ, ವಣಿಜನೂ (ವಿಕ್ರಯ ಕುಶಲನೂ), ಧನವಂತನೂ, ಘಾಯವಾದ ಮೈಯುಳ್ಳವನೂ, ಕಳ್ಳನೂ, ಹೆಚ್ಚಾದ ವಿಷಯಸುಖವುಳ್ಳವನೂ ಆಗಿರುತ್ತಾನೆ. ಕುಜನು ವೃಷಭ ತುಲಾ ರಾಶಿಗಳಲ್ಲಿದ್ದರೆ, ಸ್ತ್ರೀಯರಿಂದ ಗೆಲ್ಲಲ್ಪಟ್ಟವನೂ, ಸ್ನೇಹಿತರಲ್ಲಿ ದ್ವೇಷವುಳ್ಳವನೂ, ಪರ ಸ್ತ್ರೀರತನೂ, ಕುತ್ಸಿತನೂ, ಅಲಂಕೃತನೂ, ಭೀರುವೂ (ಭಯಶೀಲ), ಕಠಿಣನೂ ಆಗಿರುತ್ತಾನೆ.

ಬೌಧೇ ಸಹಸ್ತ ನಯವಾನ್ಸಿ ಸುಹೃತ್ಕೃತಜ್ಞೋ ।
ಗಾಂಧರ್ವಯುದ್ಧ ಕುಶಲಃ ಕೃಪಣೋಭಯೋರ್ಥೀ ॥
ಚಾಂದ್ರೇರ್ಥವಾನ್ಸಲಿಲಯಾನ ಸಮಾರ್ಜಿತಸ್ವ ।
ಪ್ರಾಜ್ಞಶ್ಚ ಭೂಮಿತನಯೇ ವಿಕಲಃ ಖಲಶ್ಚ ॥೩೩॥

ಕುಜನು ಮಿಥುನ ಕನ್ಯಾ ರಾಶಿಗಳಲ್ಲಿದ್ದರೆ, ಸಹನೆಯಿಲ್ಲದವನೂ, ಮಕ್ಕಳುಳ್ಳವನೂ, ಸ್ನೇಹಿತರಿಲ್ಲ ದವನೂ, ಮಾಡಿದ ಉಪಕಾರವನ್ನು ಸ್ಮರಿಸತಕ್ಕವನೂ, ಗಾಯನ, ಯುದ್ಧ ಇವುಗಳಲ್ಲಿ ಕುಶಲನೂ, ಜಿಪುಣನೂ, ನಿರ್ಭಯನೂ, ಯಾಚಕನೂ ಆಗಿರುತ್ತಾನೆ. ಕುಜನು ಕರ್ಕಾಟಕದಲ್ಲಿ ದ್ದರೆ, ಧನವಂತನೂ, ನೀರಿನ ಪ್ರಯಾಣದಿಂದ ಸಂಪಾದಿಸಲ್ಪಟ್ಟ ಧನವುಳ್ಳವನೂ, ಪ್ರಾಜ್ಞನೂ, ವಿಕಲಾಂಗನೂ, ದುಷ್ಟನೂ ಆಗಿರುತ್ತಾನೆ

ನಿಃ ಸ್ವಃ ಕ್ಲೇಶ ಸಹೋವನಾಂತರ ಚರಃ ಸಿಂಹೇಲ್ಪ ದಾರಾತ್ಮಜೋ ।
ಜೈವೇ ನೈಕರಿ ಪುರ್ನರೇಂದ್ರ ಸಚಿವಃ ಖ್ಯಾತೋಭಯೋಲ್ಪಾತ್ಮಜಃ ॥
ದುಃಖಾರ್ತೋ ವಿಧನೋಟನೋ ನೃತರತ ಸ್ತೀಕ್ಷ್ಣಶ್ಚ ಕುಂಭಸ್ಥಿತೇ ।
ಭೌಮೇ ಭೂರಿಧನಾತ್ಮಜೋ ಮೃಗಗತೇ ಭೂಪೋಥವಾ ತತ್ಸಮಃ ॥೩೪॥

ಕುಜನು ಸಿಂಹದಲ್ಲಿದ್ದರೆ ಧನರಹಿತನೂ, ದುಃಖವನ್ನು ಸಹಿಸುವವನೂ, ಕಾಡು ಬೆಟ್ಟಗಳಲ್ಲಿ ಸಂಚ ರಿಸುವವನೂ, ಹೆಚ್ಚು ಹೆಂಡರು ಮತ್ತು ಮಕ್ಕಳಿಲ್ಲದವನೂ ಆಗಿರುತ್ತಾನೆ. ಕುಜನು ಧನು ಮತ್ತು ಮೀನ ರಾಶಿಗಳಲ್ಲಿದ್ದರೆ ಅನೇಕ ಶತ್ರುಗಳುಳ್ಳವನೂ, ರಾಜನ ಮಂತ್ರಿಯೂ, ವಿಖ್ಯಾತನೂ, ನಿರ್ಭಯನೂ ಅಲ್ಪ ಪುತ್ರನೂ ಆಗಿರುತ್ತಾನೆ. ಕುಜನು ಕುಂಭದಲ್ಲಿದ್ದರೆ ದುಃಖದಿಂದ ಆರ್ತನೂ, ಧನರಹಿತನೂ, ಸಂಚಾರಶೀಲನೂ, ಸುಳ್ಳಿನಲ್ಲಿ ನಿರತನೂ, ಕಠಿಣನೂ ಆಗಿರುತ್ತಾನೆ. ಕುಜನು ಮಕರ ದಲ್ಲಿದ್ದರೆ, ಹೆಚ್ಚಾದ ಧನವೂ, ಮಕ್ಕಳೂ ಉಳ್ಳವನೂ, ರಾಜನೂ ಅಥವಾ ರಾಜ ಸದೃಶನೂ ಆಗಿರುತ್ತಾನೆ.

ದ್ಯೂತರ್ಣಪಾನರತ ನಾಸ್ತಿಕ ಚೋರ ನಿಸ್ವಾ: ।
ಕುಸ್ತ್ರೀಕ ಕೂಟಕೃದ ಸತ್ಯರತಾಃ ಕುಜರ್ಕ್ಷೇ ॥
ಆಚಾರ್ಯ ಭೂರಿಸುತದಾರ ಧನಾರ್ಜನೇಷ್ಟಾಃ ।
ಶೌಕ್ರೇವದಾನ್ಯ ಗುರುಭಕ್ತಿ ರತಾಶ್ಚ ಸೌಮ್ಯೇ ॥೩೫॥

ಬುಧನು ಮೇಷ ವೃಶ್ಚಿಕಗಳಲ್ಲಿದ್ದರೆ, ದ್ಯೂತ, ಸಾಲ, ಕುಡಿತ ಇವುಗಳಲ್ಲಿ ಆಸಕ್ತನೂ, ನಾಸ್ತಿಕನೂ, ಚೋರನೂ, ಧನರಹಿತನೂ, ಕೆಟ್ಟ ಹೆಂಡತಿಯುಳ್ಳವನೂ, ಕಪಟವುಳ್ಳವನೂ, ಅಸತ್ಯದಲ್ಲಿ ಆಸಕ್ತನೂ ಆಗಿರುತ್ತಾನೆ. ಬುಧನು ವೃಷಭ ಮತ್ತು ತುಲಾ ರಾಶಿಗಳಲ್ಲಿದ್ದರೆ ಆಚಾರ್ಯನೂ, ಹೆಚ್ಚು ಮಕ್ಕಳುಳ್ಳವನೂ, ಹೆಂಡತಿಯಲ್ಲಿ ಪ್ರೀತಿಯುಳ್ಳವನೂ, ಧನಾರ್ಜನೆಯಲ್ಲಿ ಇಷ್ಟವುಳ್ಳವನೂ, ದಾನಶೀಲನೂ, ಗುರುಭಕ್ತಿಯುಳ್ಳವನೂ ಆಗಿರುತ್ತಾನೆ.

ವಿಕತ್ಥನಶ್ಶಾಸ್ತ್ರ ಕಲಾವಿದಗ್ಧಃ ।
ಪ್ರಿಯಂವದಃ ಸೌಖ್ಯರತಸ್ತೃತೀಯೇ ॥
ಜಲಾರ್ಜಿತ ಸ್ವಃ ಸ್ವಜನಸ್ಯ ಶತ್ರುಃ ।
ಶಶಾಂಕಜೇ ಶೀತಕರರ್ಕ್ಷಯುಕ್ತೇ ॥೩೬॥

ಬುಧನು ಮಿಥುನ ರಾಶಿಯಲ್ಲಿದ್ದರೆ ಹೊಗಳಿಕೊಳ್ಳುವ ಸ್ವಭಾವವುಳ್ಳವನೂ, ಶಾಸ್ತ್ರದಲ್ಲಿ ಮತ್ತು ಕಲೆಯಲ್ಲಿ ಸಮರ್ಥನೂ, ಪ್ರಿಯವಾದ ಮಾತನಾಡುವವನೂ, ಸುಖಶಾಲಿಯೂ ಆಗಿರುತ್ತಾನೆ. ಬುಧ ಕರ್ಕಾಟಕದಲ್ಲಿದ್ದರೆ ನೀರಿನಿಂದ ಸಂಪಾದಿಸಲ್ಪಟ್ಟ ಧನವುಳ್ಳವನೂ, ಬಂಧುಗಳಲ್ಲಿ ಶತ್ರುವೂ ಆಗಿರುತ್ತಾನೆ.

ಸ್ತ್ರೀ ದ್ವೇಷ್ಯೋ ವಿಧನ ಸುಖಾತ್ಮ ಜೋಟನೋಜ್ಞಃ ।
ಸ್ತ್ರೀಲೋಲಃ ಸುಪರಿ ಭವೋರ್ಕರಾಶಿಗೇಜ್ಞೇ ।
ತ್ಯಾಗೀಜ್ಞಃ ಪ್ರಚುರಗುಣಃ ಸುಖೀಕ್ಷಮಾವಾನ್ ।
ಯುಕ್ತಿಜ್ಞೋ ವಿಗತಭಯಶ್ಚ ಷಷ್ಠರಾಶೌ ॥೩೭॥

ಬುಧನು ಸಿಂಹರಾಶಿಯಲ್ಲಿದ್ದರೆ ಸ್ತ್ರೀಯರಿಂದ ದ್ವೇಷ್ಯನೂ, ನಿರ್ಧನನೂ, ಸುಖಹೀನನೂ, ಮಕ್ಕಳಿಲ್ಲದವನೂ, ಸಂಚಾರಶೀಲನೂ, ಮೂಢನೂ, ಸ್ತ್ರೀಲೋಲನೂ, ಸೋಲುಳ್ಳವನೂ ಆಗಿರುತ್ತಾನೆ. ಬುಧನು ಕನ್ಯಾರಾಶಿಯಲ್ಲಿದ್ದರೆ ತ್ಯಾಗಿಯೂ ಪ್ರಚುರವಾದ ಗುಣಗಳುಳ್ಳವನೂ (ವಿದ್ಯಾ, ಬುದ್ಧಿ, ಶೌರ್ಯ, ಉದಾರತ್ವಾದಿ ಗುಣಗಳು) ಹೆಚ್ಚು ಸುಖಿಯೂ, ಕ್ಷಮೆಯುಳ್ಳವನೂ, ಯುಕ್ತಿಯನ್ನರಿತವನೂ, ಭಯವಿಲ್ಲದವನೂ ಆಗಿರುತ್ತಾನೆ.

ಪರಕರ್ಮ ಕೃದಸ್ವ ಶಿಲ್ಪ ಬುದ್ಧಿಃ ।
ಋಣವಾನ್ ವಿಷ್ಟಿಕರೋ ಬುಧೇರ್ಕಜರ್ಕ್ಷೇ ॥

ನೃಪಸತ್ಕೃತ ಪಂಡಿತಾಪ್ತವಾಕ್ಯೋ ।
ನವಮೇಂತ್ಯೇಜಿತ ಸೇವಕೋಂತ್ಯ ಶಿಲ್ಪಃ ॥೩೮॥

ಬುಧನು ಮಕರ ಕುಂಭ ರಾಶಿಗಳಲ್ಲಿದ್ದರೆ ಪರರ ಕೆಲಸಗಳನ್ನು ಮಾಡುವವನೂ, ಶಿಲ್ಪವಿದ್ಯೆಯಲ್ಲಿ ಆಸಕ್ತಿಯುಳ್ಳವನೂ, ದ್ರವ್ಯವಿಲ್ಲದವನೂ ಸಾಲ ಮಾಡಿ ತೀರಿಸದೆ ಹೋಗುವವನೂ, ಭಾರವನ್ನು ಹೊರುವವನೂ ಆಗಿರುತ್ತಾನೆ. ಬುಧನು ಧನುವಿನಲ್ಲಿದ್ದರೆ ರಾಜಪೂಜಿತನೂ, ಪಂಡಿತನೂ, ಮಿತ್ರರ ಮಾತಿನಲ್ಲಿ ವಿಶ್ವಾಸವುಳ್ಳವನೂ ಆಗಿರುತ್ತಾನೆ. ಬುಧನು ಮೀನರಾಶಿಯಲ್ಲಿದ್ದರೆ ಜಯಿಸಲ್ಪಟ್ಟ ಸೇವಕರುಳ್ಳವನೂ, ನೀಚವಾದ ಶಿಲ್ಪ ಕೆಲಸಗಳನ್ನು ಮಾಡತಕ್ಕವನೂ ಆಗಿರುತ್ತಾನೆ.

ಸೇನಾನಿ ರ್ಬಹುವಿತ್ತದಾರ ತನಯೋ ದಾತಾ ಸುಭೃತ್ಯಕ್ಷಮೀ ।
ತೇಜೋದಾರ ಗುಣಾನ್ವಿತಃ ಸುರಗುರೌ ಖ್ಯಾತಃ ಪುಮಾನ್ ಕೌಜಭೇ ॥
ಕಲ್ಯಾಂಗಃ ಸ ಸುಖಾರ್ಥ ಮಿತ್ರತನಯ ಸ್ತ್ಯಾಗೀ ಪ್ರಿಯಃ ಶೌಕ್ರಭೇ ।
ಬೌಧೇ ಭೂರಿ ಪರಿಚ್ಛದಾತ್ಮಜ ಸುಹೃತ್ಸಾಚಿವ್ಯ ಯುಕ್ತಃ ಸುಖೀ ॥೩೯॥

ಗುರು ಮೇಷ ವೃಶ್ಚಿಕ ರಾಶಿಗಳಲ್ಲಿದ್ದರೆ ಸೇನಾಪತಿಯೂ ಹೆಚ್ಚು ಹಣ, ಹೆಂಡಿರು ಮತ್ತು ಮಕ್ಕಳು ಇವುಗಳುಳ್ಳವನೂ, ದಾನಶೀಲನೂ, ಒಳ್ಳೆಯ ಸೇವಕರುಳ್ಳವನೂ, ಕ್ಷಮೆಯುಳ್ಳವನೂ, ಕಾಂತಿಯುಳ್ಳವನೂ, ಉದಾರಿಯೂ ಆಗಿರುತ್ತಾನೆ. ಗುರು ವೃಷಭ ತುಲಾ ರಾಶಿಗಳಲ್ಲಿದ್ದರೆ ಒಳ್ಳೆಯ ದೇಹವುಳ್ಳವನೂ, ಸುಖಿಯೂ, ಧನವುಳ್ಳವನೂ, ಸ್ನೇಹಿತರುಳ್ಳವನೂ, ಮಕ್ಕಳುಳ್ಳವನೂ, ತ್ಯಾಗಿಯೂ, ಸರ್ವಜನಪ್ರಿಯನೂ ಆಗಿರುತ್ತಾನೆ. ಗುರು ಮಿಥುನ ಕನ್ಯಾರಾಶಿಗಳಲ್ಲಿದ್ದರೆ ಹೆಚ್ಚಾದ ಉಪಕರಣಾದಿಗಳೂ ಮಕ್ಕಳು, ಮಿತ್ರರು, ಆಲೋಚನೆಯನ್ನು ಕೊಡತಕ್ಕವರು ಇವರುಗಳುಳ್ಳವನೂ, ಸುಖಿಯೂ ಆಗಿರುತ್ತಾನೆ.

ಚಾಂದ್ರೇ ರತ್ನಸುತ ಸ್ವದಾರ ವಿಭವ ಪ್ರಜ್ಞಾಸುಖೈರನ್ವಿತಃ ।
ಸಿಂಹೇಸ್ಯಾದ್ಬಲನಾಯಕಃ ಸುರಗುರೌ ಪ್ರೋಕ್ತಂ ಚ ಯಚ್ಚಂದ್ರಭೇ ॥
ಸ್ವರ್ಕ್ಷೇ ಮಾಂಡಲಿಕೋ ನರೇಂದ್ರ ಸಚಿವಃ ಸೇನಾಪತಿರ್ವಾಧನೀ ।
ಕುಂಭೇ ಕರ್ಕಟವತ್ ಫಲಾನಿ ಮಕರೇ ನೀಚೋಲ್ಪವಿತ್ತೋ ಸುಖೀ ॥೪೦॥

ಗುರು ಕರ್ಕಾಟಕ ರಾಶಿಯಲ್ಲಿದ್ದರೆ ರತ್ನಗಳು, ಮಕ್ಕಳು, ಪತ್ನೀವಿಭವ ಇವುಗಳಿಂದ ಕೂಡಿದವನೂ, ಪ್ರಾಜ್ಞನೂ, ಸುಖಿಯೂ ಆಗಿರುತ್ತಾನೆ. ("ರತ್ನಸುತ" ಎಂದರೆ ನವರತ್ನದಂತಿರುವ ಒಬ್ಬ ಮಗನುಳ್ಳವನೆಂದೂ, ರತ್ನ ಅಂದರೆ ೨ ಸಂಖ್ಯೆ ಎರಡು ಗಂಡು ಎಂತಲೂ ಅಥವಾ ರತ್ನಸಂಖ್ಯೆಯನ್ನನುಸರಿಸಿ ಒಂಬತ್ತು ಮಕ್ಕಳುಳ್ಳವನೂ, ಅವರಲ್ಲಿಯೂ ಸ್ತ್ರೀಯರೇ ಹೆಚ್ಚಾಗಿರುವವನು ಎಂದೂ ಕೆಲವರ ಮತವಿದೆ.) ಗುರು ಸಿಂಹ ರಾಶಿಯಲ್ಲಿದ್ದರೆ ಸೇನಾನಾಯಕನಾಗಿರುತ್ತಾನೆ. ಅಲ್ಲದೆ ಗುರುವು ಕರ್ಕಾಟಕದಲ್ಲಿದ್ದಾಗಿನ ಫಲಗಳೆಲ್ಲವೂ ಇಲ್ಲಿಯೂ ಆಗುತ್ತವೆ. ಗುರು ಧನುರ್ಮೀನ ರಾಶಿಗಳಲ್ಲಿದ್ದರೆ ಮಂಡಲಾಧಿಪನೂ, ರಾಜನಿಗೆ ಮಂತ್ರಿ ಅಥವಾ ಸೇನಾಪತಿಯೂ,

ಧನಿಕನೂ ಆಗಿರುತ್ತಾನೆ. ಗುರುವು ಕುಂಭದಲ್ಲಿದ್ದರೆ ಕರ್ಕಾಟಕದಲ್ಲಿದ್ದಾಗ ಆಗುವ ಫಲಗಳೇ ಲಭಿಸುವುವು. ಗುರು ಮಕರ ರಾಶಿಯಲ್ಲಿದ್ದರೆ ನೀಚನೂ, ಅಲ್ಪಧನನೂ, ಸುಖವಿಲ್ಲದವನೂ ಆಗಿರುತ್ತಾನೆ.

ಪರಯುವತಿ ರತಸ್ತದರ್ಥವಾದ್ಯೈ ।
ಹೃತವಿಭವಃ ಕುಲಪಾಂಸನಃ ಕುಜರ್ಕ್ಷೇ ॥
ಸ್ವಬಲ ಮತಿಧನೋ ನರೇಂದ್ರ ಪೂಜ್ಯಃ ।
ಸ್ವಜನವಿಭುಃ ಪ್ರಥಿತೋಭಯಃ ಸಿತೇಸ್ವೇ ॥೪೧॥

ಶುಕ್ರನು ಮೇಷ ವೃಶ್ಚಿಕ ರಾಶಿಗಳಲ್ಲಿದ್ದರೆ ಪರಕಾಮಿನಿಯರಲ್ಲಿ ಆಸಕ್ತಿಯುಳ್ಳವನೂ, ಅವರ ಸಲುವಾಗಿ ವ್ಯವಹರಣೆಗಳಿಂದ ಹಣವನ್ನು ಕಳೆದುಕೊಂಡವನೂ, ಕುಲನಿಂದಿತನೂ ಆಗಿರುತ್ತಾನೆ. ಶುಕ್ರನು ವೃಷಭ ತುಲಾರಾಶಿಗಳಲ್ಲಿದ್ದರೆ ಸ್ವಶಕ್ತಿ ಮತ್ತು ಬುದ್ಧಿಯಿಂದ ಸಂಪಾದಿಸಿದ ಹಣವುಳ್ಳವನೂ ರಾಜಪೂಜ್ಯನೂ, ಬಂಧುಗಳಲ್ಲಿ ವಿಭುವೂ, ಪ್ರಸಿದ್ಧನೂ, ಭಯರಹಿತನೂ ಆಗಿರುತ್ತಾನೆ.

ನೃಪಕೃತ್ಯ ಕರೋರ್ಥವಾನ್ಕಲಾ ।
ವಿನ್ಮಿಥುನೇ ಷಷ್ಠಗತೇತಿ ನೀಚಕರ್ಮಾ ॥
ರವಿಜರ್ಕ್ಷಗತೇ ಮರಾರಿ ಪೂಜ್ಯೇ ।
ಸುಭಗಃ ಸ್ತ್ರೀ ವಿಜಿತೋರತಃ ಕುನಾರ್ಯಾಮ್ ॥೪೨॥

ಶುಕ್ರನು ಮಿಥುನದಲ್ಲಿದ್ದರೆ ರಾಜನ ಕೆಲಸವನ್ನು ಮಾಡುವವನೂ, ಧನವಂತನೂ ಕುಶಲಿ ಕಲೆಗಳನ್ನರಿತವನೂ, ಆಗಿರುತ್ತಾನೆ. ಶುಕ್ರನು ಕನ್ಯೆಯಲ್ಲಿದ್ದರೆ ಅತ್ಯಂತವಾದ ನೀಚಕರ್ಮಗಳನ್ನು ಮಾಡುವವನಾಗಿರುತ್ತಾನೆ. ಶುಕ್ರನು ಮಕರ ಕುಂಭರಾಶಿಗಳಲ್ಲಿದ್ದರೆ ಸುಂದರನೂ, ಸ್ತ್ರೀವಶನೂ, ಕೆಟ್ಟ ಹೆಂಗಸರಲ್ಲಿ ಆಸಕ್ತಿಯುಳ್ಳವನೂ ಆಗಿರುತ್ತಾನೆ.

ದ್ವಿಭಾರ್ಯೋರ್ಥೀ ಭೀರುಃ ಪ್ರಬಲಮದ ಶೋಕಶ್ಚ ಶಶಿಭೇ ।
ಹರೌಯೋಷಾಪ್ತಾರ್ಥಃ ಪ್ರವರಯುವತಿರ್ಮಂದ ತನಯಃ ॥
ಗುಣಾಢ್ಯೈಃ ಪೂಜ್ಯಸ್ಸ್ವ ಸ್ತುರಗಸಹಿತೇ ದಾನವಗುರೌ ।
ಝಷೇ ವಿದ್ವಾನಾಢ್ಯೋ ನೃಪ ಜನಿತ ಪೂಜೋತಿ ಸುಭಗಃ ॥೪೩॥

ಶುಕ್ರನು ಕರ್ಕಾಟಕದಲ್ಲಿದ್ದರೆ ಇಬ್ಬರು ಹೆಂಡಿರುಳ್ಳವನೂ, ಯಾಚಕನೂ, ಭಯಶೀಲನೂ, ಹೆಚ್ಚಾದ ಮದ ಮತ್ತು ಶೋಕಗಳುಳ್ಳವನೂ ಆಗಿರುತ್ತಾನೆ. ಶುಕ್ರನು ಸಿಂಹದಲ್ಲಿದ್ದರೆ ಸ್ತ್ರೀ ನಿಮಿತ್ತದಿಂದ ಲಬ್ಧವಾದ ಧನ ಉಳ್ಳವನೂ, ಉತ್ತಮ ವಂಶದಲ್ಲಿ ಹುಟ್ಟಿದ ಪತ್ನಿಯುಳ್ಳವನೂ, ಅಲ್ಪ ಪುತ್ರರುಳ್ಳವನೂ ಆಗಿರುತ್ತಾನೆ. ಶುಕ್ರನು ಧನುವಿನಲ್ಲಿದ್ದರೆ ಸಮೂಹಗಳಿಂದ ಪೂಜ್ಯನೂ, ಧನವಂತನೂ ಆಗಿರುತ್ತಾನೆ. ಶುಕ್ರನು ಮೀನದಲ್ಲಿದ್ದರೆ ವಿದ್ವಾಂಸನೂ, ಧನವಂತನೂ, ರಾಜ ಪೂಜ್ಯನೂ, ಸುಂದರನೂ ಆಗಿರುತ್ತಾನೆ.

ಮೂರ್ಖೋಟನಃ ಕಪಟವಾನ್ ವಿಸುಹೃದ್ಯ ಮೇಜೇ ।
ಕೀಟೇತು ಬಂಧವಧಭಾಕ್ಚ ಪಲೋಘೃಣಶ್ಚ ॥
ನಿಹ್ರೀ ಸುಖಾರ್ಥ ತನಯಃ ಸ್ಖಲಿತಶ್ಚಲೇಖ್ಯೇ ।
ರಕ್ಷಾಪತಿರ್ಭವತಿ ಮುಖ್ಯ ಪತಿಶ್ಚಬೌಧೇ ॥೪೪॥

ಶನಿಯು ಮೇಷದಲ್ಲಿದ್ದರೆ ಮೂರ್ಖನೂ, ಅಟನಶೀಲನೂ, ಕಪಟಿಯೂ, ಸ್ನೇಹಿತರಿಲ್ಲದವನೂ ಆಗಿರುತ್ತಾನೆ. ಶನಿಯು ವೃಶ್ಚಿಕದಲ್ಲಿದ್ದರೆ ಬಂಧನಗಳಿಂದ ವಧಾದಿ ಹಿಂಸೆ ಮಾಡಿಸಿಕೊಳ್ಳುವವನೂ, ಚಪಲನೂ, ದಯೆ ಇಲ್ಲದವನೂ ಆಗಿರುತ್ತಾನೆ. ಶನಿಯು ಮಿಥುನ ಕನ್ಯಾರಾಶಿಗಳಲ್ಲಿದ್ದರೆ ಲಜ್ಜೆಯಿಲ್ಲದವನೂ, ಸುಖ, ಧನ ಮತ್ತು ಮಕ್ಕಳುಗಳುಳ್ಳವನೂ, ಲೇಖನಾದಿಗಳಲ್ಲಿ ತಪ್ಪುವವನೂ, ರಕ್ಷಾಧಿಕಾರಿಯೂ, ಪ್ರಧಾನ ನಾಯಕನೂ ಆಗಿರುತ್ತಾನೆ.

ವರ್ಜ್ಯಸ್ತ್ರೀಷ್ಟೋ ನ ಬಹುವಿಭವೋ ಭೂರಿಭಾರ್ಯೋ ವೃಷಸ್ಥೇ ।
ಖ್ಯಾತಃ ಸ್ವೋಚ್ಚೇ ಗಣಪುರ ಬಲಗ್ರಾಮ ಪೂಜ್ಯೋರ್ಥವಾಂಶ್ಚ ॥
ಕರ್ಕಿಣ್ಯಾಃ ಸ್ವೋ ವಿಕಲದಶನೋ ಮಾತೃಹೀನೋ ಸುತೋಜ್ಞಃ ।
ಸಿಂಹೇನಾರ್ಯೋ ವಿಸುಖತನಯೋ ವಿಷ್ಟಿಕೃತ್ ಸೂರ್ಯಪುತ್ರೇ ॥೪೫॥

ಶನಿಯು ವೃಷಭದಲ್ಲಿದ್ದರೆ ತ್ಯಜಿಸಲ್ಪಟ್ಟ ಸ್ತ್ರೀಯರಲ್ಲಿ ಇಷ್ಟವುಳ್ಳವನೂ, ಹೆಚ್ಚಿನ ವಿಭವವಿಲ್ಲದವನೂ, ಅನೇಕ ಹೆಂಡರಿರುವವನೂ ಆಗಿರುತ್ತಾನೆ. ಶನಿಯು ತುಲಾರಾಶಿಯಲ್ಲಿದ್ದರೆ ವಿಖ್ಯಾತನೂ, ಸಮೂಹ, ಗ್ರಾಮ, ಪುರ, ಸೈನ್ಯ ಇವುಗಳಿಂದ ಪೂಜ್ಯನೂ, ಧನವಂತನೂ ಆಗಿರುತ್ತಾನೆ. ಶನಿಯು ಕರ್ಕಾಟಕದಲ್ಲಿದ್ದರೆ ನಿರ್ಧನನೂ, ದೃಢವಲ್ಲದ ಹಲ್ಲುಗಳುಳ್ಳವನೂ, ತಾಯಿಯಿಲ್ಲದವನೂ, ಮಕ್ಕಳಿಲ್ಲದವನೂ, ಮೂಢನೂ ಆಗಿರುತ್ತಾನೆ. ಶನಿಯು ಸಿಂಹದಲ್ಲಿದ್ದರೆ ಪೂಜ್ಯನಲ್ಲದವನೂ, ಸುಖವಿಲ್ಲದವನೂ, ಮಕ್ಕಳಿಲ್ಲದವನೂ, ಭಾರ ಹೊರುವವನೂ ಆಗಿರುತ್ತಾನೆ.

ಸ್ವಂತಃ ಪ್ರತ್ಯಯಿತೋ ನರೇಂದ್ರಭವನೇ ಸತ್ಪುತ್ರಜಾಯಾಧನೋ ।
ಜೀವಕ್ಷೇತ್ರಗತೇರ್ಕಜೇ ಪುರಬಲ ಗ್ರಾಮಾಗ್ರನೇತಾಥವಾ ॥
ಅನ್ಯಸ್ತ್ರೀ ಧನಸಂವೃತಃ ಪುರಬಲ ಗ್ರಾಮಾಗ್ರಣೀರ್ಮಂದ ದೃಕ್ ।
ಸ್ವಕ್ಷೇತ್ರೇ ಮಲಿನ ಸ್ಥಿರಾರ್ಥ ವಿಭವೋ ಭೋಕ್ತಾ ಚ ಜಾತಃ ಪುಮಾನ್ ॥೪೬॥

ಶನಿಯು ಧನು ಮತ್ತು ಮೀನರಾಶಿಗಳಲ್ಲಿದ್ದರೆ ಸ್ವತಃ ಎಂದರೆ ಅಂತ್ಯಕಾಲದಲ್ಲಿ ಧನವುಳ್ಳವನೂ, ಸುಖಿಯೂ (ಸುಖಿಯೂ ಅರವತ್ತನಾಲ್ಕು ವರ್ಷ ಬದುಕುವವನೂ ಎಂಬರ್ಥಗಳು ಬರುವುದು) ರಾಜನ ಮನೆಯಲ್ಲಿ ನಂಬುಗೆಯಿಂದ ವರ್ತಿಸುವವನೂ ಒಳ್ಳೆಯ ಮಕ್ಕಳು, ಹೆಂಡತಿ, ಧನಗಳುಳ್ಳವನೂ, ಪುರ, ಸೇನೆ, ಗ್ರಾಮ ಇವುಗಳಲ್ಲೊಂದಕ್ಕೆ ಪ್ರಧಾನ ನಾಯಕನೂ, ಅಗ್ರಣಿಯೂ ಆಗಿರುತ್ತಾನೆ. ಶನಿಯು ಮಕರ ಕುಂಭರಾಶಿಗಳಲ್ಲಿದ್ದರೆ ಅನ್ಯಸ್ತ್ರೀ, ಅನ್ಯಧನ ಇವುಗಳನ್ನು ಹೊಂದಿದವನೂ, ಪರರ ಸೇನೆ ಮತ್ತು ಗ್ರಾಮಗಳಿಗೆ ಮುಂದಾಳೂ, ಮಂದ ದೃಷ್ಟಿಯುಳ್ಳವನೂ, ಮಲಿನನೂ, ಸ್ಥಿರವಾದ ಹಣ ಮತ್ತು ವೈಭವವುಳ್ಳವನೂ, ಭೋಗಿಯೂ ಆಗಿರುತ್ತಾನೆ.

ಶಿಶಿರಕರ ಸಮಾಗಮೇಕ್ಷಣಾನಾಂ ।
ಸದೃಶ ಫಲಂ ಪ್ರವದಂತಿ ಲಗ್ನಜಾತಮ್ ॥
ಫಲಮಧಿಕಮಿದಂಯದತ್ರ ಭಾವಾತ್ ।
ಭವನಭನಾಥ ಗುಣೈರ್ವಿಚಿಂತನೀಯಾಃ ॥೪೭॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ರಾಶಿಶೀಲ ನಿರೂಪಣಂ ನಾಮ ಷೋಡಶೋಧ್ಯಾಯಃ ॥

ಮೇಷಾದಿ ರಾಶಿಗಳಲ್ಲಿ ಚಂದ್ರನಿದ್ದಾಗ ಹೇಳಿರುವ ಫಲ ಮತ್ತು ಮುಂದೆ ಕುಜಾದಿ ಗ್ರಹರ ದೃಷ್ಟಿಫಲ ಇವೆರಡನ್ನೂ ಊಹಿಸಿ ಸರಿಯಾಗಿ ಲಗ್ನಾದಿಗಳಿಗೆ ಫಲವನ್ನು ಹೇಳಬೇಕು. ಎಂದರೆ ಚಂದ್ರನು ಮೇಷದಲ್ಲಿದ್ದಾಗಿನ ಫಲ ಮತ್ತು ದೃಷ್ಟಿಫಲಗಳೇ ಮೇಷರಾಶಿಗೆ ಫಲವು. ಹೀಗೆಯೇ ಮುಂದೆಯೂ ತಿಳಿಯುವುದು. ಲಗ್ನಾದಿಯಾಗಿ ದ್ವಾದಶ ಭಾವಗಳಿಗೆ ಫಲವನ್ನು ಆಯಾಯ ಭಾವದ ಮತ್ತು ಆಯಾಯ ಭಾವಾಧಿಪತಿಯ ಷಡ್ಬಲಗಳಿಂದ ಊಹಿಸಿ ತಿಳಿದುಕೊಳ್ಳುವುದು.

॥ ರಾಶಿಶೀಲವೆಂಬ ಹದಿನಾರನೇಯ ಅಧ್ಯಾಯವು ॥

## ಅಧ್ಯಾಯ ೧೭

## ॥ ದೃಷ್ಟಿಫಲಾಧ್ಯಾಯಃ ॥

ಚಂದ್ರೇ ಭೂಪ ಬುಧೌ ನೃಪೋಪಮ ಗುಣೀ ಸ್ತೇನೋಧನಶ್ಚಾಜಗೇ ।
ನಿಸ್ಸ್ವಸ್ತೇನ ನೃಮಾನ್ಯ ಭೂಪಧನಿನಃ ಪ್ರೇಷ್ಯಃ ಕುಜಾದ್ಯೈರ್ಗವಿ ॥
ನೃಸ್ಥೇಯೋವ್ಯವಹಾರಿ ಪಾರ್ಥಿವ ಬುಧಾ ಭೀಸ್ತಂತು ವಾಯೋಧನಃ ।
ಸ್ವರ್ಕ್ಷೇಯೋದ್ಧ್ವಾ ಕವಿಜ್ಞಭೂಮಿ ಪತಯೋ ಯೋಜೀವಿ ದೃಗ್ರೋಗಿಣೌ ॥೧॥

ಮೇಷದಲ್ಲಿರುವ ಚಂದ್ರನಿಗೆ ಕುಜನ ದೃಷ್ಟಿ ಇದ್ದರೆ ರಾಜನಾಗುವನು. ಬುಧ ದೃಷ್ಟಿಯಿದ್ದರೆ ವಿದ್ವಾಂಸನಾಗುವನು. ಗುರುದೃಷ್ಟಿಯಿದ್ದರೆ ರಾಜಸಮಾನನಾಗುವನು. ಶುಕ್ರದೃಷ್ಟಿಯಿದ್ದರೆ ಗುಣಿಯಾಗುವನು. ಶನಿದೃಷ್ಟಿಯಿದ್ದರೆ ಕಳ್ಳನಾಗುವನು. ರವಿ ದೃಷ್ಟಿಯಿದ್ದರೆ ನಿರ್ಧನನಾಗುವನು. ವೃಷಭದಲ್ಲಿರುವ ಚಂದ್ರನಿಗೆ ಕುಜದೃಷ್ಟಿಯಿದ್ದರೆ ನಿರ್ಧನನಾಗುವನು. ಬುಧದೃಷ್ಟಿಯಿದ್ದರೆ ಕಳ್ಳನೂ, ಗುರುದೃಷ್ಟಿಯಿದ್ದರೆ ಮನುಷ್ಯರಿಂದ ಮಾನ್ಯನೂ, ಶುಕ್ರದೃಷ್ಟಿಯಿದ್ದರೆ ರಾಜನೂ, ಶನಿದೃಷ್ಟಿಯಿದ್ದರೆ ಧನಿಯೂ, ರವಿದೃಷ್ಟಿಯಿದ್ದರೆ ಭೃತ್ಯನೂ ಆಗುವನು. ಮಿಥುನದಲ್ಲಿ ಚಂದ್ರನಿಗೆ ಕುಜದೃಷ್ಟಿಯಿದ್ದರೆ ಕಬ್ಬಿಣದ ವ್ಯಾಪಾರಿಯೂ, ಬುಧದೃಷ್ಟಿಯಿದ್ದರೆ ರಾಜನೂ, ಗುರುದೃಷ್ಟಿ ಯಿದ್ದರೆ ವಿದ್ವಾಂಸನೂ, ಶುಕ್ರದೃಷ್ಟಿಯಿದ್ದರೆ ನಿರ್ಭಯನೂ, ಶನಿದೃಷ್ಟಿಯಿದ್ದರೆ ನೇಕಾರನೂ, ರವಿದೃಷ್ಟಿಯಿದ್ದರೆ ನಿರ್ಭಯನೂ ಆಗುವನು. ಕರ್ಕಾಟಕದಲ್ಲಿ ಚಂದ್ರನಿಗೆ ಕುಜದೃಷ್ಟಿಯಿದ್ದರೆ ಯೋಧನೂ, ಬುಧದೃಷ್ಟಿಯಿದ್ದರೆ ಕವಿಯೂ, ಗುರುದೃಷ್ಟಿಯಿದ್ದರೆ ಪ್ರಾಜ್ಞನೂ, ಶುಕ್ರದೃಷ್ಟಿ ಯಿದ್ದರೆ ರಾಜನೂ, ಶನಿದೃಷ್ಟಿಯಿದ್ದರೆ ಕಬ್ಬಿಣದ ವ್ಯಾಪಾರದಿಂದ ಜೀವಿಸುವವನೂ, ರವಿ ದೃಷ್ಟಿಯಿದ್ದರೆ ಕಣ್ಣಿನ ರೋಗಗಳುಳ್ಳವನೂ ಆಗಿರುತ್ತಾನೆ.

ಜ್ಯೋತಿಜ್ಞಾಢ್ಯ ನರೇಂದ್ರನಾಪಿತ ನೃಪಕ್ಷ್ಮೇಶಾ ಬುಧಾದ್ಯೈರ್ಹರೌ ।
ತದ್ವದ್ಭೂಪ ಚಮೂಪ ನೈಪುಣಯುತಾಃ ಷಷ್ಠೇ ಶುಭೇಸ್ತ್ರ್ಯಾಶ್ರಯಃ ॥
ಜೂಕೇ ಭೂಪ ಸುವರ್ಣಕಾರ ವಣಿಜಃ ಶೇಷೇಕ್ಷಿತೇ ನೈಕೃತೀ ।
ಕೀಟೇಯುಗ್ಮಪಿತಾ · ನತಶ್ಚರಜಕೋ ವ್ಯಂಗೋಧನೋ ಭೂಪತಿಃ ॥೨॥

ಸಿಂಹರಾಶಿಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ಜ್ಯೋತಿಶ್ಶಾಸ್ತ್ರಜ್ಞನೂ ಗುರುದೃಷ್ಟಿ ಯಿದ್ದರೆ ಧನವಂತನೂ, ಶುಕ್ರದೃಷ್ಟಿಯಿದ್ದರೆ ರಾಜನೂ, ಶನಿದೃಷ್ಟಿಯಿದ್ದರೆ ಕ್ಷೌರಿಕನೂ, ರವಿದೃಷ್ಟಿಯಿದ್ದರೆ ರಾಜನೂ, ಕುಜದೃಷ್ಟಿಯಿದ್ದರೆ ಭೂಪತಿಯೂ ಆಗುವನು. ಕನ್ಯಾರಾಶಿ ಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ರಾಜನೂ, ಗುರುದೃಷ್ಟಿಯಿದ್ದರೆ ಸೇನಾಪತಿಯೂ, ಶುಕ್ರದೃಷ್ಟಿಯಿದ್ದರೆ ನಿಪುಣನೂ, ಶನಿ, ರವಿ, ಕುಜ ಈ ಪಾಪ ಗ್ರಹರಲ್ಲಿ ಯಾರೊಬ್ಬರದಾದರೂ ದೃಷ್ಟಿಯಿದ್ದರೆ ಸ್ತ್ರೀಯ ಆಶ್ರಯ ಹೊಂದುವವನೂ ಆಗುವನು.

ತುಲಾರಾಶಿಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ರಾಜನೂ, ಗುರುದೃಷ್ಟಿಯಿದ್ದರೆ ಸ್ವರ್ಣಕಾರನೂ, ಶುಕ್ರದೃಷ್ಟಿಯಿದ್ದರೆ ವ್ಯಾಪಾರಿಯೂ, ಶನಿ, ರವಿ, ಕುಜರಲ್ಲಿ ಯಾರೊಬ್ಬರ

ದೃಷ್ಟಿಯಿದ್ದರೂ ದುಷ್ಟನೂ ಆಗುವನು. ವೃಶ್ಚಿಕ ರಾಶಿಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ಅವಳಿ ಮಕ್ಕಳ ತಂದೆಯೂ, ಗುರುದೃಷ್ಟಿಯಿದ್ದರೆ ನಯಶೀಲನೂ, ಶುಕ್ರದೃಷ್ಟಿಯಿದ್ದರೆ ಅಗಸನೂ ಶನಿದೃಷ್ಟಿಯಿದ್ದರೆ ಅಂಗಹೀನನೂ, ರವಿದೃಷ್ಟಿಯಿದ್ದರೆ ನಿರ್ಧನನೂ, ಕುಜದೃಷ್ಟಿಯಿದ್ದರೆ ಭೂಪತಿಯೂ ಆಗುವನು.

ಜ್ಞಾತ್ಯುರ್ವೀಶ ಜನಾಶ್ರಯಶ್ಚ ತುರಗೇಪಾಷ್ಕೈ: ಸದಂಭ: ಶಠ ।
ಶ್ಮಾತ್ಯುರ್ವೀಶ ನರೇಂದ್ರ ಪಂಡಿತಧನೀ ದ್ರವ್ಯೋನ ಭೂಪೋಮೃಗೇ ॥
ಭೂಪೋಭೂಪ ಸಮೋನ್ಯದಾರ ನಿರತಃ ಶೇಷ್ಯೈಶ್ಚ ಕುಂಭಸ್ಥಿತೇ ।
ಹಾಸ್ಯಜ್ಞೋ ನೃಪತಿ ರ್ಬುಧಶ್ಚ ಝುಷಗೇ ಪಾಪಶ್ಚ ಪಾಪೇಕ್ಷಿತೇ ॥೩॥

ಧನುರಾಶಿಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ಜ್ಞಾತಿಗಳಿಗೆ ಆಶ್ರಯನೂ, ಗುರು ದೃಷ್ಟಿಯಿದ್ದರೆ ರಾಜನಿಗೆ ಆಶ್ರಯನೂ, ಶುಕ್ರದೃಷ್ಟಿಯಿದ್ದರೆ ಜನಗಳಿಗೆ ಆಶ್ರಯನೂ, ಶನಿ, ರವಿ ಕುಜರಲ್ಲಿ ಯಾರೊಬ್ಬರ ದೃಷ್ಟಿಯಿದ್ದರೂ ಜಂಭವುಳ್ಳವನೂ, ಶಾಠ್ಯ (ಹಟ)ವುಳ್ಳವನೂ ಆಗುವನು. ಮಕರರಾಶಿಯಲ್ಲಿರುವ ಚಂದ್ರನಿಗೆ ಬುಧ ದೃಷ್ಟಿಯಿದ್ದರೆ ಚಕ್ರವರ್ತಿಯೂ, ಗುರುದೃಷ್ಟಿಯಿದ್ದರೆ ರಾಜನೂ, ಶುಕ್ರದೃಷ್ಟಿಯಿದ್ದರೆ ಪಂಡಿತನೂ, ಶನಿದೃಷ್ಟಿಯಿದ್ದರೆ ಧನವಂತನೂ, ರವಿದೃಷ್ಟಿ ಯಿದ್ದರೆ ದರಿದ್ರನೂ, ಕುಜದೃಷ್ಟಿಯಿದ್ದರೆ ರಾಜನೂ ಆಗುವನು. ಕುಂಭರಾಶಿಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ಭೂಪತಿಯೂ, ಗುರುದೃಷ್ಟಿಯಿದ್ದರೆ ಭೂಪಸಮಾನನೂ, ಶುಕ್ರದೃಷ್ಟಿಯಿದ್ದರೆ ಪರಸ್ತ್ರೀರತನೂ, ಶನಿ, ರವಿ ಕುಜರಲ್ಲಿ ಯಾರೊಬ್ಬರ ದೃಷ್ಟಿಯಿದ್ದರೂ ಪರಸ್ತ್ರೀರತನೂ ಆಗುವನು.

ಮೀನರಾಶಿಯಲ್ಲಿರುವ ಚಂದ್ರನಿಗೆ ಬುಧದೃಷ್ಟಿಯಿದ್ದರೆ ಹಾಸ್ಯವನ್ನರಿತವನೂ ಗುರುದೃಷ್ಟಿ ಯಿದ್ದರೆ ರಾಜನೂ, ಶುಕ್ರದೃಷ್ಟಿಯಿದ್ದರೆ ವಿದ್ವಾಂಸನೂ, ಶನಿ, ರವಿ, ಕುಜರಲ್ಲಿ ಯಾರೊಬ್ಬರ ದೃಷ್ಟಿಯಿದ್ದರೂ ಪಾಪಿಯೂ ಆಗುವನು.

ಹೋರೇಶರ್ಕ್ಷ ದಲಾಶ್ರಿತೈ: ಶುಭಕರೋ ದೃಷ್ಟ: ಶಶೀತದ್ಗತ ।
ಸ್ತ್ರ್ಯಂಶೇ ತತ್ಪತಿಭಿ: ಸುಹೃದ್ಭವನ ಗೈರ್ವಾವೀಕ್ಷಿತ: ಶಸ್ಯತೇ ॥
ಯತ್ಪ್ರೋಕ್ತಂ ಪ್ರತಿರಾಶಿ ವೀಕ್ಷಣ ಫಲಂ ತದ್ದ್ವಾದಶಾಂಶೇ ಸ್ಮೃತಂ ।
ಸೂರ್ಯಾ ದ್ಯೈರವಲೋಕಿತೇಪಿ ಶಶಿನಿಜ್ಞೇಯಂ ನವಾಂಶೇಷ್ವತ: ॥೪॥

ಚಂದ್ರನು ಯಾವ ಹೋರೆಯಲ್ಲಿರುತ್ತಾನೆಯೋ (ಹೋರೆ ಎಂದರೆ ರಾಶಿಯ ಅರ್ಧ) ಅದೇ ಹೋರೆಯಲ್ಲಿರುವ ಗ್ರಹರಿಂದ ಆತನು ನೋಡಲ್ಪಟ್ಟರೆ ಶುಭವನ್ನುಂಟು ಮಾಡುವನು. ಹೀಗೆಯೇ ಅನ್ಯಥಾ ಅಶುಭಕರನು. ಚಂದ್ರನು ತಾನಿರುವ ದ್ರೇಕ್ಕಾಣಾಧಿಪತಿಯಿಂದ ಅಥವಾ ಮಿತ್ರಕ್ಷೇತ್ರ ಗತರಾದ ಗ್ರಹರಿಂದ ನೋಡಲ್ಪಟ್ಟರೂ ಶುಭವನ್ನುಂಟು ಮಾಡುವನು. ಚಂದ್ರನು ದ್ವಾದಶಾಂಶ ದಲ್ಲಿರುವಾಗ ಅದು ಎಷ್ಟನೇ ದ್ವಾದಶಾಂಶವೆಂದು ನೋಡಿಕೊಂಡು ಅಷ್ಟನೇಯ ಮೇಷಾದಿ ರಾಶಿಯಲ್ಲಿನ ಗ್ರಹದೃಷ್ಟಿಫಲವನ್ನೂ ಇಲ್ಲಿ ಹೇಳುವುದು.

ಆರಕ್ಷಕೋವಧ ರುಚಿಃ ಕುಶಲೋ ನಿಯುದ್ಧೆ ।
ಭೂಪೋರ್ಥವಾನ್ ಕಲಹಕೃತ್ ಕ್ಷಿತಿಜಾಂಶ ಸಂಸ್ಥೇ ॥
ಮೂರ್ಖೋನ್ಯದಾರ ನಿರತಃ ಸುಕವಿಃ ಸಿತಾಂಶೇ ।
ಸತ್ಕಾವ್ಯಕೃತ್ಸುಖಿ ಪರೋನ್ಯ ಕಳತ್ರಗಶ್ಚ ॥೫॥

ಮೇಷ, ವೃಶ್ಚಿಕ ರಾಶಿಗಳ ನವಾಂಶಕಗಳಲ್ಲಿರುವ ಚಂದ್ರನಿಗೆ ರವಿದೃಷ್ಟಿಯಿದ್ದರೆ ರಕ್ಷಕನೂ, ಕುಜದೃಷ್ಟಿಯಿದ್ದರೆ ವಧದಲ್ಲಿ ಆಸಕ್ತಿಯುಳ್ಳವನೂ, ಬುಧದೃಷ್ಟಿಯಿದ್ದರೆ ಮಲ್ಲಯುದ್ಧ ಪ್ರಿಯನೂ, ಗುರುದೃಷ್ಟಿಯಿದ್ದರೆ ರಾಜನೂ, ಶುಕ್ರದೃಷ್ಟಿಯಿದ್ದರೆ ಧನವಂತನೂ ಶನಿದೃಷ್ಟಿಯಿದ್ದರೆ ಕಲಹ ಕಾರಿಯೂ ಆಗುವನು. ವೃಷಭ ತುಲಾರಾಶಿಗಳ ನವಾಂಶಗಳಲ್ಲಿರುವ ಚಂದ್ರನಿಗೆ ರವಿದೃಷ್ಟಿ ಯಿದ್ದರೆ ಮೂರ್ಖನೂ, ಕುಜದೃಷ್ಟಿಯಿದ್ದರೆ ಪರದಾರಾಸಕ್ತನೂ, ಬುಧದೃಷ್ಟಿಯಿದ್ದರೆ ಒಳ್ಳೆಯ ಕವಿಯೂ, ಗುರುದೃಷ್ಟಿಯಿದ್ದರೆ ಉತ್ತಮೋತ್ತಮವಾದ ಕಾವ್ಯಕರ್ತನೂ, ಶುಕ್ರದೃಷ್ಟಿಯಿದ್ದರೆ ಸುಖಾಸಕ್ತನೂ, ಶನಿದೃಷ್ಟಿಯಿದ್ದರೆ ಅನ್ಯ ಕಳತ್ರಗಾಮಿಯೂ ಆಗುವನು.

ಬೌಧೇಹಿ ರಂಗಚರ ಚೌರ ಕವೀಂದ್ರ ಮಂತ್ರೀ ।
ಗೇಯಜ್ಞ ಶಿಲ್ಪ ನಿಪುಣಾ ಶಶಿನಿ ಸ್ಥಿತೇಂಶೇ ॥
ಸ್ವಾಂಶೇಲ್ಪಗಾತ್ರ ಧನಲುಬ್ಧ ತಪಸ್ವಿ ಮುಖ್ಯಃ ।
ಸ್ತ್ರೀ ಪೋಷ್ಯಕೃತ್ಯ ನಿರತಶ್ಚ ನಿರೀಕ್ಷ್ಯ ಮಾಣೇ ॥೬॥

ಮಿಥುನ, ಕನ್ಯಾರಾಶಿಗಳ ನವಾಂಶಕಗಳಲ್ಲಿರುವ ಚಂದ್ರನಿಗೆ ರವಿದೃಷ್ಟಿಯಿದ್ದರೆ ಮಲ್ಲಯುದ್ಧ ರಂಗದಲ್ಲಿ ಸಂಚರಿಸುವವನೂ, ಕುಜದೃಷ್ಟಿಯಿದ್ದರೆ ಕಳ್ಳನೂ, ಬುಧ ದೃಷ್ಟಿಯಿದ್ದರೆ ಕವಿಗಳಲ್ಲಿ ಶ್ರೇಷ್ಠನೂ, ಗುರುದೃಷ್ಟಿಯಿದ್ದರೆ ಮಂತ್ರಿಯೂ, ಶುಕ್ರದೃಷ್ಟಿಯಿದ್ದರೆ ಗಾನಗಳನ್ನರಿತವನೂ, ಶನಿದೃಷ್ಟಿಯಿದ್ದರೆ ಶಿಲ್ಪವಿದ್ಯೆಯನ್ನು ತಿಳಿದವನೂ ಆಗುವನು. ಕರ್ಕಾಟಕರಾಶಿ ನವಾಂಶಕಗಳಲ್ಲಿ ಚಂದ್ರನಿಗೆ ರವಿದೃಷ್ಟಿಯಿದ್ದರೆ ತೆಳ್ಳಗಿರುವವನೂ, ಕುಜದೃಷ್ಟಿಯಿದ್ದರೆ ಲೋಭಿಯೂ, ಬುಧ ದೃಷ್ಟಿಯಿದ್ದರೆ ತಪಸ್ವಿಯೂ, ಗುರುದೃಷ್ಟಿಯಿದ್ದರೆ ಪ್ರಮುಖನೂ, ಶುಕ್ರದೃಷ್ಟಿಯಿದ್ದರೆ ಸ್ತ್ರೀಯ ರಿಂದ ಪೋಷಿಸಲ್ಪಡತಕ್ಕವನೂ, ಶನಿದೃಷ್ಟಿಯಿದ್ದರೆ ಕೆಲಸದಲ್ಲಿ ಆಸಕ್ತನೂ ಆಗುವನು.

ಸಕ್ರೋಧೊ ನರಪತಿ ಸಮ್ಮತೋ ನಿಧೀಶಃ ।
ಸಿಂಹಾಂಶೇ ಪ್ರಭುರಸುತೋತಿ ಹಿಂಸ್ರಕರ್ಮಾ ॥
ಜೀವಾಂಶೇ ಪ್ರಥಿತಬಲೋ ರಣೋಪದೇಷ್ಟಾ ।
ಹಾಸ್ಯಜ್ಞ ಸಚಿವ ವಿಕಾಮ ವೃದ್ಧಶೀಲಾ ॥೭॥

ಸಿಂಹನವಾಂಶಕದಲ್ಲಿರುವ ಚಂದ್ರನಿಗೆ ರವಿದೃಷ್ಟಿಯಿದ್ದರೆ ಸಿಟ್ಟುಳ್ಳವನೂ, ಕುಜ ದೃಷ್ಟಿಯಿದ್ದರೆ ರಾಜಸಮ್ಮತನೂ, ಬುಧದೃಷ್ಟಿಯಿದ್ದರೆ ನಿಧಿಗೆ ಅಧಿಪತಿಯೂ, ಗುರುದೃಷ್ಟಿಯಿದ್ದರೆ ಪ್ರಭುವೂ, ಶುಕ್ರದೃಷ್ಟಿಯಿದ್ದರೆ ಮಕ್ಕಳಿಲ್ಲದವನೂ, ಶನಿದೃಷ್ಟಿಯಿದ್ದರೆ ಹಿಂಸಾಕರ್ಮಗಳನ್ನು ಮಾಡುವವನೂ

ಆಗುವನು. ಧನುರ್ಮೀನಗಳ ನವಾಂಶಕಗಳಲ್ಲಿರುವ ಚಂದ್ರನಿಗೆ ರವಿದೃಷ್ಟಿಯಿದ್ದರೆ ಪ್ರಸಿದ್ಧವಾದ ಬಲಶಾಲಿಯೂ, ಕುಜದೃಷ್ಟಿಯಿದ್ದರೆ ಯುದ್ಧಕುಶಲತೆಯನ್ನು ಹೇಳಿಕೊಡುವವನೂ, ಬುಧ ದೃಷ್ಟಿಯಿದ್ದರೆ ಹಾಸ್ಯವನ್ನರಿತವನೂ, ಗುರುದೃಷ್ಟಿಯಿದ್ದರೆ ಮಂತ್ರಿಯೂ, ಶುಕ್ರದೃಷ್ಟಿಯಿದ್ದರೆ ಕಾಮವಿಲ್ಲದವನೂ, ಶನಿದೃಷ್ಟಿಯಿದ್ದರೆ ವೃದ್ಧಾಚಾರವನ್ನು ನಡೆಯಿಸತಕ್ಕವನೂ ಆಗುವನು.

**ಅಲ್ಪಾಪತ್ಯೋ ದುಃಖಿತಃ ಸತ್ಯಪಿ ಸ್ವೇ ।**
**ಮಾನಾಸಕ್ತಃ ಕರ್ಮಣಿ ಸ್ವೇನುರಕ್ತಃ ॥**
**ದುಷ್ಟಃ ಸ್ತ್ರೀಷ್ಟಃ ಕೃಪಣ ಶ್ಚಾರ್ಕಿಭಾಗೇ ।**
**ಚಂದ್ರೇಭಾನೌ ತದ್ವದಿಂದ್ವಾದಿ ದೃಷ್ಟೇ ॥೮॥**

ಮಕರ ಕುಂಭ ನವಾಂಶಕಗಳಲ್ಲಿರುವ ಚಂದ್ರನಿಗೆ ರವಿದೃಷ್ಟಿಯಿದ್ದರೆ ಅಲ್ಪಸುತರುಳ್ಳವನೂ, ಕುಜದೃಷ್ಟಿಯಿದ್ದರೆ ದುಃಖಿತನೂ, ಬುಧದೃಷ್ಟಿಯಿದ್ದರೆ ಮಾನಾಸಕ್ತನೂ, ಗುರುದೃಷ್ಟಿಯಿದ್ದರೆ ತನ್ನ ಕೆಲಸದಲ್ಲಿ ಅನುರಾಗ ಉಳ್ಳವನೂ, ಶುಕ್ರದೃಷ್ಟಿಯಿದ್ದರೆ ದುಷ್ಟ ಸ್ತ್ರೀಯರಲ್ಲಿ ಇಷ್ಟವುಳ್ಳವನೂ, ಶನಿದೃಷ್ಟಿಯಿದ್ದರೆ ಕೃಪಣನೂ ಆಗುತ್ತಾನೆ. ಸೂರ್ಯನು ಮೇಷಾದಿ ರಾಶಿಗಳ ನವಾಂಶಕ ದಲ್ಲಿದ್ದಾಗ ಚಂದ್ರಾದಿ ಬೇರೆ ಬೇರೆ ಗ್ರಹರಿಂದ ನೋಡಲ್ಪಟ್ಟರೆ ಈ ಮೇಲೆ ಚಂದ್ರನಿಗೆ ಹೇಳಿರುವಂತೆಯೇ ಹೇಳಬೇಕು. ಹ್ಯಾಗಂದರೆ, ಚಂದ್ರನಿಗೆ ರವಿದೃಷ್ಟಿಯಿದ್ದರೆ ಯಾವ ಫಲವನ್ನು ಹೇಳಿದೆಯೋ ಅದೇ ಫಲವನ್ನು ಸೂರ್ಯನಿಗೆ ಚಂದ್ರದೃಷ್ಟಿಯಿದ್ದರೆ ಹೇಳತಕ್ಕದ್ದು.

**ವರ್ಗೋತ್ತಮ ಸ್ವಪರಗೇಷು ಶುಭಂ ಯದುಕ್ತಂ ।**
**ತತ್ಪುಷ್ಟ ಮಧ್ಯ ಲಘುತಾ ಶುಭಮುತ್ಕ್ರಮೇಣ ॥**
**ವೀರ್ಯಾನ್ವಿತೋಂಶಕ ಪತಿರ್ನಿರುಣದ್ಧಿ ಪೂರ್ವಂ ।**
**ರಾಶೀಕ್ಷಣಸ್ಯ ಫಲಮಂಶ ಫಲಂದದಾತಿ ॥೯॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೆ ದೃಷ್ಟಿಫಲ ನಿರೂಪಣಂ ನಾಮ ಸಪ್ತಾದಶೋಧ್ಯಾಯಃ ॥**

ಚಂದ್ರನಿರುವ ನವಾಂಶಕವು ವರ್ಗೋತ್ತಮವಾಗಿದ್ದರೆ ಮೇಲೆ ಹೇಳಿದ ಗ್ರಹರ ದೃಷ್ಟಿಫಲವು ಬಹು ವಿಶೇಷವಾಗಿಯೂ, ಸ್ವಕ್ಷೇತ್ರ ನವಾಂಶಕವಾಗಿದ್ದರೆ ಮಧ್ಯತರವಾಗಿಯೂ, ಅನ್ಯಗ್ರಹರ ನವಾಂಶಕವಾಗಿ ದ್ದರೆ ಅಲ್ಪತರವಾಗಿಯೂ ಸಂಭವಿಸುವುವು. ನವಾಂಶ ಪತಿಯು ಬಲಿಷ್ಠನಾಗಿದ್ದರೆ ಹಿಂದೆ ಹೇಳಿದ ರಾಶಿ ಗಳಲ್ಲಿರುವಾಗಿನ ದೃಷ್ಟಿಫಲವನ್ನು ತಡೆಯುತ್ತಾನೆ ಮತ್ತು ಈಗ ಹೇಳಿದ ಅಂಶಕ ಫಲವನ್ನು ಕೊಡುತ್ತಾನೆ

**॥ ದೃಷ್ಟಿಫಲವೆಂಬ ಹದಿನೇಳನೇಯ ಅಧ್ಯಾಯವು ॥**

ಅಧ್ಯಾಯ ೧೮

## ॥ ಭಾವಫಲಾಧ್ಯಾಯಃ ॥

ಶೂರಸ್ತಬ್ಧೋ ವಿಕಲ ನಯನೋ ನಿರ್ಘೃಣೋರ್ಕೇ ತನುಸ್ಥೇ ।
ಮೇಷೇ ಸಸ್ವಸ್ತಿಮಿರ ನಯನಃ ಸಿಂಹಸಂಸ್ಥೇ ನಿಶಾಂಧಃ ॥
ನೀಚೇಂಧೋಸ್ವಃ ಶಶಿಗ್ರಹಗತೇ ಬುದ್ಬುದಾಕ್ಷಃ ಪತಂಗೇ ।
ಭೂರಿದ್ರವ್ಯೋ ನೃಪಹೃತಧನೋ ವಕ್ತ್ರರೋಗೀದ್ವಿತೀಯೇ ॥೧॥

ಸೂರ್ಯನು ಲಗ್ನದಲ್ಲಿದ್ದರೆ ಶೂರನೂ ಆಲಸ್ಯವುಳ್ಳವನೂ ನೇತ್ರರೋಗಿಯೂ ನಿರ್ದಯನೂ ಆಗುವನು. ಈ ಫಲಗಳಲ್ಲದೆ ಮೇಷಲಗ್ನವಾಗಿದ್ದರೆ ಧನವಂತನೂ ಕಣ್ಣಿಗೆ ತಿಮಿರವೆಂಬ ರೋಗ ವುಳ್ಳವನೂ, ಸಿಂಹಲಗ್ನವಾಗಿದ್ದರೆ ರಾತ್ರಿಯಲ್ಲಿ ಕಣ್ಣು ಕಾಣದವನೂ, ತುಲಾಲಗ್ನವಾಗಿದ್ದರೆ ಕುರುಡನೂ, ದರಿದ್ರನೂ ಕರ್ಕಾಟಕಲಗ್ನವಾಗಿದ್ದರೆ ದೊಡ್ಡ ಕಣ್ಣುಳ್ಳವನೂ ಆಗುತ್ತಾನೆ. ಸೂರ್ಯನು ದ್ವಿತೀಯದಲ್ಲಿದ್ದರೆ ವಿಶೇಷಧನವುಳ್ಳವನೂ, ರಾಜರಿಂದ ಅಪಹರಿಸಲ್ಪಟ್ಟ ಧನವುಳ್ಳವನೂ, ಮುಖರೋಗವುಳ್ಳವನೂ ಆಗುತ್ತಾನೆ.

ಮತಿವಿಕ್ರಮವಾನ್ ತೃತೀಯ ಗೇರ್ಕೇ ।
ವಿಸುಖಃ ಪೀಡಿತ ಮಾನಸ ಶ್ಚತುರ್ಥೇ ॥
ಅಸುತೋ ಧನವರ್ಜಿತ ಸ್ತ್ರಿಕೋಣೇ ।
ಬಲವಾನ್ ಶತ್ರುಜಿತಶ್ಚ ಶತ್ರುಯಾತೇ ॥೨॥

ಸೂರ್ಯನು ತೃತೀಯದಲ್ಲಿದ್ದರೆ ಬುದ್ಧಿವಂತನೂ, ಪರಾಕ್ರಮವುಳ್ಳವನೂ, ಚತುರ್ಥದಲ್ಲಿದ್ದರೆ ಸುಖವಿಲ್ಲದವನೂ, ಪೀಡಿತ ಮನಸ್ಸುಳ್ಳವನೂ, ಪಂಚಮದಲ್ಲಿದ್ದರೆ ಪುತ್ರಹೀನನೂ, ಧನವಿಲ್ಲದ ವನೂ, ಷಷ್ಠದಲ್ಲಿದ್ದರೆ ಬಲವಂತನೂ, ಶತ್ರುಗಳನ್ನು ಜಯಿಸುವವನೂ, ಶತ್ರುಗಳು ಬರುವವನೂ ಆಗುತ್ತಾನೆ.

ಸ್ತ್ರೀಭಿರ್ಗತಃ ಪರಿಭವಂ ಮದಗೇ ಪತಂಗೇ ।
ಸ್ವಲ್ಪಾತ್ಮಜೋ ನಿಧನಗೇ ವಿಕಲೇಕ್ಷಣಶ್ಚ ॥
ಧರ್ಮೇ ಸುತಾರ್ಥ ಸುಖಭಾಕ್ ಸುಖಶೌರ್ಯಭಾಕ್‌ಖೇ ।
ಲಾಭೇ ಪ್ರಭೂತ ಧನವಾನ್ ಪತಿತಸ್ತುರಿಃಫೇ ॥೩॥

ಸೂರ್ಯನು ಸಪ್ತಮದಲ್ಲಿದ್ದರೆ ಸ್ತ್ರೀಯರಿಂದ ತಿರಸ್ಕಾರ ಹೊಂದುವವನೂ, ಅಷ್ಟಮದಲ್ಲಿದ್ದರೆ ಅಲ್ಪ ಪುತ್ರರುಳ್ಳವನೂ ಕಣ್ಣಿನ ರೋಗವುಳ್ಳವನೂ, ನವಮದಲ್ಲಿದ್ದರೆ ಪುತ್ರರೂ ಧನಸುಖಗಳನ್ನು ಹೊಂದು ವವನೂ, ದಶಮದಲ್ಲಿದ್ದರೆ ಸುಖವನ್ನೂ ಶೌರ್ಯವನ್ನೂ ಹೊಂದುವವನೂ, ಲಾಭದಲ್ಲಿದ್ದರೆ ವಿಶೇಷ ಧನಸಂಪತ್ತಿಯುಳ್ಳವನೂ, ವ್ಯಯದಲ್ಲಿದ್ದರೆ ಪತಿತನೂ (ಸ್ವಕರ್ಮಭ್ರಷ್ಟ) ಆಗುತ್ತಾನೆ.

ಮೂಕೋನ್ಮತ್ತ ಜಡಾಂಧಹೀನಬಧಿರ ಪ್ರೇಷ್ಯಾಃ ಶಶಾಂಕೋದಯೇ ।
ಸ್ವರ್ಕ್ಷಾಜೋಚ್ಚಗತೇಧನೀ ಬಹುಸುತಃ ಸಸ್ವಃ ಕುಟುಂಬೀಧನೇ ॥
ಹಿಂಸ್ರೋ ಭ್ರಾತೃಗತೇ ಸುಖೀಸತನಯೇ ತತ್ಪ್ರೋಕ್ತ ಭಾವಾನ್ವಿತೋ ।
ನೈಕಾರಿರ್ಮೃದು ಕಾಯವಹ್ನಿ ಮದನಸ್ತೀಕ್ಷ್ಣೋ ಲಸಶ್ಚಾರಿಗೇ ॥೪॥

ಚಂದ್ರನು ಲಗ್ನದಲ್ಲಿದ್ದರೆ ಮೂಕನೂ ಉನ್ಮತ್ತನೂ ಮೂರ್ಖನೂ ಕರುಡನೂ ನೀಚನೂ ಕಿವುಡನೂ ಪರಿಚಾರಕನೂ (ಹೀಗೆ ಯಾವುದಾದರೊಂದು) ಆಗುವನು. ಅಲ್ಲದೆ ಕರ್ಕಾಟಕಲಗ್ನವಾಗಿ ಚಂದ್ರನು ಅಲ್ಲಿದ್ದರೆ ಧನವಂತನೂ, ಮೇಷಲಗ್ನವಾಗಿದ್ದರೆ ಅನೇಕ ಪುತ್ರರುಳ್ಳವನೂ, ವೃಷಭ ಲಗ್ನವಾಗಿದ್ದರೆ ಬಹಳ ಧನವುಳ್ಳವನೂ ಆಗುತ್ತಾನೆ. ದ್ವಿತೀಯದಲ್ಲಿದ್ದರೆ ಕುಟುಂಬವಂತನೂ, ತೃತೀಯದಲ್ಲಿದ್ದರೆ ಹಿಂಸಕನೂ, ಚತುರ್ಥದಲ್ಲಿದ್ದರೆ ಸುಖವುಳ್ಳವನೂ, ಪಂಚಮದಲ್ಲಿದ್ದರೆ ಪುತ್ರರುಳ್ಳವನೂ, ಷಷ್ಠದಲ್ಲಿದ್ದರೆ ಅನೇಕ ಶತ್ರುಗಳುಳ್ಳವನೂ, ಮೃದುವಾದ ಶರೀರವುಳ್ಳವನೂ, ಅಗ್ನಿಮಾಂದ್ಯವುಳ್ಳವನೂ, ಅಲ್ಪರತಿಯುಳ್ಳವನೂ, ತೀಕ್ಷ್ಣ ಸ್ವಭಾವವುಳ್ಳವನೂ, ಆಲಸ್ಯವುಳ್ಳವನೂ ಆಗಿರುತ್ತಾನೆ.

ಈರ್ಷ್ಯುಸ್ತೀವ್ರ ಮದೋಮದೇ ಬಹುಮತಿ ರ್ವ್ಯಾಧ್ಯರ್ದಿತಶ್ಚಾಷ್ಟಮೇ ।
ಸೌಭಾಗ್ಯಾತ್ಮಜ ಮಿತ್ರಬಂಧು ಧನಭಾಕ್ ಧರ್ಮಸ್ಥಿತೇ ಶೀತಗೌ ॥
ನಿಷ್ಪತ್ತಿಂ ಸಮುಪೈತಿ ಧರ್ಮಧನಧೀ ಶೌರ್ಯೈರ್ಯುತಃ ಕರ್ಮಗೇ ।
ಖ್ಯಾತೋಭಾವ ಗುಣಾನ್ವಿತೋ ಭಗವತೇ ಕ್ಷುದ್ರೋಂಗ ಹೀನೋವ್ಯಯೇ ॥೫॥

ಚಂದ್ರನು ಸಪ್ತಮದಲ್ಲಿದ್ದರೆ ಮತ್ಸರವುಳ್ಳವನೂ, ಅಧಿಕವಾದ ವಿರಹತಾಪವುಳ್ಳವನೂ, ಅಷ್ಟಮ ದಲ್ಲಿದ್ದರೆ ಚಪಲಬುದ್ಧಿಯುಳ್ಳವನೂ, ರೋಗಪೀಡಿತನೂ, ನವಮದಲ್ಲಿದ್ದರೆ ಸೌಭಾಗ್ಯ ಪುತ್ರ ಬಂಧು, ಮಿತ್ರ, ಧನ ಇವುಗಳುಳ್ಳವನೂ, ದಶಮದಲ್ಲಿದ್ದರೆ ಮಾಡಿದ ಕೆಲಸಗಳಿಂದ ಫಲ ಪಡೆಯು ವವನೂ, ಧರ್ಮ, ಧನ, ಬುದ್ಧಿ, ಪರಾಕ್ರಮಗಳಿಂದ ಕೂಡಿದವನೂ, ಲಾಭದಲ್ಲಿದ್ದರೆ ಪ್ರಖ್ಯಾತನಾಗು ವವನೂ, ಲಾಭಭಾವಕ್ಕೆ ಉಕ್ತವಾದ ಉತ್ತಮ ಸಂಪತ್ತುಳ್ಳವನೂ, ವ್ಯಯದಲ್ಲಿದ್ದರೆ ಕ್ಷುದ್ರನೂ ಅಂಗಹೀನನೂ ಆಗುತ್ತಾನೆ.

ಲಗ್ನೇ ಕುಜೇಕ್ಷತ ತನುರ್ಧನಗೇ ಕದನ್ನೋ ।
ಧರ್ಮೇಘವಾನ್ ದಿನಕರ ಪ್ರತಿಮೋನ್ಯ ಸಂಸ್ಥಃ ॥
ವಿದ್ವಾನ್ ಧನೀಪ್ರಖಲ ಪಂಡಿತ ಮಂತ್ರ್ಯ ಶತ್ರುಃ ।
ಧರ್ಮಜ್ಞ ವಿಶ್ರುತಗುಣಃ ಪರತೋರ್ಕವತ್ಙ್ಜ್ಞೇ ॥೬॥

ಕುಜನು ಲಗ್ನದಲ್ಲಿದ್ದರೆ ಘಾಯವುಳ್ಳ ಶರೀರವುಳ್ಳವನೂ, ದ್ವಿತೀಯದಲ್ಲಿದ್ದರೆ ಕುತ್ಸಿತಾನ್ನ ಭೋಜನ ಮಾಡುವವನೂ, ನವಮದಲ್ಲಿದ್ದರೆ ಪಾಪಿಷ್ಟನೂ ಆಗುವನು. ಬಾಕಿ ಉಳಿದ ೩-೪-೫-೬-೭-೮-೧೦-೧೧-೧೨ ಈ ಭಾವಗಳಲ್ಲಿದ್ದರೆ ಸೂರ್ಯನಿಗೆ ಹೇಳಲ್ಪಟ್ಟ ಫಲಗಳನ್ನೇ ಕುಜನಿಗೂ

ಹೇಳತಕ್ಕದ್ದು. ಬುಧನು ಲಗ್ನದಲ್ಲಿರೆ ವಿದ್ವಾಂಸನೂ ದ್ವಿತೀಯದಲ್ಲಿದ್ದರೆ ಧನವಂತನೂ ತೃತೀಯ ದಲ್ಲಿದ್ದರೆ ದುರ್ಜನನೂ, ಚತುರ್ಥದಲ್ಲಿದ್ದರೆ ಪಂಡಿತನೂ, ಪಂಚಮದಲ್ಲಿದ್ದರೆ ಮಂತ್ರಿಯೂ (ಒಳ್ಳೆ ಬುದ್ಧಿಚಾತುರ್ಯವಿರುವುದು), ಷಷ್ಠದಲ್ಲಿದ್ದರೆ ಶತ್ರುಗಳಿಲ್ಲದವನೂ, ಸಪ್ತಮದಲ್ಲಿದ್ದರೆ ಧರ್ಮಜ್ಞನೂ, ಅಷ್ಟಮದಲ್ಲಿದ್ದರೆ ವಿಖ್ಯಾತವಾದ ಗುಣಗಳುಳ್ಳವನೂ ಆಗುವನು. ಬಾಕಿ ಉಳಿದ ೯-೧೦-೧೧-೧೨ ಈ ಭಾವಗಳಲ್ಲಿದ್ದರೆ ಸೂರ್ಯನಿಗೆ ಹೇಳಿದ ಫಲಗಳನ್ನೆ ಬುಧನಿಗೂ ಹೇಳತಕ್ಕದ್ದು.

ವಿದ್ವಾನ್ ಸುವಾಕ್ಯಃ ಕೃಪಣಃ ಸುಖೀ ಚ ।
ಧೀಮಾನ ಶತ್ರುಃ ಪಿತೃತೋಧಿಕಶ್ಚ ॥
ನೀಚಸ್ತಪಸ್ವೀ ಸಧನಃ ಸಲಾಭಃ ।
ಖಲಶ್ಚ ಜೀವೇ ಕ್ರಮಶೋ ವಿಲಗ್ನಾತ್ ॥೭॥

ಗುರುವು ಲಗ್ನದಲ್ಲಿದ್ದರೆ ವಿದ್ವಾಂಸನೂ, ದ್ವಿತೀಯದಲ್ಲಿದ್ದರೆ ಒಳ್ಳೆಯ ಮಾತುಗಳನ್ನಾಡುವವನೂ, ತೃತೀಯದಲ್ಲಿದ್ದರೆ ಕೃಪಣನೂ, ಚತುರ್ಥದಲ್ಲಿದ್ದರೆ ಸುಖವಂತನೂ, ಪಂಚಮದಲ್ಲಿದ್ದರೆ ಬುದ್ಧಿ ವಂತನೂ, ಷಷ್ಠದಲ್ಲಿದ್ದರೆ ಶತ್ರುಗಳಿಲ್ಲದವನೂ, ಸಪ್ತಮದಲ್ಲಿದ್ದರೆ ತಂದೆಗಿಂತಲೂ ಹೆಚ್ಚಿನ ಗುಣ ವಂತನೂ, ಅಷ್ಟಮದಲ್ಲಿದ್ದರೆ ನೀಚನೂ, ನವಮದಲ್ಲಿದ್ದರೆ ತಪಸ್ವಿಯೂ/ದಶಮದಲ್ಲಿದ್ದರೆ ಧನದಿಂದ ಕೂಡಿದವನೂ, ಏಕಾದಶದಲ್ಲಿದ್ದರೆ ಲಾಭವನ್ನು ಹೊಂದುವವನೂ ವ್ಯಯದಲ್ಲಿದ್ದರೆ ಖಲನೂ ಆಗುತ್ತಾನೆ.

ಸ್ಮರನಿಪುಣಃ ಸುಖಿತಶ್ಚ ವಿಲಗ್ನೇ ।
ಪ್ರಿಯಕಲ ಹೋಸ್ತಗತೇ ಸುರತೇಪ್ಸುಃ ॥
ತನಯಗತೇ ಸುಖಿತೋ ಭೃಗುಪುತ್ರೇ ।
ಗುರುವದತೋ ನ್ಯಗೃಹೇ ಸಧನೋಂತ್ಯೇ ॥೮॥

ಶುಕ್ರನು ಲಗ್ನದಲ್ಲಿದ್ದರೆ ಕಾಮಶಾಸ್ತ್ರ ನಿಪುಣನೂ, ಸುಖಿಯೂ, ಸಪ್ತಮದಲ್ಲಿದ್ದರೆ ಪ್ರೇಮ ಕಲಹ ಮಾಡುವವನೂ, ಕಾಮ ಕ್ರೀಡಾ ವಿಲಾಸವುಳ್ಳವನೂ, ಪಂಚಮದಲ್ಲಿದ್ದರೆ ಸುಖವುಳ್ಳವನೂ ಆಗುತ್ತಾನೆ. ಬಾಕಿ ಉಳಿದ ೨-೩-೪-೬-೮-೯-೧೦-೧೧-೧೨ ಈ ಭಾವಗಳಲ್ಲಿದ್ದರೆ ಗುರುವಿಗೆ ಹೇಳಲ್ಪಟ್ಟ ಫಲಗಳನ್ನು ಶುಕ್ರನಿಗೂ ಹೇಳತಕ್ಕದ್ದು.

ಅದೃಷ್ಟಾರ್ಥೋ ರೋಗೀ ಮದನ ವಶಗೋತ್ಯಂತ ಮಲಿನಃ ।
ಶಿಶುತ್ವೇ ಪೀಡಾರ್ತಃ ಸವಿತೃಸುತ ಲಗ್ನೇ ತ್ವಲಸವಾಕ್ ॥
ಗುರುಸ್ವಕ್ಷೋರ್ಚಸ್ಥೇ ನೃಪತಿ ಸದೃಶೋ ಗ್ರಾಮಪುರಪಃ ॥
ಸು ವಿದ್ವಾಂಶ್ಚಾರ್ವಂಗೋ ದಿನಕರ ಸಮೋನ್ಯತ್ರ ಕಥಿತಃ ॥೯॥

ಶನಿಯು ಲಗ್ನದಲ್ಲಿದ್ದರೆ ನಿತ್ಯದರಿದ್ರನೂ ರೋಗಿಯೂ ಕಾಮಾತುರನೂ ಮಲಿನನೂ ಶಿಶುವಿರು

ವಾಗ ವ್ಯಾಧಿಪೀಡಿತನೂ, ಕೆಟ್ಟ ಮಾತುಗಳನ್ನಾಡುವವನೂ ಆಗುತ್ತಾನೆ. ಆದರೆ ಧನುರ್ಮೀನ, ಮಕರ, ಕುಂಭ, ತುಲಾರಾಶಿಗಳಲ್ಲಿ ಯಾವುದಾದರೊಂದು ಲಗ್ನವಾಗಿ ಅಲ್ಲಿ ಶನಿಯಿದ್ದರೆ ರಾಜ ಸಮಾನನೂ, ಗ್ರಾಮ ಅಥವಾ ಪಟ್ಟಣಗಳಿಗೆ ಅಧಿಪತಿಯೂ, ಒಳ್ಳೆಯ ವಿದ್ವಾಂಸನೂ, ಸುಂದರ ವಾದ ಶರೀರವುಳ್ಳವನೂ ಆಗುತ್ತಾನೆ. ಮಿಕ್ಕುಳಿದ ೨-೩-೪-೫-೬-೭-೮-೯-೧೦-೧೧-೧೨ ಈ ಭಾವಗಳಲ್ಲಿದ್ದರೆ ಸೂರ್ಯನಿಗೆ ಹೇಳಲ್ಪಟ್ಟ ಫಲಗಳನ್ನು ಶನಿಗೂ ಹೇಳತಕ್ಕದ್ದು.

**ಸುಹೃದರಿ ಪರಕೀಯ ಸ್ವರ್ಕ್ಷತುಂಗ ಸ್ಥಿತಾನಾಂ ।**<br>
**ಫಲಮನು ಪರಿಚಿಂತ್ಯಂ ಲಗ್ನ ದೇಹಾದಿ ಭಾವೈಃ ॥**<br>
**ಸಮುಪಚಯ ವಿಪತ್ತೀ ಸೌಮ್ಯ ಪಾಪೇಷು ಸತ್ಯಃ ।**<br>
**ಕಥಯತಿ ವಿಪರೀತಂ ರಿಃಫ ಷಷ್ಠಾಷ್ಟಮೇಷು ॥೧೦॥**

ಲಗ್ನ ದೇಹಾದಿ ಭಾವಗಳಲ್ಲಿ ಮಿತ್ರ ಶತ್ರು ಪರಕೀಯ (ಸಮ ವ ಉದಾಸೀನ) ಸ್ವಕ್ಷೇತ್ರ, ಉಚ್ಚದಲ್ಲಿರುವ ಗ್ರಹರ ಶುಭಾಶುಭ ಫಲಗಳನ್ನು ವಿಚಾರ ಮಾಡಿ ಕಲ್ಪಿಸಬೇಕು. ಶುಭಗ್ರಹರು ಭಾವವೃದ್ಧಿಯನ್ನೂ ಪಾಪಾಗ್ರಹರು ಭಾವಹಾನಿಯನ್ನೂ ಮಾಡುತ್ತಾರೆ. ಆದರೆ ವ್ಯಯ, ಷಷ್ಠ, ಅಷ್ಟಮ ಭಾವಗಳಿಗೆ ವಿಪರೀತ ಫಲಗಳನ್ನು ಹೇಳಬೇಕು. ಹ್ಯಾಗಂದರೆ ಷಷ್ಠದಲ್ಲಿ ಶುಭಗ್ರಹರಿದ್ದರೆ ಶತ್ರುನಾಶ ಇತ್ಯಾದಿ ಭಾವನಾಶಾತ್ಮಕ ಶುಭಫಲಗಳೆಂದೂ ಪಾಪಗ್ರಹರಿದ್ದರೆ ಭಾವವೃದ್ಧಿ ರೂಪ ಅಶುಭಫಲಗಳೆಂದೂ ಸತ್ಯಾಚಾರ್ಯರಿಂದ ಹೇಳಲ್ಪಟ್ಟಿದೆ.

**ಉಚ್ಚ ತ್ರಿಕೋಣ ಸ್ವಸುಹೃಚ್ಛತ್ರು ನೀಚ ಗ್ರಹಾರ್ಕಗೈಃ ।**<br>
**ಶುಭಂ ಸಂಪೂರ್ಣ ಪಾದೋನ ದಲಪಾದಾಲ್ಪ ನಿಷ್ಫಲಮ್ ॥೧೧॥**

**॥ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಭಾವಫಲ ನಿರೂಪಣಂ ನಾಮ ಅಷ್ಟಾದಶೋಧ್ಯಾಯಃ/॥**

ಸೂರ್ಯಾದಿ ಗ್ರಹರು ಉಚ್ಚದಲ್ಲಿದ್ದರೆ ಪೂರ್ಣ, ಮೂಲತ್ರಿಕೋಣದಲ್ಲಿದ್ದರೆ ಮುಕ್ಕಾಲು, ಸ್ವಕ್ಷೇತ್ರದಲ್ಲಿದ್ದರೆ ಅರ್ಧ, ಮಿತ್ರಕ್ಷೇತ್ರದಲ್ಲಿದ್ದರೆ ಕಾಲು, ಶತ್ರುಕ್ಷೇತ್ರದಲ್ಲಿದ್ದರೆ ಎಂಟನೆಯ ಒಂದಂಶ, ನೀಚದಲ್ಲಿದ್ದರೆ ನಿಷ್ಫಲವೆಂದು ತಿಳಿಯಬೇಕು. (ತಾರತಮ್ಯ ಪ್ರಕಾರ ನೀಚದಲ್ಲಿದ್ದರೆ ಹದಿನಾರನೆಯ ಒಂದಂಶ, ಅಸ್ತನಾಗಿದ್ದರೆ ಮೂವತ್ತೆರಡನೆಯ ಒಂದಂಶವೆಂತ ಹೇಳಬಹುದು.)

**॥ ಭಾವಫಲವೆಂಬ ಹದಿನೆಂಟನೇಯ ಅಧ್ಯಾಯವು ॥**

## ॥ ಆಶ್ರಯಯೋಗಾಧ್ಯಾಯಃ ॥

ಕುಲಸಮ ಕುಲಮುಖ್ಯ ಬಂಧು ಪೂಜ್ಯಾ ।
ಧನಿಸುಖಿ ಭೋಗಿ ನೃಪಾಃ ಸ್ವಭೈಕ ವೃದ್ಧ್ಯಾ ॥
ಪರವಿಭವ ಸುಹೃತ್ಸ್ವ ಬಂಧು ಪೋಷ್ಯಾ ।
ಗಣಪ ಬಲೇಶ ನೃಪಾಶ್ಚ ಮಿತ್ರಭೇಷು ॥೧॥

ಜನ್ಮಕಾಲದಲ್ಲಿ ಒಂದು ಗ್ರಹವು ಸ್ವಕ್ಷೇತ್ರವಾಗಿದ್ದರೆ ತನ್ನ ಕುಲದವರಿಗೆ ಸಮಾನನೂ, ಎರಡು ಗ್ರಹರಿದ್ದರೆ ತನ್ನ ಕುಲದವರಲ್ಲಿ ಶ್ರೇಷ್ಠನೂ, ಮೂರು ಗ್ರಹರಿದ್ದರೆ ಬಂಧು ಪೂಜ್ಯ, ನಾಲ್ಕು ಗ್ರಹರಿದ್ದರೆ ಧನವಂತನೂ, ಐದು ಗ್ರಹರಿದ್ದರೆ ಸುಖವನ್ನನುಭವಿಸುವವನೂ, ಆರು ಗ್ರಹರಿದ್ದರೆ ಭೋಗ ಸುಖಗಳುಳ್ಳವನೂ, ಏಳು ಗ್ರಹರಿದ್ದರೆ ರಾಜನೂ ಆಗುವನು ಹಾಗೆಯೇ ಒಂದು ಗ್ರಹ ಮಿತ್ರಕ್ಷೇತ್ರವಾಗಿದ್ದರೆ ಅನ್ಯರಿಂದ ಜೀವಿಸುವವನೂ, ಎರಡು ಗ್ರಹರಿದ್ದರೆ ಮಿತ್ರರಿಂದ ಜೀವಿಸುವವನೂ, ಮೂರು ಗ್ರಹರಿದ್ದರೆ ತನ್ನ ಕುಟುಂಬದವರಿಂದ ಜೀವಿಸುವವನೂ, ನಾಲ್ಕು ಗ್ರಹರಿದ್ದರೆ ಬಂಧುಗಳಿಂದ ಜೀವಿಸುವವನೂ, ಐದು ಗ್ರಹರಿದ್ದರೆ ಸಮೂಹಕ್ಕೆ ಅಧಿಪತಿಯೂ, ಆರು ಗ್ರಹರಿದ್ದರೆ ಸೇನಾಪತಿಯೂ, ಏಳು ಗ್ರಹರಿದ್ದರೆ ರಾಜನೂ ಆಗುತ್ತಾನೆ.

ಜನಯತಿ ನೃಪಮೇ ಕೋಪ್ಯುಚ್ಚಗೋ ಮಿತ್ರದೃಷ್ಟಃ ।
ಪ್ರಚುರಧನ ಸಮೇತಂ ಮಿತ್ರಯೋಗಾಚ್ಚ ಸಿದ್ಧಮ್ ॥
ವಿಧನ ವಿಸುಖ ಮೂಢ ವ್ಯಾಧಿತಾ ಬಂಧತಪ್ತಾಃ ।
ವಧದುರಿತ ಸಮೇತಾಃ ಶತ್ರು ನೀಚರ್ಕ್ಷಗೇಷು ॥೨॥

ಜನ್ಮಕಾಲದಲ್ಲಿ ಒಂದು ಗ್ರಹವು ಉಚ್ಚದಲ್ಲಿದ್ದು ಮಿತ್ರಗ್ರಹರಿಂದ ನೋಡಲ್ಪಟ್ಟರೆ ರಾಜನಾಗುತ್ತಾನೆ. ಒಂದು ಗ್ರಹವು ಉಚ್ಚದಲ್ಲಿದ್ದು ಮಿತ್ರಗ್ರಹರಿಂದ ಕೂಡಿದ್ದರೆ ರಾಜನಾಗುವುದಲ್ಲದೆ ವಿಶೇಷ ಧನವನ್ನೂ, ಸರ್ವಜನರಿಂದ ಪೂಜ್ಯತ್ವವನ್ನೂ ಉಂಟುಮಾಡುತ್ತಾನೆ. ಒಂದು ಗ್ರಹವು ಶತ್ರು ಅಥವಾ ನೀಚ ಕ್ಷೇತ್ರದಲ್ಲಿದ್ದರೆ ಧನವಿಲ್ಲದವನೂ, ಎರಡು ಗ್ರಹರಿದ್ದರೆ ಸುಖವಿಲ್ಲದವನೂ, ಮೂರು ಗ್ರಹರಿದ್ದರೆ ಮೂರ್ಖನೂ, ನಾಲ್ಕು ಗ್ರಹರಿದ್ದರೆ ವ್ಯಾಧಿಪೀಡಿತನೂ, ಐದು ಗ್ರಹರಿದ್ದರೆ ಬಂಧನದಿಂದ ದುಃಖಪಡುವವನೂ, ಆರು ಗ್ರಹರಿದ್ದರೆ ಹಿಂಸೆಯಿಂದ ಕೂಡಿದವನೂ, ಏಳು ಗ್ರಹರಿದ್ದರೆ ಪಾಪದಿಂದ ಕೂಡಿದವನೂ ಆಗುತ್ತಾನೆ.

ನ ಕುಂಭಲಗ್ನಂ ಶುಭಮಾಹ ಸತ್ಯೋ ।
ನ ಭಾಗಭೇದಾದ್ಯವನಾ ವದಂತಿ ॥
ಕಸ್ಯಾಂಶ ಭೇಧೋನ ತಥಾಸ್ತಿರಾಶೇ ।
ರತಿಪ್ರಸಂಗಸ್ತ್ವಿತಿ ವಿಷ್ಣುಗುಪ್ತಃ ॥೩॥

ಸತ್ಯಾಚಾರ್ಯರು ಕುಂಭಲಗ್ನವು ಶುಭವಾದುದಲ್ಲವೆಂತ ಹೇಳಿದರು. ಆದರೆ ಯವನಾಚಾರ್ಯರು ಭಾಗಭೇದದಿಂದ ಕುಂಭ ದ್ವಾದಶಾಂಶ ಮಾತ್ರ ಅಶುಭವೆಂತ ಹೇಳಿದರು. ಅದಕ್ಕೆ ವಿಷ್ಣುಗುಪ್ತರು ಯಾವ ರಾಶಿಯಲ್ಲಿ ಕುಂಭ ದ್ವಾದಶಾಂಶ ಬರುವುದಿಲ್ಲ, ಇದು ಅಧಿಕಪ್ರಸಂಗವೆಂದು ಹೇಳಿದರು. ತಾತ್ಪರ್ಯವೇನೆಂದರೆ, ಕುಂಭ ಲಗ್ನವಾಗಿ ಲಗ್ನಕ್ಕೂ ಮತ್ತು ಶನಿಗೂ ವಿಶೇಷ ಬಲವಿದ್ದು ಗುರುದೃಷ್ಟಿಯಿದ್ದರೆ ವಿಶೇಷ ಫಲ ಉಂಟಾಗುವುದೆಂದು ತಿಳಿಯತಕ್ಕದ್ದು.

ಯಾತೇಷ್ವ ಸತ್ಸ್ವ ಸಮಭೇಷು ದಿನೇಶ ಹೋರಾಂ ।
ಖ್ಯಾತೋ ಮಹೋದ್ಯಮ ಬಲಾರ್ಥ ಯುತೋತಿ ತೇಜಾಃ ॥
ಚಾಂದ್ರೀ ಶುಭೇಷು ಯುಜಿಮಾರ್ದವ ಕಾಂತಿ ಸೌಖ್ಯ ।
ಸೌಭಾಗ್ಯಧೀ ಮಧುರ ವಾಕ್ಯಯುತಃ ಪ್ರಜಾತಃ ॥೪॥

ಪಾಪಗ್ರಹಗಳು ಮೇಷಾದಿ ವಿಷಮ ರಾಶಿಗಳಲ್ಲಿ ರವಿ ಹೋರೆಯನ್ನು ಹೊಂದಿರುವಾಗ ಜನಿಸಿದವನು ಮಹತ್ತರವಾದ ಉದ್ಯೋಗವನ್ನು ಮಾಡುವವನೂ, ಸಾಮರ್ಥ್ಯವಂತನೂ, ಖ್ಯಾತಿವಂತನೂ, ಸಂಪತ್ತಿನಿಂದ ಕೂಡಿದವನೂ, ತೇಜಸ್ಸುಳ್ಳವನೂ ಆಗುತ್ತಾನೆ. ಶುಭಗ್ರಹಗಳು ಸಮರಾಶಿಯಲ್ಲಿ ಚಂದ್ರಹೋರೆಯನ್ನು ಹೊಂದಿರುವಾಗ ಜನ್ಮಿಸಿದವನು ನಮ್ರನಾಗಿಯೂ, ಕಾಂತಿಯಿಂದಲೂ, ಸೌಖ್ಯದಿಂದಲೂ, ಸೌಭಾಗ್ಯ ಅಂದರೆ ಹೆಂಡತಿ, ಮಕ್ಕಳು, ಮಿತ್ರರು, ಧನ ಸಂಪತ್ತಿ, ದೇಹಾರೋಗ್ಯಗಳಿಂದ ಕೂಡಿದವನೂ, ಒಳ್ಳೆಯ ಬುದ್ಧಿಯಿಂದಲೂ, ಮೃದುವಾದ ಮಾತುಗಳಿಂದಲೂ ಕೂಡಿದವನಾಗುತ್ತಾನೆ.

ತಾಸ್ವೇವ ಹೋರಾ ಸ್ವಪರರ್ಕ್ಷಗೇಷು ।
ಜ್ಞೇಯಾನರಾಃ ಪೂರ್ವಗುಣೇಷು ಮಧ್ಯಾಃ ॥
ವ್ಯತ್ಯಸ್ತ ಹೋರಾಭವನ ಸ್ಥಿತೇಷು ।
ಮರ್ತ್ಯಾಭವಂತ್ಯುಕ್ತ ಗುಣೈರ್ವಿಹೀನಾಃ ॥೫॥

ಸಮರಾಶಿಯಲ್ಲಿ ರವಿಹೋರೆಯಲ್ಲಿ ಕ್ರೂರ ಗ್ರಹಗಳಿರುವಾಗ ಜನಿಸಿದವರಿಗೆ ಹಿಂದೆ ಹೇಳಲ್ಪಟ್ಟ ಮಹೋದ್ಯಮಾದಿ ಗುಣಗಳು ಮಧ್ಯಮ ಫಲಪ್ರದವಾಗುವುದು. ವಿಷಮ ರಾಶಿಗಳಲ್ಲಿ ಚಂದ್ರ ಹೋರೆಯಲ್ಲಿ ಶುಭಗ್ರಹಗಳಿರುವಾಗ ಜನಿಸಿದವರಿಗೆ ನಮ್ರ ಭಾವಾದಿ ಗುಣಗಳು ಮಧ್ಯಮ ಫಲ ಪ್ರದವಾಗುವುದು. ಯುಗ್ಮರಾಶಿಗಳಲ್ಲಿ ಪಾಪ ಗ್ರಹಗಳಿರುವಾಗ ಜನಿಸಿದವರು ಮಹೋದ್ಯಮ ವಿಲ್ಲದವರೂ, ಬಲವಿಲ್ಲದವರೂ, ಧನಹೀನರೂ, ಕಾಂತಿಹೀನರೂ ಆಗುವರು. ಓಜರಾಶಿಗಳಲ್ಲಿ ರವಿ ಹೋರೆಯಲ್ಲಿ ಶುಭಗ್ರಹಗಳಿರುವಾಗ ಹುಟ್ಟಿದವರು ನಮ್ರಭಾವವಿಲ್ಲದವರೂ, ಸುಖವಿಲ್ಲದವರೂ, ಬುದ್ಧಿಹೀನರೂ ಆಗುವರು.

ಕಲ್ಯಾಣರೂಪ ಗುಣಮಾತ್ಮ ಸುಹೃದ್ವ್ಯಕ್ಕಾಣೇ ।
ಚಂದ್ರೋsನ್ಯಗಸ್ತದಧಿನಾಥ ಗುಣಂ ಕರೋತಿ ॥

ವ್ಯಾಲೋದ್ಯತಾಯುಧ ಚತುಷ್ಟ ರಣಾಂಡ ಜೇಷು ।
ತೀಕ್ಷ್ಣೋತಿ ಹಿಂಸ್ರ ಗುರುತಲ್ಪರತೋಟನಶ್ಚ ॥೭॥

ಜನ್ಮಕಾಲದ ಚಂದ್ರನು ತನ್ನ ಅಥವಾ ಮಿತ್ರ ದ್ರೇಕ್ಕಾಣದಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಮಂಗಳಕರವಾದ ರೂಪಸೌಂದರ್ಯದಿಂದಲೂ, ಪರೋಪಕಾರಾದಿ ಗುಣಗಳಿಂದಲೂ ಕೂಡಿದವನಾಗುತ್ತಾನೆ. ಅನ್ಯ ದ್ರೇಕ್ಕಾಣದಲ್ಲಿ ಅಂದರೆ ಚಂದ್ರನು ಸಮಗ್ರಹ ದ್ರೇಕ್ಕಾಣದಲ್ಲಿದ್ದರೆ ಕಲ್ಯಾಣ, ರೂಪ ಗುಣಗಳು ಮಧ್ಯಮವಾಗಿಯೂ ಚಂದ್ರನು ಶತ್ರು ದ್ರೇಕ್ಕಾಣದಲ್ಲಿದ್ದರೆ ಕಲ್ಯಾಣಾದಿ ರೂಪ ಗುಣಗಳು ಇಲ್ಲದವನಾಗುತ್ತಾನೆಂದೂ ತಿಳಿಯತಕ್ಕದ್ದು. ಚಂದ್ರನು ಸರ್ಪದ್ರೇಕ್ಕಾಣದಲ್ಲಿದ್ದರೆ ತೀಕ್ಷ್ಣ, ಕ್ರೂರ ಸ್ವಭಾವದವನೂ, ಉದ್ಯತಾಯುಧ ದ್ರೇಕ್ಕಾಣದಲ್ಲಿದ್ದರೆ ಗುರುಪತ್ನಿಯಲ್ಲಿ ಆಸಕ್ತನೂ, ಪಕ್ಷಿದ್ರೇಕ್ಕಾಣದಲ್ಲಿದ್ದರೆ ಸದಾ ಸಂಚಾರಶೀಲನೂ ಆಗುತ್ತಾನೆ

ಸ್ತೇನೋಭೋಕ್ತಾ ಪಂಡಿತಾಢ್ಯೋ ನರೇಂದ್ರಃ ।
ಕ್ಲೀಬಃ ಶೂರೋಽವಿಷ್ಟಿ ಕೃದ್ದಾಸ ವೃತ್ತಿಃ ॥
ಪಾಪೋ ಹಿಂಸ್ರೋಽಭೀಶ್ಚ ವರ್ಗೋತ್ತಮಾಂಶೆ ।
ಷ್ವೇ ಪಾಮಿಶಾ ರಾಶಿವದ್ವಾದ ಶಾಂಶ್ಯೆಃ ॥೭॥

ಚಂದ್ರನು ಮೇಷವಲ್ಲದೆ (ಯಾವ ರಾಶಿಯಲ್ಲಾದರೂ) ಮೇಷ ನವಾಂಶೆಯಲ್ಲಿರುವಾಗ ಹುಟ್ಟಿದವನು ಕಳ್ಳನಾಗುವನು ವೃಷಭವಲ್ಲದೆ ವೃಷಭ ನವಾಂಶೆಯಲ್ಲಿದ್ದರೆ ಭೋಗಿಯಾಗುವನು ಮಿಥುನವಲ್ಲದೆ ಮಿಥುನಾಂಶೆಯಲ್ಲಿದ್ದರೆ ಪಂಡಿತನಾಗುವನು ಕರ್ಕಾಟಕವಲ್ಲದೆ ಕರ್ಕಾಟಕ ನವಾಂಶೆಯಲ್ಲಿದ್ದರೆ ಧನವಂತನಾಗುವನು ಸಿಂಹವಲ್ಲದೆ ಸಿಂಹ ನವಾಂಶೆಯಲ್ಲಿದ್ದರೆ ರಾಜನಾಗುವನು. ಕನ್ಯೆಯಲ್ಲದೆ ಕನ್ಯಾಂಶೆಯಲ್ಲಿದ್ದರೆ ನಪುಂಸಕನಾಗುವನು ತುಲಾ ಬಿಟ್ಟು ತುಲಾಂಶೆಯಲ್ಲಿದ್ದರೆ ಶೂರನಾಗುವನು. ವೃಶ್ಚಿಕವಲ್ಲದೆ ವೃಶ್ಚಿಕಾಂಶೆಯಲ್ಲಿದ್ದರೆ ಭಾರ ಹೊರುವವನಾಗುವನು ಧನುವಲ್ಲದೆ ಧನುನವಾಂಶೆಯಲ್ಲಿದ್ದರೆ ಭೃತ್ಯನಾಗುವನು. ಮಕರವಲ್ಲದೆ ಮಕರಾಂಶೆಯಲ್ಲಿದ್ದರೆ ಪಾಪಿಯಾಗುವನು. ಕುಂಭವಲ್ಲದೆ ಕುಂಭಾಂಶೆಯಲ್ಲಿದ್ದರೆ ಹಿಂಸೆ ಮಾಡುವವನಾಗುವನು. ಮೀನವಲ್ಲದೆ ಮೀನನವಾಂಶೆಯಲ್ಲಿದ್ದರೆ ಭಯವಿಲ್ಲದವನಾಗುವನು ಮೇಷಾದಿ ರಾಶಿಗಳಲ್ಲಿ ಆಯಾಯ ರಾಶಿಗಳ ಮೇಷಾದಿ ನವಾಂಶಗಳು ವರ್ಗೋತ್ತಮಾಂಶೆಗಳೆಂತ ಆಗುವುದು ಈ ವರ್ಗೋತ್ತಮಾಂಶೆಯಲ್ಲಿ ಚಂದ್ರನಿದ್ದರೆ "ಸ್ತೇನೋಭೋಕ್ತಾ ಪಂಡಿತಾಢ್ಯಾಃ" ಮೊದಲಾದವರಿಗೆ ಪ್ರಭುಗಳಾಗುವರು. ಅಂದರೆ ಮೇಷದಲ್ಲಿ ಚಂದ್ರನು ಮೇಷಾಂಶೆಯಲ್ಲಿದ್ದರೆ ಕಳ್ಳರಿಗೆ ರಾಜನಾಗುವನು. ವೃಷಭದಲ್ಲಿ ವೃಷಭಾಂಶೆಯಲ್ಲಿದ್ದರೆ ಭೋಗಪುರುಷರಲ್ಲಿ ದೊರೆಯಾಗುವನು. ಮಿಥುನದಲ್ಲಿ ಮಿಥುನಾಂಶೆಯಲ್ಲಿದ್ದರೆ ವಿದ್ವಾಂಸರಲ್ಲಿ ರಾಜನಾಗುವನು. ಕರ್ಕಾಟಕ ವರ್ಗೋತ್ತಮ ನವಾಂಶೆಯಲ್ಲಿದ್ದರೆ ಧನವಂತರಿಗೆ ಅಧಿಪತಿಯಾಗುವನು. ಸಿಂಹ ವರ್ಗೋಮಾಂಶೆಯಲ್ಲಿದ್ದರೆ ರಾಜರಲ್ಲಿ ಶ್ರೇಷ್ಠ ಚಕ್ರವರ್ತಿಯಾಗುವನು ಹೀಗೆಯೇ ವರ್ಗೋತ್ತಮಾಂಶೆಯು ಕನ್ಯೆಯಾಗಿದ್ದರೆ ನಪುಂಸಕರ ತಂಡಕ್ಕೆ ಅಧಿಪತಿಯೂ, ತುಲಾಂಶೆಯಾಗಿದ್ದರೆ ಸೈನ್ಯಾಧಿಪತಿಯೂ, ವೃಶ್ಚಿಕಾಂಶೆಯಾಗಿದ್ದರೆ ಭಾರ ಹೊರುವವರ ಅಧಿಪತಿಯೂ, ಧನುವಾಗಿದ್ದರೆ ಭೃತ್ಯರ ಮುಖಂಡನೂ, ಮಕರವಾಗಿದ್ದರೆ ಪಾಪಕರ್ಮ ಮಾಡುವವರಿಗೆ ಗುರುವೂ, ಕುಂಭವಾಗಿದ್ದರೆ ಹಿಂಸಕರಿಗೆ ಅಧಿಪತಿಯೂ

ಋೂನ ವರ್ಗೋತ್ತಮಾಂಶೆಯಾಗಿದ್ದರೆ ನಿರ್ಭಯವುಳ್ಳವರಿಗೆ ಅಧಿಪತಿಯೂ ಆಗುವನೆಂತ ತಿಳಿಯ ತಕ್ಕದ್ದು. ಮೇಷಾದಿ ದ್ವಾದಶಾಂಶೆಗಳಲ್ಲಿರುವ ಚಂದ್ರನಿಗೆ "ವೃತ್ತಾತ್ತಾಮ್ರದೃಗುಷ್ಣ" ಎಂಬ ಫಲ ದಂತೆ ಮೇಷಾದಿ ದ್ವಾದಶ ರಾಶಿಫಲಗಳೇ ದ್ವಾದಶಾಂಶಕ್ಕೆ ಫಲಗಳೆಂತ ತಿಳಿಯತಕ್ಕದ್ದು.

ಜಾಯಾನ್ವಿತೋ ಬಲವಿಭೂಷಣ ಸತ್ವಯುಕ್ತಃ ।
ತೇಜೋತಿ ಸಾಹಸಯುತಶ್ಚ ಕುಜೇ ಸ್ವಭಾಗೇ ॥
ರೋಗೀಮೃತ ಸ್ವಯುವತಿ ರ್ವಿಷಮೋನ್ಯದಾರೋ ।
ದುಃಖೀ ಪರಿಚ್ಛದ ಯುತೋ ಮಲಿನೋರ್ಕ ಪುತ್ರೇ ॥೮॥

ಜನ್ಮಕಾಲದಲ್ಲಿ ಯಾವ ರಾಶಿಯಲ್ಲಾದರೂ ಕುಜನು ತನ್ನ ತ್ರಿಂಶಾಂಶದಲ್ಲಿದ್ದರೆ ಹೆಂಡತಿಯಿಂದ ಕೂಡಿ ದವನೂ, ಬಲವಂತನಾಗಿರುವವನೂ, ಭೂಷಣಾದ್ಯಲಂಕಾರ ಯುಕ್ತನೂ, ತೇಜಸ್ಸಿನಿಂದ ಕೂಡಿ ದವನೂ, ಅತ್ಯಂತ ಸಾಹಸವುಳ್ಳವನೂ ಆಗುವನು. ಹಾಗೆಯೇ ಶನಿಯು ತನ್ನ ತ್ರಿಂಶಾಂಶದಲ್ಲಿದ್ದರೆ ವ್ಯಾಧಿಪೀಡಿತನೂ, ಹೆಂಡತಿಯ ಮರಣವನ್ನು ನೋಡುವವನೂ, ಕ್ರೂರ ಸ್ವಭಾವವುಳ್ಳವನೂ, ಪರ ದಾರಾಸಕ್ತನೂ ದುಃಖಿಯೂ ಮನೆ ವಸ್ತ್ರಾದ್ಯುಪಕರಣಗಳಿಂದ ಕೂಡಿದವನೂ, ಮಲಿನನೂ ಆಗುವನು.

ಸ್ವಾಂಶೇ ಗುರೌ ಧನಯಶಃ ಸುಖ ಬುದ್ಧಿಯುಕ್ತಾ ।
ಸ್ತೇಜಸ್ವಿ ಪೂಜ್ಯ ನಿರುಗುದ್ಯಮ ಭೋಗವಂತಃ ॥
ಮೇಧಾಕಲಾ ಕಪಟಕಾವ್ಯ ವಿವಾದ ಶಿಲ್ಪ ।
ಶಾಸ್ತ್ರಾರ್ಥ ಸಾಹಸಯುತಾಃ ಶಶಿಜೇತಿ ಮಾನ್ಯಾಃ ॥೯॥

ಜನ್ಮಕಾಲದಲ್ಲಿ ಯಾವ ರಾಶಿಯಲ್ಲಾದರೂ ಗುರುವು ತನ್ನ ತ್ರಿಂಶಾಂಶದಲ್ಲಿದ್ದರೆ ಧನಸಂಪತ್ತಿ, ಕೀರ್ತಿ, ಸುಖ, ಬುದ್ಧಿ, ಇವುಗಳಿಂದ ಕೂಡಿದವನೂ, ಒಳ್ಳೆಯ ತೇಜಸ್ಸುಳ್ಳವನೂ, ಪೂಜ್ಯನೂ, ಆರೋಗ್ಯವಂತನೂ, ಉದ್ಯೋಗಿಯೂ, ಭೋಗ ವೈಭವಗಳಿಂದ ಕೂಡಿದವನೂ ಆಗುವನು. ಹಾಗೆಯೇ ಬುಧನು ತನ್ನ ತ್ರಿಂಶಾಂಶೆಯಲ್ಲಿದ್ದರೆ ಬುದ್ಧಿವಂತನಾಗಿದ್ದು, ಗೀತವಾದ್ಯಾದಿ ಶಾಸ್ತ್ರ ಗಳನ್ನು ತಿಳಿದವನೂ, ಡಾಂಭಿಕನೂ, ಕವಿತ್ವವನ್ನು ಮಾಡತಕ್ಕವನೂ, ವಾಕ್ ಸಾಮರ್ಥ್ಯವುಳ್ಳ ವನೂ, ಶಿಲ್ಪಶಾಸ್ತ್ರ ಮತ್ತು ಧರ್ಮಶಾಸ್ತ್ರಗಳನ್ನು ತಿಳಿದವನೂ, ವಿಶೇಷ ಸಾಹಸದಿಂದ ಕೂಡಿ ದವನೂ, ಹೆಚ್ಚಾದ ಮಾನವಂತ ಜನರಿಂದ ಸನ್ಮಾನ ಪಡೆಯುವವನೂ ಆಗುವನು.

ಸ್ವತ್ರಿಂಶಾಂಶೇ ಬಹುಸುತ ಸುಖಾರೋಗ್ಯ ಭಾಗ್ಯಾರ್ಥ ರೂಪಃ ।
ಶುಕ್ರೇ ತೀಕ್ಷ್ಣಃ ಸುಲಲಿತವಪುಃ ಸುಪ್ರಕೀರ್ಣೇಂದ್ರಿಯಶ್ಚ ॥
ಶೂರಸ್ತಬ್ಧೌ ವಿಷಮ ವಧಕೌ ಸದ್ಗುಣಾಢ್ಯೌ ಸುಖಿಜ್ಞೌ ।
ಚಾರ್ವಾಂಗೇಷ್ಟೌ ರವಿ ಶಶಿಯುತೇಷ್ವಾರ ಪೂರ್ವಾಂಶಕೇಷು ॥೧೦॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಆಶ್ರಯಯೋಗ ನಿರೂಪಣಂ ನಾಮ ಏಕೋನವಿಂಶೋಧ್ಯಾಯಃ ॥

ಜನ್ಮಕಾಲದಲ್ಲಿ ಯಾವ ರಾಶಿಯಲ್ಲಾದರೂ ಶುಕ್ರನು ತನ್ನ ತ್ರಿಂಶಾಂಶೆಯಲ್ಲಿದ್ದರೆ ಹೆಚ್ಚಾದ ಪುತ್ರಸುಖ, ಆರೋಗ್ಯ, ಸೌಭಾಗ್ಯ, ಧನ ಸಂಪತ್ತಿನಿಂದ ಕೂಡಿದವನೂ, ಕ್ರೂರನೂ, ಅತಿಯಾದ ಮನಮೋಹಕ ಶರೀರವುಳ್ಳವನೂ, ಪ್ರಬಲ ಕಾಮದಿಂದ ಕೂಡಿದವನೂ ಆಗುವನು. ಜನ್ಮಕಾಲದಲ್ಲಿ ಯಾವ ರಾಶಿಯಲ್ಲಾದರೂ ಕುಜ ತ್ರಿಂಶಾಂಶೆಯಲ್ಲಿ ರವಿಯಿದ್ದರೆ ಶೂರನೂ, ಚಂದ್ರನಿದ್ದರೆ ಆಲಸ್ಯವುಳ್ಳವನೂ, ಶನಿ ತ್ರಿಂಶಾಂಶದಲ್ಲಿ ರವಿಯಿದ್ದರೆ ಕ್ರೂರ ಸ್ವಭಾವವುಳ್ಳವನೂ, ಚಂದ್ರನಿದ್ದರೆ ಹಿಂಸಕನೂ, ಗುರುತ್ರಿಂಶಾಂಶದಲ್ಲಿ ರವಿಯಿದ್ದರೆ ಒಳ್ಳೇ ಗುಣಗಳಿಂದ ಕೂಡಿದವನೂ, ಚಂದ್ರನಿದ್ದರೆ ಧನವಂತನೂ, ಬುಧ ತ್ರಿಂಶಾಂಶೆಯಲ್ಲಿ ರವಿಯಿದ್ದರೆ ಸುಖದಿಂದ ಕೂಡಿದವನೂ, ಚಂದ್ರನಿದ್ದರೆ ವಿದ್ಯಾವಂತನೂ, ಶುಕ್ರ ತ್ರಿಂಶಾಂಶೆಯಲ್ಲಿ ರವಿಯಿದ್ದರೆ ಅಂದವಾದ ಶರೀರವುಳ್ಳವನೂ, ಚಂದ್ರನಿದ್ದರೆ ಎಲ್ಲಾ ಜನರಿಗೂ ಬೇಕಾದವನೂ ಆಗುವನು

॥ ಆಶ್ರಯಯೋಗವೆಂಬ ಹತ್ತೊಂಬತ್ತನೇಯ ಅಧ್ಯಾಯವು ॥

## ಅಧ್ಯಾಯ ೨೦

# ॥ ಪ್ರಕೀರ್ಣಯೋಗಾಧ್ಯಾಯಃ ॥

**ಸ್ವರ್ಕ್ಷ ತುಂಗಮೂಲ ತ್ರಿಕೋಣಗಾಃ ।**
**ಕಂಟಕೇಷು ಯಾವಂತ ಆಶ್ರಿತಾಃ ॥**
**ಸರ್ವ ಏವತೇನ್ಯೋನ್ಯ ಕಾರಕಾಃ ।**
**ಕರ್ಮಗಸ್ತು ತೇಷಾಂ ವಿಶೇಷತಃ ॥೧॥**

ಸ್ವಕ್ಷೇತ್ರದಲ್ಲಾಗಲಿ ಉಚ್ಚದಲ್ಲಾಗಲಿ ಮೂಲತ್ರಿಕೋಣದಲ್ಲಾಗಲಿ ಇರುವ ಒಂದು ಗ್ರಹವು ಲಗ್ನಾತ್ಕೇಂದ್ರದಲ್ಲಿದ್ದು, ಮತ್ತೊಂದು ಗ್ರಹವು ಹಾಗೆಯೇ ಸ್ವಕ್ಷೇತ್ರ ಉಚ್ಚಕ್ಷೇತ್ರ ಮೂಲ ತ್ರಿಕೋಣದಲ್ಲಿದ್ದ ಗ್ರಹವು ಪರಸ್ಪರ ಕೇಂದ್ರವಾಗಿದ್ದರೆ ಪರಸ್ಪರ ಕಾರಕರಾಗುವರು. ಈ ಕಾರಕರಲ್ಲಿ ದಶಮದಲ್ಲಿದ್ದ ಗ್ರಹವು ಬಲವುಳ್ಳಕಾರಕನಾಗುವನು.

**ಕರ್ಕಟೋದಯ ಗತೇ ಯಥೋಡುಪೇ ।**
**ಸ್ವೋಚ್ಚಗಾಃ ಕುಜಯಮಾರ್ಕ ಸೂರಯಃ ॥**
**ಕಾರಕಾನಿ ಗದಿತಾಃ ಪರಸ್ಪರಂ ।**
**ಲಗ್ನಗಸ್ಯ ಸಕಲೋಂಬರಾಂಬುಗಃ ॥ ೨ ॥**

ಕರ್ಕಾಟಕ ಲಗ್ನದಲ್ಲಿ ಸ್ವಕ್ಷೇತ್ರ ಚಂದ್ರನಿದ್ದು ಸಪ್ತಮದಲ್ಲಿ ಕುಜ ಚತುರ್ಥ ಶನಿ ದಶಮದಲ್ಲಿ ರವಿ ಲಗ್ನದಲ್ಲಿ ಗುರು ಉಚ್ಚರಾಗಿದ್ದು ಇವರು ಲಗ್ನದಲ್ಲಿರುವ ಗ್ರಹಗಳಿಗೆ ದಶಮ ಚತುರ್ಥದಲ್ಲಿರುವ ಸಕಲ ಗ್ರಹಗಳು ಕಾರಕ ಸಂಜ್ಞೆಯುಳ್ಳವರಾಗುವರು. ಆ ಗ್ರಹಗಳಿಗೆ ಲಗ್ನದಲ್ಲಿರುವ ಗ್ರಹಗಳು ಕಾರಕರಾಗುವುದಿಲ್ಲ.

<table>
<tr><td>೦</td><td>ರವಿ</td><td>೦</td><td>೦</td></tr>
<tr><td>೦</td><td colspan="2" rowspan="2"></td><td>ಲಗ್ನ<br>ಗುರು<br>ಚಂದ್ರ</td></tr>
<tr><td>ಕುಜ</td><td>೦</td></tr>
<tr><td>೦</td><td>೦</td><td>ಶನಿ</td><td>0</td></tr>
</table>

ಕರ್ಕಾಟಕ ಲಗ್ನದಲ್ಲಿ ಚಂದ್ರನಿದ್ದು ಮಕರ ಕುಜ, ತುಲಾ ಶನಿ, ಮೇಷ ರವಿ, ಕರ್ಕ ಗುರು, ಚಂದ್ರ ಸ್ವಕ್ಷೇತ್ರ, ಸ್ವರಾಶಿ, ಉಚ್ಚಗತ ಗ್ರಹರು ಪರಸ್ಪರ ಕೇಂದ್ರದಲ್ಲಿರುವುದರಿಂದ ಪರಸ್ಪರ ಕಾರಕರಾಗುತ್ತಾರೆ. ಇಲ್ಲಿ ಲಗ್ನಗತ ಗ್ರಹರಿಗೆ ಚತುರ್ಥ ದಶಮದಲ್ಲಿ ಉಚ್ಚಾದಿಗಳಲ್ಲಿರುವ ಗ್ರಹರು ವಿಶೇಷ ಕಾರಕ ರಾಗುತ್ತಾರೆ. ಅಂದರೆ ಗುರು ಚಂದ್ರರಿಗೆ ಶನಿ ರವಿಗಳೂ, ಕುಜನಿಗೆ ರವಿ ಶನಿಗಳೂ, ರವಿಗೆ ಕುಜನೂ, ಶನಿಗೆ ಗುರು ಚಂದ್ರರೂ ವಿಶೇಷ ಕಾರಕರಾಗುತ್ತಾರೆ ಹೀಗಿದ್ದರೆ ಜಾತಕನಿಗೆ ರಾಜ್ಯಾದಿ • ಸುಖದಾಯಕ ಗ್ರಹರೆಂದು ಹೇಳಲ್ಪಟ್ಟಿದೆ. ದಶಾಂತರ್ದಶಾ ಕಾಲದಲ್ಲಿ ಶುಭಪ್ರದರಾಗಿರುತ್ತಾರೆ.

**ಸ್ವತ್ರಿಕೋಣೋಚ್ಚಗೋ ಹೇತುರನ್ಯೋನ್ಯಂ ಯದಿಕರ್ಮಗಃ ||**
**ಸುಹೃತ್ತದ್ಗುಣ ಸಂಪನ್ನಃ ಕಾರಕಶ್ಚಾಪಿ ಸಂಸ್ಮೃತಃ ||೩||**

ಸ್ವಕ್ಷೇತ್ರ ಮೂಲತ್ರಿಕೋಣ ಉಚ್ಚದಲ್ಲಿದ್ದು ಕಾರಕ ಸಂಜ್ಞೆಗೆ ಯೋಗ್ಯವಾದ ಗ್ರಹವು, ಲಗ್ನಾದಿ ಕೇಂದ್ರವಲ್ಲದಿದ್ದರೂ ಮಿತ್ರ, ಅನ್ಯೋನ್ಯ ಮಿತ್ರರಾದ ಗ್ರಹರ ದಶಮದಲ್ಲಿ ಮಿತ್ರತ್ವಾದಿ ಸಮಾನ ಗುಣ ಹೊಂದಿರುವ ಗ್ರಹರಿದ್ದರೆ ಕಾರಕ ಗ್ರಹವೆಂದು ಹೇಳಲ್ಪಟ್ಟಿದೆ.

**ಶುಭಂ ವರ್ಗೋತ್ತಮೇ ಜನ್ಮ ವೇಶಿಸ್ಥಾನೇಚ ಸದ್ಗ್ರಹೇ ।**
**ಅಶೂನ್ಯೇಷು ಚ ಕೇಂದ್ರೇಷು ಕಾರಕಾಖ್ಯ ಗ್ರಹೇಷು ಚ ||೪||**

ಜನ್ಮಕಾಲದಲ್ಲಿ ಲಗ್ನ ಅಥವಾ ಚಂದ್ರನು ವರ್ಗೋತ್ತಮಾಂಶೆಯಲ್ಲಿದ್ದರೂ (ಸೂರ್ಯನಿದ್ದ ರಾಶಿಯ ದ್ವಿತೀಯ) ವೇಶಿಸ್ಥಾನದಲ್ಲಿ ಶುಭಗ್ರಹರಿದ್ದರೂ ಲಗ್ನಾದಿ ನಾಲ್ಕು ಕೇಂದ್ರಗಳಲ್ಲಿ ಗ್ರಹಗಳಿಲ್ಲದೆ ಶೂನ್ಯವಾಗದಿದ್ದರೂ, ಕಾರಕ ಗ್ರಹಗಳು ಸಂಭವಿಸಿದ್ದರೂ ಶುಭಫಲವೆಂದು ತಿಳಿಯತಕ್ಕದ್ದು.

**ಮಧ್ಯೇ ವಯಸಃ ಸುಖಪ್ರದಾಃ ಕೇಂದ್ರಸ್ಥಾ ಗುರುಜನ್ಮಲಗ್ನಪಾಃ ||**
**ಪೃಷ್ಠೋಭಯಕೋ ದಯರ್ಕ್ಷಗಾಸ್ತ್ವಂತೇಂತಃ ಪ್ರಥಮೇಷು ಪಾಕದಾಃ ||೫||**

ಜನ್ಮಕಾಲದಲ್ಲಿ ಗುರುವಿರುವ ರಾಶಿಯ ಅಧಿಪತಿ, ಚಂದ್ರನಿರುವ ರಾಶ್ಯಾಧಿಪತಿ, ಜನ್ಮಲಗ್ನಾಧಿಪತಿ ಇವರಲ್ಲಿ ಯಾರಾದರೊಬ್ಬರು ಕೇಂದ್ರದಲ್ಲಿದ್ದರೆ ಯೌವನ ಕಾಲದಲ್ಲಿ ಹೆಚ್ಚಾದ ಸುಖವುಂಟಾಗುವುದು. ಪೃಷ್ಠೋದಯ, ಉಭಯೋದಯ, ಶೀರ್ಷೋದಯ, ರಾಶಿಗಳಲ್ಲಿರುವ ಗ್ರಹಗಳು ಕ್ರಮವಾಗಿ ದಶಾಂತ್ಯದಲ್ಲಿ, ದಶಾಮಧ್ಯದಲ್ಲಿ, ದಶಾದಿಯಲ್ಲಿ ಫಲಪ್ರದರಾಗುವರೆಂದು ತಿಳಿಯತಕ್ಕದ್ದು. (ಆಯಾಯ ಮಹರ್ದಶಾ ಕಾಲವನ್ನು ೩ ಭಾಗ ಮಾಡಿ ಪೂರ್ವೋಕ್ತ ಫಲವನ್ನು ಹೇಳತಕ್ಕದ್ದು).

**ದಿನಕರ ರುಧಿರೌ ಪ್ರವೇಶಕಾಲೇ ।**
**ಗುರುಭೃಗುಜೌ ಭವನಸ್ಯ ಮಧ್ಯಯಾತೌ ||**
**ರವಿಸುತ ಶಶಿನೌ ವಿನಿರ್ಗಮಸ್ಥೌ ।**
**ಶಶಿತನಯಃ ಫಲದಸ್ತು ಸರ್ವಕಾಲಮ್ ||೬||**

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಪ್ರಕೀರ್ಣಯೋಗ ನಿರೂಪಣಂ ನಾಮ ವಿಂಶೋಧ್ಯಾಯಃ ॥

ರವಿ ಕುಜರು ರಾಶಿ ಪ್ರವೇಶ ಕಾಲದಲ್ಲಿಯೂ ಗುರು ಶುಕ್ರರು ರಾಶಿಯ ಮಧ್ಯ ಕಾಲದಲ್ಲಿಯೂ ಶನಿ ಚಂದ್ರರು ರಾಶಿಯ ಅಂತ್ಯ ಕಾಲದಲ್ಲಿಯೂ ಬುಧನು ಸರ್ವಕಾಲದಲ್ಲಿಯೂ ಗೋಚರ ರೀತ್ಯಾ ಗ್ರಹಗಳು ಫಲಪ್ರದರಾಗುವರೆಂದು ತಿಳಿಯತಕ್ಕದ್ದು

॥ ಪ್ರಕೀರ್ಣಯೋಗವೆಂಬ ಇಪ್ಪತ್ತನೇಯ ಅಧ್ಯಾಯವು ॥

## ।। ಅನಿಷ್ಟಯೋಗಾಧ್ಯಾಯಃ ।।

ಲಗ್ನಾತ್ಪುತ್ರ ಕಳತ್ರಭೇ ಶುಭಪತಿ ಪ್ರಾಪ್ತೇಥವಾ ಲೋಕಿತೇ ।
ಚಂದ್ರಾದ್ವಾಯದಿ ಸಂಪದಸ್ತಿ ಹಿ ತಯೋರ್ಜ್ಞೇಯೋನ್ಯಥಾ ಸಂಭವಃ ।।
ಪಾಥೋನೋದಯಗೇ ರವೌ ರವಿಸುತೋ ಮೀನಸ್ಥಿತೋ ದಾರಹಾ ।
ಪುತ್ರ ಸ್ಥಾನಗತಶ್ಚ ಪುತ್ರ ಮರಣಂ ಪುತ್ರೋವನೇರ್ಯಚ್ಛತಿ ।।೧।।

ಲಗ್ನದಿಂದ ಪಂಚಮ ಸಪ್ತಮ ಭಾವಗಳಲ್ಲಿ ಶುಭಗ್ರಹರ ಮತ್ತು ಆಯಾಯ ಭಾವಾಧಿಪತಿಗಳ ಯೋಗ ಅಥವಾ ದೃಷ್ಟಿಯಿದ್ದರೆ ಆಯಾಯ ಭಾವಗಳ ಸಂಪತ್ತಿಯನ್ನು ಹೇಳಬೇಕು ಹೀಗಿಲ್ಲದೆ ವ್ಯತ್ಯಾಸವಾಗಿದ್ದಲ್ಲಿ ಆ ಭಾವಕ್ಕೆ ಹಾನಿಯನ್ನು ಹೇಳಬೇಕು. ಚಂದ್ರ ಲಗ್ನದಿಂದಲಾದರೂ ಯೋಚಿಸಿ ಹೀಗೆಯೇ ಫಲವನ್ನು ಹೇಳಬೇಕು. ಕನ್ಯೆಯು ಲಗ್ನವಾಗಿ ಅಲ್ಲಿ ಸೂರ್ಯನಿದ್ದು ಸಪ್ತಮದಲ್ಲಿ ಶನಿಯಿದ್ದರೆ ಭಾರ್ಯಾರಿಷ್ಟವನ್ನು ಹೇಳಬೇಕು. ಕುಜನು ಪಂಚಮದಲ್ಲಿದ್ದರೆ ಪುತ್ರಾರಿಷ್ಟವು ಸಂಭವಿಸುವುದು.

ಉಗ್ರಗ್ರಹೈಃ ಸಿತಚತುರಸ್ರ ಸಂಸ್ಥಿತೈ ।।
ರ್ಮಧ್ಯಸ್ಥಿತೇ ಭೃಗುತನಯೇ ಥವೋಗ್ರಯೋಃ ।।
ಸೌಮ್ಯಗ್ರಹೈರ ಸಹಿತ ಸನ್ನಿರೀಕ್ಷಿತೇ ।
ಜಾಯಾ ವಧೋದಹನ ನಿಪಾತ ಪಾಶಜಃ ।।೨।।

ಶುಕ್ರನಿಂದ ಚತುರ್ಥ ಅಷ್ಟಮದಲ್ಲಿ ರವಿ ಕುಜ ಶನಿಗಳಿದ್ದರೆ ಅಗ್ನಿಯಿಂದ ಭಾರ್ಯಾರಿಷ್ಟವು ಸಂಭವಿಸುವುದು. ಅಥವಾ ಪಾಪಗ್ರಹರ ಮಧ್ಯದಲ್ಲಿ ಶುಕ್ರನಿದ್ದರೆ ಪತನದಿಂದ ಭಾರ್ಯಾರಿಷ್ಟ ವಾಗುವುದು. ಶುಕ್ರನಿಗೆ ಶುಭಗ್ರಹರ ಯೋಗದೃಷ್ಟಿಗಳಿಲ್ಲದೆ ಪಾಪಗ್ರಹರ ಮಧ್ಯದಲ್ಲಿದ್ದರೆ ಬಂಧನ ಮೂಲಕ ಬಾರ್ಯಾರಿಷ್ಟವನ್ನು ಹೇಳತಕ್ಕದ್ದು.

ಲಗ್ನಾದ್ವ್ಯಯಾರಿ ಗತಯೋಃ ಶಶಿತಿಗ್ಮರಶ್ಮ್ಯೋಃ ।
ಪತ್ನ್ಯಾಸಹೈಕ ನಯನಸ್ಯ ವದಂತಿ ಜನ್ಮ ।।
ದ್ಯೂನಸ್ಥಯೋ ರ್ನವಮಪಂಚಮ ಸಂಸ್ಥಯೋರ್ವಾ ।
ಶುಕ್ರಾರ್ಕಯೋ ರ್ವಿಕಲದಾರ ಮುಶಂತಿ ಜಾತಮ್ ।।೩।।

ಲಗ್ನದಿಂದ ವ್ಯಯ, ಷಷ್ಠ, ಸ್ಥಾನಗಳಲ್ಲಿ ಚಂದ್ರ ಸೂರ್ಯರಿದ್ದರೆ ಪತ್ನಿ ಸಹಿತವಾಗಿ ಒಂದು ಕಣ್ಣುಳ್ಳವರಾಗುವರು. ಶುಕ್ರ ಸೂರ್ಯರು ಸಪ್ತಮ, ನವಮ, ಪಂಚಮ ಸ್ಥಾನಗಳಲ್ಲಿದ್ದರೆ ಅಂಗಹೀನಳಾದ ಪತ್ನಿಯಾಗುವಳೆಂದು ತಿಳಿಯತಕ್ಕದ್ದು.

ಕೋಣೋದಯೇ ಭೃಗು ತನಯೇಸ್ತ ಚಕ್ರಸಂಧೌ ।
ವಂಧ್ಯಾಪತಿರ್ಯದಿನ ಸುತರ್ಕ್ಷಮಿಷ್ಟ ಯುಕ್ತಮ್ ॥
ಪಾಪಗ್ರಹೈರ್ವ್ಯಯ ಮದಲಗ್ನ ರಾಶಿಸಂಸ್ಥೈಃ ।
ಕ್ಷೀಣೇ ಶಶಿನ್ಯಸುತ ಕಳತ್ರ ಜನ್ಮಧೀಸ್ಥೇ ॥೪॥

ಲಗ್ನದಲ್ಲಿ ಶನಿಯೂ ಸಪ್ತಮ ಸ್ಥಾನದಲ್ಲಿ ಶುಕ್ರನೂ ಚಕ್ರಸಂಧಿಗಳಾದ ಕರ್ಕ ರಾಶಿಯಲ್ಲಿ ಅಂತ್ಯ ನವಾಂಶ, ವೃಶ್ಚಿಕ ರಾಶಿಯ ಅಂತ್ಯ ನವಾಂಶ, ಮೀನರಾಶಿಯ ಅಂತ್ಯ ನವಾಂಶದಲ್ಲಿ ಪಂಚಮ ಭಾವವಾಗಿ ಶುಭಗ್ರಹರ ಯೋಗದೃಷ್ಟಿಗಳಿಲ್ಲದಿದ್ದರೆ ವಂಧ್ಯಾಪತಿಯೋಗ (ಬಂಜೆಯ ಗಂಡ) ವಾಗುವುದು. (ಇಲ್ಲಿ ಎರಡನೆಯ ಹೆಂಡತಿಯಲ್ಲಿ ಪುತ್ರಸಂತಾನವಾಗುವುದೆಂದು ಹೇಳುತ್ತಾರೆ). ಲಗ್ನದಿಂದ ದ್ವಾದಶ ಸಪ್ತಮ ಲಗ್ನಗಳಲ್ಲಿ ಪಾಪಗ್ರಹರಿದ್ದೂ ಪಂಚಮದಲ್ಲಿ ಕ್ಷೀಣಚಂದ್ರನಿದ್ದರೆ ಪುತ್ರ ಕಳತ್ರಹೀನ (ಹೆಂಡತಿ ಮಕ್ಕಳು ಇಲ್ಲದೆ) ಯೋಗವಾಗುವುದು.

ಅಸಿತ ಕುಜಯೋರ್ವರ್ಗೇಸ್ತಸ್ಥೇ ಸಿತೇ ತದವೇಕ್ಷಿತೇ ।
ಪರಯುವತಿ ಗಸ್ತೌ ಚೇತ್ಸೇಂದೂ ಸ್ತ್ರಿಯಾ ಸಹ ಪುಂಶ್ಚಲಃ ॥
ಭೃಗುಜ ಶಶಿನೋರಸ್ತೇ ಭಾರ್ಯೋಽನರೋ ವಿಸುತೋಽಪಿವಾ ।
ಪರಿಣತತನೂ ನೃಸ್ತ್ರ್ಯೋರ್ದೃಷ್ಟೌ ಶುಭೈಃ ಪ್ರಮದಾ ಪತಿಃ ॥೫॥

ಲಗ್ನದಿಂದ ಸಪ್ತಮದಲ್ಲಿ ಶುಕ್ರನು ಶನಿ ಕುಜರ ಷಡ್ವರ್ಗದಲ್ಲಿದ್ದು ಶನಿ ಅಥವಾ ಕುಜನಿಂದ ನೋಡ ಲ್ಪಟ್ಟರೆ ಪರರ ಸ್ತ್ರೀಯರಲ್ಲಿ ಆಸಕ್ತನಾಗುವನು. ಮೇಲೆ ಹೇಳಿದಂತೆ ಯೋಗವಿದ್ದು ಆ ಶನಿ ಕುಜರ ಸಂಗಡ ಚಂದ್ರನಿದ್ದರೆ ಹೆಂಡತಿ ಸಹಿತ ವ್ಯಭಿಚಾರಿಯಾಗುವನು. ಅಂದರೆ ಗಂಡನು ಪರಸ್ತ್ರೀಸಕ್ತ ನಾಗುವನು, ಹೆಂಡತಿ ಪರಪುರುಷಗಾಮಿಯಾಗುವಳು. ಒಂದೇ ರಾಶಿಯಲ್ಲಿ ಶುಕ್ರ ಚಂದ್ರರಿದ್ದು ಅವರ ಸಪ್ತಮದಲ್ಲಿ ಶನಿ ಅಂಗಾರಕರಿದ್ದರೆ ಹೆಂಡತಿ ಇಲ್ಲದವನೂ ಪುತ್ರಹೀನನೂ ಆಗುವನು. ಒಂದು ಪುರುಷ ಗ್ರಹವು ಒಂದು ಸ್ತ್ರೀಗ್ರಹವು ಕೂಡಿ ಒಂದೇ ರಾಶಿಯಲ್ಲಿದ್ದು ಅವರ ಸಪ್ತಮದಲ್ಲಿ ಶನಿ ಕುಜರು ಶುಭದೃಷ್ಟಿಯುಕ್ತರಾಗಿದ್ದರೆ ಯೌವನ ಕಾಲದಲ್ಲಿ ವಿವಾಹವಾಗದೆ ವಾರ್ಧಿಕ್ಯಾವಸ್ಥೆ (ವೃದ್ಧ)ಯಲ್ಲಿ ಯೌವನವತಿಯಾದ ಹುಡುಗಿಯನ್ನು ವಿವಾಹ ಮಾಡಿಕೊಂಡು ಅವಳಿಂದ ಉಪಚರಿಸಿಕೊಳ್ಳುವನು. (ಇಲ್ಲಿ ಭಟ್ಟೋತ್ಪಲರು ಸಪ್ತಮದಲ್ಲಿರುವ ಶನಿ ಕುಜರಿಗೆ ಶುಭದೃಷ್ಟಿಯಿಲ್ಲದೆ ಪಾಪಗ್ರಹ ದೃಷ್ಟಿಯಾಗಿ ದ್ದರೆ ವಾರ್ಧಕ್ಯದಲ್ಲಿ ಯೌವನವತಿಯನ್ನು ಮದುವೆ ಯಾಗುತ್ತಾನೆಂತ ವ್ಯಾಖ್ಯಾನದಲ್ಲಿ ಬರೆದಿರುತ್ತಾರೆ).

ವಂಶಚ್ಛೇತ್ತಾ ಖಮದಸುಖಗೈಶ್ಚಂದ್ರ ದೈತ್ಯೇಜ್ಯ ಪಾಪೈಃ ।
ಶಿಲ್ಪೀತ್ರ್ಯಂಶೇ ಶಶಿಸುತಯುತೇ ಕೇಂದ್ರ ಸಂಸ್ಥಾರ್ಕಿ ದೃಷ್ಟೇ ॥
ದಾಸ್ಯಾಂ ಜಾತೋಽದಿತಿ ಸುತಗುರೌ ರಿಃಫಗೇ ಸೌರಭಾಗೇ ।
ನೀಚೋಽರ್ಕೇಂದ್ವೋರ್ಮದನಗ ತಯೋರ್ದೃಷ್ಟಯೋಃ ಸೂರ್ಯಜೇನ ॥೬॥

ಜನ್ಮಲಗ್ನದಿಂದ ದಶಮದಲ್ಲಿ ಚಂದ್ರ ಸಪ್ತಮದಲ್ಲಿ ಶುಕ್ರ ಚತುರ್ಥದಲ್ಲಿ ರವಿ ಕುಜ ಶನಿಗಳಲ್ಲಿ ಯಾವುದಾದರೊಂದು ಪಾಪಗ್ರಹವಿದ್ದರೆ ಸಂತತಿ ಇಲ್ಲದವನಾಗುವನು (ಅಂದರೆ ಆ ಸಂತತಿಗೆ

ಅವನೇ ಅಂತ್ಯದವನಾಗುವನು) ಜನ್ಮ ಕಾಲದಲ್ಲಿ ಬುಧನು ಯಾವ ದ್ರೇಕ್ಕಾಣದಲ್ಲಿರುವನೋ ಆ ದ್ರೇಕ್ಕಾಣ ಯಾವ ರಾಶಿಗೆ ಸಂಬಂಧವಾದದ್ದೋ ಆ ರಾಶಿಯನ್ನು ಲಗ್ನಕ್ಕೆ ಕೇಂದ್ರದಲ್ಲಿರುವ ಶನಿಯು ನೋಡಿದರೆ ಶಿಲ್ಪಿಯಾಗುವನು. ಲಗ್ನದಿಂದ ವ್ಯಯಭಾವದಲ್ಲಿ ಶುಕ್ರನು ಶನಿ ನವಾಂಶ ದಲ್ಲಿದ್ದರೆ ದಾಸಿಯಲ್ಲಿ ಹುಟ್ಟಿದವನಾಗುವನು. ಲಗ್ನದಿಂದ ಸಪ್ತಮದಲ್ಲಿ ರವಿ ಚಂದ್ರರಿದ್ದು ಶನಿಯಿಂದ ನೋಡಲ್ಪಟ್ಟರೆ ನೀಚಕೃತ್ಯಗಳನ್ನು ಮಾಡುವನು

**ಪಾಪಾಲೋಕಿತಯೋಃ ಸಿತಾವನಿಜಯೋ ರಸ್ತಸ್ಥಯೋರ್ವಾಧ್ಯರುಕ್ ।**
**ಚಂದ್ರೇಕರ್ಕಟ ವೃಶ್ಚಿಕಾಂಶಕಗತೇ ಪಾಪ್ಯೆರ್ಯುತೇ ಗುಹ್ಯರುಕ್ ॥**
**ಶ್ವಿತ್ರೀ ರಿಃಪಧನಸ್ಥಯೋ ರಶುಭಯೋ ಶ್ಚಂದ್ರೋದಯೇಸ್ತೇರವೌ ।**
**ಚಂದ್ರೇ ಖೇವನಿಜೇಸ್ತಗೇ ಚ ವಿಕಲೋಯದ್ಯರ್ಕಜೋವೇಶಿಗಃ ॥೭॥**

ಲಗ್ನದಿಂದ ಸಪ್ತಮದಲ್ಲಿ ಶುಕ್ರ ಅಂಗಾರಕರಿದ್ದು ಪಾಪಗ್ರಹರಿಂದ ನೋಡಲ್ಪಟ್ಟರೆ ಅಂತರ್ಗಳ ರೋಗವುಳ್ಳವನಾಗುವನು. ಚಂದ್ರನು ಕರ್ಕಾಟಕ ಅಥವಾ ವೃಶ್ಚಿಕ ನವಾಂಶೆಯಲ್ಲಿದ್ದು, ಪಾಪ ಗ್ರಹಗಳಿಂದ ಕೂಡಿದರೆ ಗುಹ್ಯರೋಗವುಳ್ಳವನಾಗುವನು ಲಗ್ನದಿಂದ ದ್ವಾದಶ, ದ್ವಿತೀಯದಲ್ಲಿ ಪಾಪಗ್ರಹ (ಶನಿ ಕುಜ)ರಿದ್ದು ಲಗ್ನದಲ್ಲಿ ಚಂದ್ರನೂ ಸಪ್ತಮದಲ್ಲಿ ರವಿಯೂ ಇದ್ದರೆ ಶ್ವೇತ ಕುಷ್ಠ ವ್ಯಾಧಿಯುಳ್ಳವನಾಗುವನು. ಲಗ್ನದಿಂದ ದಶಮದಲ್ಲಿ ಚಂದ್ರನೂ ಸಪ್ತಮದಲ್ಲಿ ಕುಜನೂ, (ರವಿಯ ದ್ವಿತೀಯ) ವೇಶಿ ಸ್ಥಾನದಲ್ಲಿ ಶನಿಯೂ ಇದ್ದರೆ ಅಂಗಹೀನನೂ ಆಗುವನು

**ಅಂತಃ ಶಶಿನ್ಯಶುಭಯೋರ್ಮ್ರ್ಗಗೇ ಪತಂಗೇ ।**
**ಶ್ವಾಸಕ್ಷಯ ಪ್ಲಿಹಕವಿದ್ರಧಿ ಗುಲ್ಮಭಾಜಃ ॥**
**ಶೋಷೀ ಪರಸ್ಪರ ಗೃಹಾಂಶಗಯೋ ರವೀಂದ್ವೋಃ ।**
**ಕ್ಷೇತ್ರೇಥವಾ ಯುಗಪದೇಕಗಯೋಃ ಕೃಶೋ ವಾ ॥೮॥**

ಚಂದ್ರನು ಶನಿ ಕುಜರ ಮಧ್ಯದಲ್ಲಿದ್ದು, ರವಿಯು ಮಕರದಲ್ಲಿದ್ದರೆ ಕೆಮ್ಮು, ಉಬ್ಬಸ, ಕ್ಷಯ, ಹೊಟ್ಟೆ ಯಲ್ಲಿ ಗಡ್ಡೆಯಾಗುವ ರೋಗ ಅಥವಾ ಗುಲ್ಮವ್ಯಾಧಿ, ಇವುಗಳಲ್ಲಿ ಯಾವುದಾದರೂ ಒಂದು ರೋಗವುಳ್ಳವನಾಗುವನು. ಕರ್ಕಾಟಕದಲ್ಲಿ ರವಿಯೂ ಸಿಂಹದಲ್ಲಿ ಚಂದ್ರನೂ ಅಥವಾ ಯಾವ ರಾಶಿಯಲ್ಲಾದರೂ ಚಂದ್ರ ನವಾಂಶೆಯಲ್ಲಿ ಸೂರ್ಯನು ರವಿಯ ನವಾಂಶೆಯಲ್ಲಿ ಚಂದ್ರನೂ ಪರಸ್ಪ ರಾಂಶೆಯಲ್ಲಿದ್ದರೆ ಕ್ಷಯರೋಗಿಯಾಗುವನು. ಸಿಂಹದಲ್ಲಿಯಾಗಲಿ ಕರ್ಕಾಟಕದಲ್ಲಿಯಾಗಲಿ ಸೂರ್ಯ ಚಂದ್ರರು ಒಂದೇ ರಾಶಿಯಲ್ಲಿದ್ದರೆ, ಕ್ಷಯರೋಗ ಅಥವಾ ಕೃಶವಾದ ಶರೀರವುಳ್ಳವನಾಗುವನು.

**ಚಂದ್ರೇಶ್ವಿ ಮಧ್ಯಝುಷಕರ್ಕಿ ಮೃಗಾಜ ಭಾಗೇ ।**
**ಕುಷ್ಠೀ ಸಮಂದ ರುಧಿರೇತದ ವೇಕ್ಷಿತೇ ವಾ ॥**
**ಯಾತ್ಯೆ ಸ್ತ್ರಿಕೋಣ ಮಳಿಕರ್ಕಿ ವೃಷ್ಯೆರ್ಮ್ರ್ಗೇ ಚ ।**
**ಕುಷ್ಠೀಚ ಪಾಪಸಹಿತ್ಯೆ ರವಲೋಕಿತ್ಯೆರ್ವಾ ॥೯॥**

ಚಂದ್ರನು ಧನುರಾಶಿಯ ಮಧ್ಯ ನವಾಂಶವಾದ ಸಿಂಹ ನವಾಂಶೆಯಲ್ಲಿದ್ದರೂ ಅಥವಾ ಯಾವ ರಾಶಿಯಲ್ಲಾದರೂ ಚಂದ್ರನು ಮೇಷ, ಕರ್ಕ, ಮಕರ, ಮೀನ ಈ ನವಾಂಶೆಯಲ್ಲಿದ್ದು ಶನಿ ಕುಜರ ಯೋಗವಿದ್ದರೂ ದೃಷ್ಟಿಯಿದ್ದರೂ ಕುಷ್ಟರೋಗಿಯಾಗುವನು (ಚಂದ್ರನ ಮೇಲೆ ಶುಭಗ್ರಹರ ದೃಷ್ಟಿಯಿದ್ದರೆ ದದ್ದು ಇತ್ಯಾದಿ ಚರ್ಮ ರೋಗವಾಗುವುದು). ಹಾಗೆಯೇ ನವಮ ಅಥವಾ ಪಂಚಮ ರಾಶಿಗಳು ವೃಶ್ಚಿಕ, ಕರ್ಕ, ವೃಷಭ, ಮಕರ ರಾಶಿಗಳಲ್ಲಿ ಯಾವುದಾದರೊಂದು ರಾಶಿ ಯಾಗಿದ್ದು ಪಾಪಗ್ರಹರಿಂದ ಕೂಡಿದರೂ ಯಾ ನೋಡಲ್ಪಟ್ಟರೂ ಕುಷ್ಟರೋಗಿಯಾಗುವನು.

ನಿಧನಾರಿಧನವ್ಯಯ ಸ್ಥಿತಾ ।
ರವಿಚಂದ್ರಾರಯಮಾ ಯಥಾ ತಥಾ ॥
ಬಲವದ್ಗ್ರಹದೋಷಕಾರಣೈ ।
ರ್ಮನುಜಾನಾಂ ಜನಯಂತ್ಯನೇತ್ರತಾಮ್ ॥೧೦॥

ಲಗ್ನದಿಂದ ಅಷ್ಟಮ ಷಷ್ಠ ದ್ವಿತೀಯ ದ್ವಾದಶ ರಾಶಿಗಳಲ್ಲಿ (ಯಾವ ಭಾವದಲ್ಲಿ ಯಾರಿದ್ದರೂ ಆಗುತ್ತದೆ.) ಕ್ರಮ ನಿಯಮವಿಲ್ಲದೆ ರವಿ, ಚಂದ್ರ, ಕುಜ, ಶನಿಗಳಿದ್ದರೆ ಅವರಲ್ಲಿ ಬಲವದ್ಗ್ರಹಕ್ಕೆ ಹೇಳಿದ ವಾತ ಪಿತ್ತ ಕಫಾದಿ ದೋಷಗಳಿಂದ ಕಣ್ಣು ಕಾಣದವನಾಗುವನು.

ನವಮಾಯ ತೃತೀಯ ಧೀಯುತಾ ।
ನ ಚ ಸೌಮ್ಯೈ ರಶುಭಾ ನಿರೀಕ್ಷಿತಾಃ ॥
ನಿಯಾಮಾಚ್ಛ್ರವಣೋಪಘಾತದಾ ।
ರದವೈ ಕೃತ್ಯಕರಾಶ್ಚ ಸಪ್ತಮೇ ॥೧೧॥

ಲಗ್ನದಿಂದ ನವಮ ಏಕಾದಶ ತೃತೀಯ ಪಂಚಮ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದು ಶುಭಗ್ರಹರ ದೃಷ್ಟಿಯಿಲ್ಲದಿದ್ದರೆ ಕಿವಿಯ ರೋಗದಿಂದ ಕೇಳದವನಾಗುವನು. ಮತ್ತು ಸಪ್ತಮದಲ್ಲಿ ಪಾಪಗ್ರಹ ರಿದ್ದು ಶುಭದೃಷ್ಟಿಯಿಲ್ಲದಿದ್ದರೆ ದಂತರೋಗವುಳ್ಳವನಾಗುವನು.

ಉದಯತ್ಯುಡುಪೇ ಸುರಾಸ್ಯಗೇ ।
ಸ ಪಿಶಾಚಃ ಶುಭಯೋ ಸ್ತ್ರಿಕೋಣಯೋಃ ॥
ಸೋಪಪ್ಲವಮಂಡಲೇ ರವಾ ।
ವುದಯಸ್ಥೇ ನಯನಾಪವರ್ಜಿತಃ ॥೧೨॥

ಜನ್ಮಲಗ್ನದಲ್ಲಿ ಚಂದ್ರನು ರಾಹುಗ್ರಸ್ತನಾಗಿದ್ದು ನವಮ ಪಂಚಮ ಸ್ಥಾನಗಳಲ್ಲಿ ಪಾಪಗ್ರಹ (ಶನಿ ಕುಜ)ಗಳಿದ್ದರೆ ಪಿಶಾಚಗ್ರಸ್ತನಾಗುವನು. ಜನ್ಮಲಗ್ನದಲ್ಲಿ ಸೂರ್ಯನು ರಾಹುಗ್ರಸ್ತನಾಗಿದ್ದು ಪಂಚಮ ನವಮದಲ್ಲಿ ಶನಿ ಕುಜರಿದ್ದರೆ ಕಣ್ಣಿಲ್ಲದವನಾಗುವನು.

**ಸಂಸ್ಪೃಷ್ಟಃ ಪವನೇನ ಮಂದಗಯುತೇ ದ್ಯೂನೇ ವಿಲಗ್ನೇ ಗುರೌ ।**
**ಸೋನ್ಮಾದೋಽವ ನಿಜೇಕ್ಷಿತೇಸ್ತ ಭವನೇ ಜೀವೇ ವಿಲಗ್ನಾಶ್ರಿತೇ ॥**
**ತದ್ವತ್ಸೂರ್ಯ ಸುತೋದಯೇ ವನಿಸುತೇ ಧರ್ಮಾತ್ಮ ಜದ್ಯೂನಗೇ ।**
**ಜಾತೋವಾ ಸಸಹಸ್ರ ರಶ್ಮಿತನಯೇಕ್ಷಣೇ ವ್ಯಯೇ ಶೀತಗೌ ॥೧೩॥**

ಜನ್ಮಲಗ್ನದಲ್ಲಿ ಗುರುವಿದ್ದು ಸಪ್ತಮ ಸ್ಥಾನದಲ್ಲಿ ಶನಿಯಿದ್ದರೆ ವಾತರೋಗಿಯಾಗುವನು. ಲಗ್ನದಲ್ಲಿ ಗುರುವಿದ್ದು ಸಪ್ತಮದಲ್ಲಿ ಕುಜನಿದ್ದರೆ ಉನ್ಮಾದರೋಗಿಯಾಗುವನು. ಲಗ್ನದಲ್ಲಿ ಶನಿಯಿದ್ದು ಪಂಚಮ, ಸಪ್ತಮ, ನವಮ ಈ ಸ್ಥಾನಗಳಲ್ಲಿ ಎಲ್ಲಿಯಾದರೂ ಕುಜನಿದ್ದರೆ ಉನ್ಮಾದ ರೋಗಿಯಾಗುವನು. ಕ್ಷೀಣ ಚಂದ್ರನು ಶನಿಯಿಂದ ಕೂಡಿ ವ್ಯಯಭಾವದಲ್ಲಿದ್ದರೆ ಉನ್ಮಾದ ರೋಗಿಯಾಗುವನು. (ಚಿತ್ತಭ್ರಮಣೆಯಿಂದ ಉನ್ಮತ್ತನಾಗುವನು )

**ರಾಶ್ಯಂಶ ಪೋಷ್ಣಕರ ಶೀತಕರಾಮರೇಜ್ಯೈ ।**
**ರ್ನೀಚಾಧಿ ಪಾಂಶಕ ಗತೈರರಿ ಭಾಗಗೈರ್ವಾ ॥**
**ಏಭ್ಯೋಽಲ್ಪ ಮಧ್ಯ ಬಹುಭಿಃ ಕ್ರಮಶಃ ಪ್ರಸೂತಾ ।**
**ಜ್ಞೇಯಾಃ ಸ್ಮರಭ್ಯುಪಗಮ ಕ್ರಯಗರ್ಭದಾಸಾಃ ॥೧೪॥**

ಚಂದ್ರ ನವಾಂಶದ ರಾಶ್ಯಾಧಿಪತಿ ಮತ್ತು ರವಿ, ಚಂದ್ರ, ಗುರು ಈ ನಾಲ್ಕು ಗ್ರಹಗಳು ಅವರವರ ನೀಚ ರಾಶ್ಯಾಧಿಪತಿಗಳ ನವಾಂಶದಲ್ಲಾಗಲೀ ಶತ್ರುನವಾಂಶದಲ್ಲಾಗಲಿ ಇದ್ದರೆ ದಾಸತ್ವವನ್ನು ಮಾಡುವರು. ಒಂದು ಗ್ರಹ ನೀಚ ಅಥವಾ ಶತ್ರು ನವಾಂಶದಲ್ಲಿದ್ದರೆ ಜೀವನಕ್ಕಾಗಿ ದಾಸ್ಯತ್ವ ಮಾಡುವನು. ಎರಡು ಗ್ರಹರಿದ್ದರೆ ದೇಹವನ್ನು ಮಾರಿಕೊಳ್ಳುವನು ಮೂರು, ನಾಲ್ಕು ಗ್ರಹರಿದ್ದರೆ ದಾಸೀಪುತ್ರನಾಗುವನು.

**ವಿಕೃತ ದಶನಃ ಪಾಪೈರ್ದೃಷ್ಟೇ ವೃಷಾಜ ಹಯೋದಯೇ ।**
**ಖಲತಿರ ಶುಭಕ್ಷೇತ್ರೇ ಲಗ್ನೇ ಹಯೇ ವೃಷಭೇ ಪಿವಾ ॥**
**ನವಮ ಸುತಗೇ ಪಾಪೈರ್ದೃಷ್ಟೇ ರವಾವ ದೃಢೇಕ್ಷಣೋ ।**
**ದಿನಕರ ಸುತೇ ನೈಕವ್ಯಾಧಿಃ ಕುಜೇ ವಿಕಲಃ ಪುಮಾನ್ ॥೧೫॥**

ಜನ್ಮಕಾಲದಲ್ಲಿ ವೃಷಭ, ಮೇಷ, ಧನು ಈ ಮೂರು ರಾಶಿಗಳಲ್ಲಿ ಯಾವುದಾದರೊಂದು ಲಗ್ನ ವಾಗಿದ್ದು ಪಾಪಗ್ರಹರ ದೃಷ್ಟಿಯಿದ್ದರೆ ವಿಕಾರವಾದ ಹಲ್ಲುಗಳುಳ್ಳವನಾಗುವನು. ಜನ್ಮಲಗ್ನ ವೃಷಭ, ಧನು ಅಥವಾ ಪಾಪಗ್ರಹರ ರಾಶಿಗಳಾದ ಮೇಷ, ಸಿಂಹ, ವೃಶ್ಚಿಕ, ಮಕರ, ಕುಂಭ ರಾಶಿಗಳಲ್ಲಿ ಯಾವುದಾದರೊಂದು ಲಗ್ನವಾಗಿ ಪಾಪಗ್ರಹರ ದೃಷ್ಟಿಯಿದ್ದರೆ ಖಲ್ವಾಟನಾಗುವನು. (ಈ ಯೋಗ ದಿಂದ ತಲೆಯ ಹಿಂಭಾಗದಲ್ಲಿ ಅರ್ಧಚಂದ್ರಾಕೃತಿಯಾಗಿ ಕೂದಲು ಮಾತ್ರ ಇದ್ದು, ಉಳಿದ ಭಾಗವೆಲ್ಲವೂ ಉದುರಿ ಹೋಗುವುದು. ಇದು ದೊಡ್ಡ ಮನುಷ್ಯರಿಗೆ ಬರುತ್ತದೆಂದು ಹೇಳುವರು ಆದರೆ ಇದು ಅನಿಷ್ಟಯೋಗ) ಲಗ್ನದಿಂದ ನವಮ ಪಂಚಮದಲ್ಲಿ ಸೂರ್ಯನಿಗೆ ಪಾಪಗ್ರಹ

ದೃಷ್ಟಿಯಾಗಿದ್ದರೆ, ದೃಷ್ಟಿಮಾಂದ್ಯ ಅಥವಾ ಚಂಚಲವಾದ ಕಣ್ಣುಗಳುಳ್ಳವನಾಗುವನು. ಲಗ್ನದಿಂದ ಪಂಚಮ ಅಥವಾ ನವಮದಲ್ಲಿ ಶನಿಯಿದ್ದು ಪಾಪಗ್ರಹರ ದೃಷ್ಟಿಯಿದ್ದರೆ ನಾನಾ ವಿಧ ರೋಗವುಳ್ಳವನಾಗುವನು. ಲಗ್ನದಿಂದ ಪಂಚಮ ಅಥವಾ ನವಮದಲ್ಲಿ ಕುಜನಿದ್ದು ಪಾಪಗ್ರಹರ ದೃಷ್ಟಿಯಿದ್ದರೆ ಅಂಗಹೀನನಾಗುವನು.

ವ್ಯಯ ಸುತಧನ ಧರ್ಮಗ್ಯೈರ ಸೌಮ್ಯೈ ।
ರ್ಭವನ ಸಮಾನ ನಿಬಂಧನಂ ವಿಕಲ್ಪ್ಯಮ್ ॥
ಭುಜಗ ನಿಗಳ ಪಾಶಭೃದ್ದೃ ಕಾಣ್ಯೈ ।
ರ್ಬಲವದ ಸೌಮ್ಯ ನಿರೀಕ್ಷಿತೈಶ್ಚ ತದ್ವತ್ ॥೧೭॥

ಜನ್ಮಕಾಲದಲ್ಲಿ ದ್ವಿತೀಯ, ದ್ವಾದಶ, ಪಂಚಮ, ನವಮ ಈ ಸ್ಥಾನಗಳಲ್ಲಿ ಪಾಪಗ್ರಹರಿದ್ದರೆ ಲಗ್ನರಾಶಿ ಸ್ವರೂಪಕ್ಕೆ ಸಮಾನವಾದ ಬಂಧನವು ಪ್ರಾಪ್ತಿಯಾಗುವುದು. ಜನ್ಮಕಾಲದಲ್ಲಿ ಭುಜಗ ನಿಗಳ ಪಾಶ ದ್ರೇಕ್ಕಾಣಗಳು ಲಗ್ನಕ್ಕೆ ಬಂದು ಬಲಯುಕ್ತರಾದ ಪಾಪಗ್ರಹರ ದೃಷ್ಟಿಯಿದ್ದರೆ ದ್ರೇಕ್ಕಾಣ ಸ್ವರೂಪಕ್ಕೆ ಸರಿಯಾದ ಬಂಧನವು ಪ್ರಾಪ್ತಿಯಾಗುವುದು.

ಪರುಷ ವಚನೋಽಪಸ್ಮಾರಾರ್ತಃ ಕ್ಷಯೀಚ ನಿಶಾಪತೌ ।
ಸರವಿತನಯೇ ವಕ್ರಾ ಲೋಕಂಗತೇ ಪರಿವೇಷಗೇ ॥
ರವಿ ಯಮಕುಜೈಃ ಸೌಮ್ಯಾ ದೃಷ್ಟೈರ್ನಭ ಸ್ಥಲಮಾಶ್ರಿತೈ ।
ರ್ಭೃತಕಮನುಜಃ ಪೂರ್ವೋದ್ದಿಷ್ಟೈರ್ನರಾಧಮ ಮಧ್ಯಮಾಃ ॥೧೮॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಅನಿಷ್ಟ ಯೋಗ ನಿರೂಪಣಂ ನಾಮ ಏಕವಿಂಶೋಧ್ಯಾಯಃ ॥

ಚಂದ್ರನು ಶನಿಯಿಂದ ಕೂಡಿದ್ದರೆ ನಿಷ್ಠೂರ ಭಾಷಿಯಾಗುವನು. ಚಂದ್ರನು ಶನಿಯಿಂದ ಕೂಡಿದ್ದು ಕುಜನಿಂದ ನೋಡಲ್ಪಟ್ಟರೆ ಅಪಸ್ಮಾರ ರೋಗಿಯಾಗುವನು. ಚಂದ್ರನು ಶನಿಯಿಂದ ಕೂಡಿ ಕುಜನಿಂದ ನೋಡಲ್ಪಟ್ಟು, ಪರಿವೇಷ ಮಧ್ಯದಲ್ಲಿದ್ದರೆ ಕ್ಷಯರೋಗಿಯಾಗುವನು. ಲಗ್ನದಿಂದ ದಶಮದಲ್ಲಿ ಶುಭಗ್ರಹರ ದೃಷ್ಟಿಯಿಲ್ಲದೆ ರವಿ ಶನಿ ಕುಜರಿದ್ದರೆ ಭೃತ್ಯನಾಗುವನು. ಅಂದರೆ ದಶಮದಲ್ಲಿ ಒಂದು ಗ್ರಹವಿದ್ದರೆ ಸೇವಕರಲ್ಲಿ ಶ್ರೇಷ್ಠನೂ, ಎರಡು ಗ್ರಹರಿದ್ದರೆ ಸೇವಕರಲ್ಲಿ ಮಧ್ಯಮನೂ, ಮೂರು ಗ್ರಹರಿದ್ದರೆ ಸೇವಕರಲ್ಲಿ ಕನಿಷ್ಠನೂ, ದಶಮದಲ್ಲಿ ಶತ್ರು ನೀಚ ಅಸ್ತ ಗ್ರಹರಿದ್ದರೆ ಅತ್ಯಂತ ಹೀನ ವೃತ್ತಿಯವನೂ ಆಗುವನು.

॥ ಅನಿಷ್ಟಯೋಗವೆಂಬ ಇಪ್ಪತ್ತೊಂದನೇಯ ಅಧ್ಯಾಯವು ॥

## ಅಧ್ಯಾಯ ೨೨

## || ಸ್ತ್ರೀಜಾತಕಾಧ್ಯಾಯಃ ||

ಯದ್ಯತ್ಫಲಂ ನರಭವೇಕ್ಷಮ ಮಂಗನಾನಾಂ ।
ತತ್ತದ್ವದೇತ್ಪತಿಷು ವಾ ಸಕಲಂ ವಿಧೇಯಂ ॥
ತಾಸಾಂ ತು ಭರ್ತೃ ಮರಣಂ ನಿಧನೇವಪುಸ್ತು ।
ಲಗ್ನೇಂದುಗಂ |ಸುಭಗತಾಸ್ತಮಯೇ ಪತಿಶ್ಚ ॥೧॥

ಜಾತಕದಲ್ಲಿ ಯಾವ್ಯಾವ ಫಲಗಳನ್ನು ಪುರುಷರಿಗೆ ಹೇಳಿದೆಯೋ ಅವೆಲ್ಲವೂ ಸ್ತ್ರೀಯರಿಗೂ ಸಲ್ಲ ತಕ್ಕವುಗಳಾಗಿರುವುವು. ಅವರ ಪತಿಯ ಮರಣವನ್ನು ಅಷ್ಟಮದಿಂದಲೂ ಅವರ ಶರೀರ ವಿಚಾರವನ್ನು ಲಗ್ನದಿಂದಲೂ ಚಂದ್ರಲಗ್ನದಿಂದಲೂ ಪತಿಯ ಸೌಂದರ್ಯವನ್ನು ಸಪ್ತಮದಿಂದಲೂ ತಿಳಿಯಬೇಕು.

ಯುಗ್ಮೇಷು ಲಗ್ನ ಶಶಿನೋಃ ಪ್ರಕೃತಿ ಸ್ಥಿತಾಸ್ತ್ರೀ।
ಸಚ್ಛೀಲ ಭೂಷಣಯುತಾ ಶುಭದೃಷ್ಟಯೋಶ್ಚ॥
ಓಜಸ್ಥಯೋಶ್ಚ ಪುರುಷಾಕೃತಿ ಶೀಲಯುಕ್ತಾ।
ಪಾಪಾಚ ಪಾಪಯುತ ವೀಕ್ಷಿತಯೋರ್ಗುಣಹೋನಾ ॥೨॥

ಸ್ತ್ರೀಜಾತಕದಲ್ಲಿ ಲಗ್ನ, ಚಂದ್ರರು ಯುಗ್ಮರಾಶಿಯಲ್ಲಿದ್ದರೆ ಸ್ತ್ರೀಯು ಸಹಜ ಸ್ವಭಾವವುಳ್ಳವಳಾಗುವಳು. ಲಗ್ನ, ಚಂದ್ರರಿಗೆ ಶುಭದೃಷ್ಟಿಯಿದ್ದರೆ ಸುಶೀಲಳೂ ಅಲಂಕಾರಾದಿಗಳಿಂದ ಕೂಡಿದವಳೂ ಆಗಿರುವಳು. ಅವರು ಪುರುಷರಾಶಿಯಲ್ಲಿದ್ದರೆ ಪುರುಷನ ಆಕಾರ ಮತ್ತು ಶೀಲಗಳಿಂದ ಕೂಡಿರುವಳು ಪುರುಷರಾಶಿಯಲ್ಲಿರುವ ಲಗ್ನ, ಚಂದ್ರರಿಗೆ ಪಾಪದೃಷ್ಟಿ ಯೋಗಗಳಿದ್ದರೆ ಗುಣಹೀನಳೂ ಪಾಪಶೀಲಳೂ ಆಗಿರುವಳು.

ಕನ್ಯೈವ ದುಷ್ಟಾ ವ್ರಜತೀಹದಾಸ್ಯಂ।
ಸಾಧ್ವೀ ಸಮಾಯಾ ಕುಚರಿತ್ರಯುಕ್ತಾ॥
ಭೂಮ್ಯಾತ್ಮ ಜರ್ಕ್ಷೇ ಕ್ರಮಶೋಂಶಕೇಷು।
ವಕ್ರಾರ್ಕಿ ಜೀವೇಂದುಜ ಭಾರ್ಗವಾನಾಮ್ ॥೩॥

ಕುಜಕ್ಷೇತ್ರಗಳಾದ ಮೇಷ, ವೃಶ್ಚಿಕದಲ್ಲಿ ಒಂದು ಲಗ್ನವಾಗಿ ಅಥವಾ ಚಂದ್ರಲಗ್ನವಾಗಿದ್ದು ಕುಜ ತ್ರಿಂಶಾಂಶದಲ್ಲಿದ್ದರೆ ಕನ್ಯೆಯು ಕುಮಾರಿ ಅವಸ್ಥೆಯಲ್ಲೇ ದುಷ್ಟಳಾಗುವಳು. ಅದು ಶನಿ ತ್ರಿಂಶಾಂಶದಲ್ಲಿದ್ದರೆ ದಾಸಿಯಾಗುತ್ತಾಳೆ. ಗುರು ತ್ರಿಂಶಾಂಶದಲ್ಲಿದ್ದರೆ ಸಾಧ್ವೀ (ಪತಿವ್ರತೆ)ಯಾಗುತ್ತಾಳೆ. ಬುಧ ತ್ರಿಂಶಾಂಶದಲ್ಲಿದ್ದರೆ ಮಾಯಾವಿಯಾಗುತ್ತಾಳೆ. ಶುಕ್ರ ತ್ರಿಂಶಾಂಶದಲ್ಲಿದ್ದರೆ ಕುಮಾರಿ ಅವಸ್ಥೆಯಲ್ಲೇ ದುರಾಚಾರಾದಿಗಳಿಂದ ಕುಚರಿತ್ರೆಯುಳ್ಳವಳಾಗುವಳು.

ದುಷ್ಟಾ ಪುನರ್ಭೂಃ ಸುಗುಣಾ ಕಲಾಜ್ಞಾ।
ಖ್ಯಾತಾ ಗುಣೈಶ್ಚಾ ಸುರಪೂಜಿತರ್ಕ್ಷೇ॥
ಸ್ಯಾತ್ಕಾಪಟೀ ಕ್ಲೀಬ ಸಮಾ ಸತೀ ಚ।
ಬೌಧೇ ಗುಣಾಢ್ಯಾ ಪ್ರವಿಕೀರ್ಣಕಾಮಾ ॥೪॥

ವೃಷಭ ತುಲೆಗಳಲ್ಲಿ ಲಗ್ನ ಅಥವಾ ಚಂದ್ರನು ಕುಜ ತ್ರಿಂಶಾಂಶದಲ್ಲಿದ್ದರೆ ದುಷ್ಟಳಾಗುವಳು. ಶನಿ ತ್ರಿಂಶಾಂಶದಲ್ಲಿದ್ದರೆ ಎರಡನೆ ವಿವಾಹ ಮಾಡಿಕೊಳ್ಳುವವಳೂ ಗುರು ತ್ರಿಂಶಾಂಶದಲ್ಲಿದ್ದರೆ ಸದ್ಗುಣಗಳಿಂದ ಕೂಡಿದವಳೂ ಬುಧ ತ್ರಿಂಶಾಂಶದಲ್ಲಿದ್ದರೆ ಕಲೆಯನ್ನರಿತವಳೂ ಶುಕ್ರ ತ್ರಿಂಶಾಂಶದಲ್ಲಿದ್ದರೆ ಗುಣಗಳಿಂದ ಪ್ರಸಿದ್ಧಳೂ ಆಗುವಳು ಮಿಥುನ ಕನ್ಯೆಗಳಲ್ಲಿ ಲಗ್ನ, ಚಂದ್ರರು ಕುಜ ತ್ರಿಂಶಾಂಶದಲ್ಲಿದ್ದರೆ ಕಪಟಿಯೂ, ಶನಿ ತ್ರಿಂಶಾಂಶದಲ್ಲಿದ್ದರೆ ನಪುಂಸಕಪ್ರಾಯಳೂ, ಗುರು ತ್ರಿಂಶಾಂಶದಲ್ಲಿದ್ದರೆ ಪತಿವ್ರತೆಯೂ ಬುಧ ತ್ರಿಂಶಾಂಶದಲ್ಲಿದ್ದರೆ ಗುಣಯುಕ್ತಳೂ, ಶುಕ್ರ ತ್ರಿಂಶಾಂಶದಲ್ಲಿದ್ದರೆ ಹೆಚ್ಚು ಕಾಮವುಳ್ಳವಳೂ ಆಗುವಳು

ಸ್ವಚ್ಛಂದಾ ಪತಿಘಾತಿನೀ ಬಹುಗುಣಾ ಶಿಲ್ಪಿನ್ಯ ಸಾಧ್ವೀಂ ದುಭೇ।
ನ್ಯಾಚಾರಾ ಕುಲಟಾರ್ಕಭೇ ನೃಪವಧೂ ಪುಂಶ್ಚೇಷ್ಟಿತಾ ಗಮ್ಯಗಾ॥
ಜೈವೇನೈಕ ಗುಣಾಲ್ಪ ರತ್ಯತಿ ಗುಣಾ ವಿಜ್ಞಾನ ಯುಕ್ತಾ ಸತೀ ।
ದಾಸೀನೀಚರತಾರ್ಕಿಭೇ ಪತಿರತಾ ದುಷ್ಟಾಪ್ರಜಾ ಸ್ವಾಂಶಕೈಃ ॥೫॥

ಕರ್ಕಾಟಕ ರಾಶಿಯಲ್ಲಿ ಲಗ್ನ, ಚಂದ್ರರು ಕುಜ ತ್ರಿಂಶಾಂಶದಲ್ಲಿದ್ದರೆ ಸ್ವೇಚ್ಛೆಯವಳೂ ಶನಿ ತ್ರಿಂಶಾಂಶದಲ್ಲಿದ್ದರೆ ಪತಿಯನ್ನು ಹಿಂಸಿಸುವವಳೂ ಗುರು ತ್ರಿಂಶಾಂಶದಲ್ಲಿದ್ದರೆ ಹೆಚ್ಚು ಗುಣವುಳ್ಳವಳೂ, ಬುಧ ತ್ರಿಂಶಾಂಶದಲ್ಲಿದ್ದರೆ ಶಿಲ್ಪವಿದ್ಯೆಯನ್ನು ತಿಳಿದವಳೂ ಶುಕ್ರ ತ್ರಿಂಶಾಂಶ ದಲ್ಲಿದ್ದರೆ ಪತಿವ್ರತೆಯಲ್ಲದವಳೂ ಆಗುವಳು. ಸಿಂಹರಾಶಿಯಲ್ಲಿ ಲಗ್ನ, ಚಂದ್ರರು ಕುಜ ತ್ರಿಂಶಾಂಶದಲ್ಲಿದ್ದರೆ ಪುರುಷನಂತೆ ಆಚಾರವುಳ್ಳವಳೂ, ಶನಿ ತ್ರಿಂಶಾಂಶದಲ್ಲಿದ್ದರೆ ಜಾರೆಯೂ, ಗುರು ತ್ರಿಂಶಾಂಶದಲ್ಲಿದ್ದರೆ ರಾಜಪತ್ನಿಯೂ, ಬುಧ ತ್ರಿಂಶಾಂಶದಲ್ಲಿದ್ದರೆ ಪುರುಷಚೇಷ್ಟೆ ಯುಳ್ಳವಳೂ, ಶುಕ್ರ ತ್ರಿಂಶಾಂಶದಲ್ಲಿದ್ದರೆ ಅಗಮ್ಯನಾದ ಅನ್ಯಪುರುಷನಲ್ಲಿ ಆಸಕ್ತಿಯುಳ್ಳವಳೂ ಆಗಿರುವಳು. ಧನುರ್ಮೀನಗಳಲ್ಲಿ ಲಗ್ನ, ಚಂದ್ರರು ಕುಜ ತ್ರಿಂಶಾಂಶದಲ್ಲಿದ್ದರೆ ಅನೇಕ ಗುಣ ಗಳುಳ್ಳವಳೂ ಶನಿ ತ್ರಿಂಶಾಂಶದಲ್ಲಿದ್ದರೆ ಅಲ್ಪ ರತಿಯುಳ್ಳವಳೂ, ಗುರು ತ್ರಿಂಶಾಂಶದಲ್ಲಿದ್ದರೆ ಅತಿ ಗುಣವುಳ್ಳವಳೂ, ಬುಧ ತ್ರಿಂಶಾಂಶದಲ್ಲಿದ್ದರೆ ವಿಶೇಷ ಜ್ಞಾನವುಳ್ಳವಳೂ, ಶುಕ್ರ ತ್ರಿಂಶಾಂಶ ದಲ್ಲಿದ್ದರೆ ಪತಿವ್ರತೆಯಲ್ಲ ಅಸಾಧ್ವಿ ಆಗುವಳು. ಮಕರ, ಕುಂಭಗಳಲ್ಲಿ ಲಗ್ನ ಚಂದ್ರರು ಕುಜ ತ್ರಿಂಶಾಂಶದಲ್ಲಿದ್ದರೆ ದಾಸಿಯೂ, ಶನಿ ತ್ರಿಂಶಾಂಶದಲ್ಲಿದ್ದರೆ ನೀಚನಲ್ಲಿ ರತಿಯುಳ್ಳವಳೂ, ಗುರು ತ್ರಿಂಶಾಂಶದಲ್ಲಿದ್ದರೆ ಪತಿನಿರತಳೂ, ಬುಧ ತ್ರಿಂಶಾಂಶದಲ್ಲಿದ್ದರೆ ದುಷ್ಟಳು, ಶುಕ್ರ ತ್ರಿಂಶಾಂಶ ದಲ್ಲಿದ್ದರೆ ಸಂತಾನರಹಿತಳೂ ಆಗುವಳು.

ಶಶಿಲಗ್ನ ಸಮಾಯುಕ್ತೈಃಫಲಂ ತ್ರಿಂಶಾಂಶಕೈರಿದಮ್॥
ಬಲಾಬಲ ವಿಕಲ್ಪೇನ ತಯೋರುಕ್ತಂ ವಿಚಿಂತಯೇತ್ ॥೬॥

ಚಂದ್ರ ಲಗ್ನಗಳು ಹೊಂದಿರುವ ಕುಜಾದಿ ತ್ರಿಂಶಾಂಶಗಳಿಗೆ ಆ ಚಂದ್ರ ಲಗ್ನಗಳ ಬಲಾಬಲ ವನ್ನನುಸರಿಸಿ ಮೇಲೆ ಹೇಳಲ್ಪಟ್ಟ ಫಲಗಳನ್ನು ವಿಚಾರ ಮಾಡಿ ತಿಳಿಯತಕ್ಕದ್ದು. (ಬಲ ಕಡಿಮೆಯಿದ್ದರೆ ಫಲವು ಸಿಕ್ಕುವುದಿಲ್ಲ.)

ದೃಕ್ಸಂ ಸ್ಥಾವಸಿತ ಸಿತೌ ಪರಸ್ಪರಾಂಶೇ।
ಶೌಕ್ರೇವಾ ಯದಿ ಘಟರಾಶಿ ಸಂಭವೋಂಶಃ॥
ಸ್ತ್ರೀಭಿಃ ಸ್ತ್ರೀಮದನ ವಿಷಾನಲಂ ಪ್ರದೀಪ್ತಂ।
ಸಂಶಾಂತಿಂ ನಯತಿ ನರಾಕೃತಿ ಸ್ಥಿತಾಭಿಃ ॥೭॥

ಶುಕ್ರ, ಶನಿಗಳು ಪರಸ್ಪರ ನವಾಂಶಕಗಳಲ್ಲಿದ್ದು ಅನ್ಯೋನ್ಯ ದೃಷ್ಟಿಯನ್ನು ಪಡೆದಿದ್ದರೂ ಅಥವಾ ಶುಕ್ರಕ್ಷೇತ್ರಗಳಾದ ವೃಷಭ, ತುಲಾ, ಲಗ್ನವಾಗಿ ಲಗ್ನವು ಕುಂಭಾಂಶವನ್ನು ಪಡೆದಿದ್ದರೂ ಈ ಎರಡು ಸಂದರ್ಭಗಳಲ್ಲಿಯೂ ಹುಟ್ಟಿದ ಸ್ತ್ರೀಯು ನರಾಕೃತಿಯುಳ್ಳ ಹೆಂಗಸರಿಂದಲೇ ಮದನ ಪರಿತಾಪವನ್ನು ಹೋಗಲಾಡಿಸಿಕೊಳ್ಳುವವಳಾಗುತ್ತಾಳೆ. ಅಂದರೆ ಅತಿಯಾಗಿ ಕಾಮುಕಿಯೆಂದು ಭಾವವು.

ಶೂನ್ಯೇ ಕಾಪುರುಷೋಬಲೇಸ್ತ ಭವನೇ ಸೌಮ್ಯ ಗ್ರಹಾವೀಕ್ಷಿತೇ।
ಕ್ಲೀಬೋಸ್ತೇ ಬುಧ ಮಂದಯೋಶ್ಚರ ಗೃಹೇ ನಿತ್ಯಂ ಪ್ರವಾಸಾನ್ವಿತಃ॥
ಉತ್ಸೃಷ್ಟಾ ತರಣೌ ಕುಜೇತು ವಿಧವಾಬಾಲ್ಯೇಸ್ತ ರಾಶಿಸ್ಥಿತೇ।
ಕನ್ಯೈವಾ ಶುಭ ವೀಕ್ಷಿತೇರ್ಕ ತನಯೇ ದ್ಯೂನೇಜರಾಂ ಗಚ್ಛತಿ ॥೮॥

ಸಪ್ತಮವು ದುರ್ಬಲವಾಗಿ ಅಲ್ಲಿ ಗ್ರಹರಿಲ್ಲದೆಯೂ ಶುಭಗ್ರಹರ ದೃಷ್ಟಿರಹಿತವಾಗಿಯೂ ಇದ್ದರೆ ಪತಿಯು ಕುತ್ಸಿತನಾಗುತ್ತಾನೆ. ಸಪ್ತಮವು ಚರಗೃಹವಾಗಿ ಬುಧ, ಶನಿಗಳಿದ್ದರೆ ಪತಿಯು ನಪುಂಸಕನಾಗುತ್ತಾನೆ. ಮತ್ತು ಆತನು ಸದಾ ಸಂಚಾರಿಯಾಗುತ್ತಾನೆ. ಸಪ್ತಮದಲ್ಲಿ ರವಿಯಿದ್ದರೆ ಗಂಡಸಿನಿಂದ ಬಿಡಲ್ಪಡುತ್ತಾಳೆ. ಸಪ್ತಮದಲ್ಲಿ ಕುಜನಿದ್ದರೆ ಬಾಲ್ಯದಲ್ಲಿಯೇ ವಿಧವೆಯಾಗುವಳು. ಸಪ್ತಮದಲ್ಲಿ ಪಾಪದೃಷ್ಟಿಯನ್ನು ಪಡೆದು ಶನಿಯಿದ್ದರೆ ಕನ್ಯೆಯೇ ಮುದುಕಿಯಾಗುತ್ತಾಳೆ ಅಂದರೆ ವಿವಾಹವಾಗುವುದಿಲ್ಲ.

ಆಗ್ನೇಯೈರ್ವಿಧವಾಸ್ತ ರಾಶಿ ಸಹಿತೈರ್ಮಿಶ್ರೈ ಪುನರ್ಭೂರ್ಭವೇ।
ತ್ಕ್ರೂರೇಹೀನ ಬಲೇಸ್ತಗೇ ಸ್ವಪತಿನಾ ಸೌಮ್ಯೇಕ್ಷಿತೇ ಪ್ರೋಜ್ಝಿತಾ॥
ಅನ್ಯೋನ್ಯಾಂಶಕಯೋಃ ಸಿತಾವನಿ ಜಯೋರನ್ಯ ಪ್ರಸಕ್ತಾಂಗನಾ।
ದ್ಯೂನೇವಾಯದಿ ಶೀತರಶ್ಮಿ ಸಹಿತೌ ಭರ್ತುಸ್ತ ದಾನುಜ್ಞಯಾ ॥೯॥

ಸಪ್ತಮರಾಶಿಯಲ್ಲಿ ಪಾಪಗ್ರಹವಿದ್ದರೆ ವಿಧವೆಯಾಗುವಳು ಅಲ್ಲಿ ಶುಭ ಪಾಪಗ್ರಹಗಳು ಮಿಶ್ರವಾಗಿದ್ದರೆ ಎರಡನೆಯ ಲಗ್ನವಾಗುವಳು. ಸಪ್ತಮದಲ್ಲಿ ಪಾಪಗ್ರಹವು ದುರ್ಬಲವಾಗಿದ್ದು

ಶುಭಗ್ರಹರಿಂದ ನೋಡಲ್ಪಟ್ಟರೆ ಗಂಡನಿಂದ ಬಿಡಲ್ಪಟ್ಟವಳಾಗುವಳು. ಶುಕ್ರ, ಕುಜರು ಪರಸ್ಪರಾಂಶಕದಲ್ಲಿದ್ದರೆ ಗಂಡನಿರುವಾಗಲೇ ಪರಪುರುಷರ ಸಂಗ ಮಾಡುವ ಹೆಂಗಸಾಗುವಳು. ಶುಕ್ರಾಂಗಾರಕರು ಸಪ್ತಮದಲ್ಲಿದ್ದು ಚಂದ್ರನಿಂದ ಕೂಡಿದ್ದರೆ ಗಂಡನ ಅನುಮತಿಯಿಂದಲೇ ಬೇರೆಯವರ ಸಂಗ ಮಾಡುವ ಹೆಂಗಸಾಗುವಳು.

ಸೌರಾರಕ್ಷೇ ಲಗ್ನಗೇಸೇಂದು ಶುಕ್ರೇ।
ಮಾತ್ರಾಸಾರ್ಧಂ ಬಂಧಕೀ ಪಾಪ ದೃಷ್ಟೇ॥
ಕೌಜೇಸ್ತಾಂಶೇ ಸೌರಿಣಾವ್ಯಾಧಿಯೋನಿ।
ಶ್ಚಾರು ಶ್ರೋಣೀವಲ್ಲಭಾ ಸದ್ಗ್ರಹಾಂಶೇ ॥೧೦॥

ಮಕರ, ಕುಂಭ, ಮೇಷ ಅಥವಾ ವೃಶ್ಚಿಕ ಇವುಗಳಲ್ಲೊಂದು ಲಗ್ನವಾಗಿ ಅಲ್ಲಿ ಚಂದ್ರ, ಶುಕ್ರರಿದ್ದು ಪಾಪದೃಷ್ಟಿಯೂ ಇದ್ದರೆ ತಾಯಿಯೂ, ಮಗಳೂ ವ್ಯಭಿಚಾರಿಣಿಯರಾಗುವರು. ಸಪ್ತಮ ಭಾವದಲ್ಲಿ ಕುಜಾಂಶವು ಬಂದು ಶನಿಯಿಂದ ನೋಡಲ್ಪಟ್ಟರೆ ಯೋನಿಯ ವ್ಯಾಧಿಯುಳ್ಳವ ಳಾಗುವಳು (ಪ್ರಮೇಹ ಮೊದಲಾದ ರೋಗಗಳುಳ್ಳವಳಾಗುವಳು), ಸಪ್ತಮ ಭಾವದಲ್ಲಿ ಶುಭಗ್ರಹರ ಅಂಶಕವಿದ್ದರೆ ಸುಭಗವುಳ್ಳವಳೂ ಗಂಡನಿಗಿಷ್ಟವಾದವಳೂ ಆಗುತ್ತಾಳೆ.

ವೃದ್ಧೋಮೂರ್ಖಃ ಸೂರ್ಯಜರ್ಕ್ಷೇಂಶ ಕೇವಾ।
ಸ್ತ್ರೀಲೋಲಃ ಸ್ಯಾತ್ಕ್ರೋಧನಶ್ಚಾವನೇಯೇ॥
ಶೌಕ್ರೇಕಾಂತೋತೀವ ಸೌಭಾಗ್ಯಯುಕ್ತೋ।
ವಿದ್ವಾನ್‌ಭರ್ತಾ ನೈಪುಣಜ್ಞಶ್ಚ ಬೌಧೇ ॥೧೧॥

ಸಪ್ತಮವು ಶನಿಕ್ಷೇತ್ರ ಅಥವಾ ನವಾಂಶಕವಾಗಿದ್ದರೆ ಪತಿಯು ವೃದ್ಧನೂ, ಮೂರ್ಖನೂ ಆಗುವನು. ಆ ಸಪ್ತಮವು ಕುಜ ಕ್ಷೇತ್ರ ಅಥವಾ ಅಂಶಕವಾಗಿದ್ದರೆ ಸ್ತ್ರೀಲೋಲನೂ ಸಿಟ್ಟುಳ್ಳವನೂ ಆದ ಪತಿಯನ್ನು ಹೊಂದುತ್ತಾಳೆ ಅದು ಶುಕ್ರ ಕ್ಷೇತ್ರ ಶುಕ್ರ ನವಾಂಶವಾಗಿದ್ದರೆ ಕಾಂತಿಯುಕ್ತನೂ ಅತಿಯಾದ ಸೌಭಾಗ್ಯಶಾಲಿಯಾಗುತ್ತಾನೆ. ಬುಧ ಕ್ಷೇತ್ರ ಅಥವಾ ನವಾಂಶವಾಗಿದ್ದರೆ ಪತಿಯು ವಿದ್ಯಾವಂತನೂ ನಿಪುಣನೂ ಆಗಿರುತ್ತಾನೆ.

ಮದನ ವಶಗತೋ ಮೃದುಶ್ಚಚಾಂದ್ರೇ।
ತ್ರಿದಶ ಗುರೌ ಗುಣವಾನ್ ಜಿತೇಂದ್ರಿಯಶ್ಚ॥
ಅತಿ ಮೃದುರತಿ ಕರ್ಮಕೃಚ್ಚ ಸೌರ್ಯೇ।
ಭವತಿ ಗೃಹೇಸ್ತಮಯ ಸ್ಥಿತೇಂಶಕೇವಾ ॥೧೨॥

ಸಪ್ತಮವು ಚಂದ್ರ ಕ್ಷೇತ್ರ ಅಥವಾ ನವಾಂಶವಾಗಿದ್ದರೆ ಪತಿಯು ಹೆಚ್ಚು ಕಾಮುಕನೂ, ಗುರು ಕ್ಷೇತ್ರ ಅಥವಾ ನವಾಂಶವಾಗಿದ್ದರೆ ಗುಣವಂತನೂ, ಜಿತೇಂದ್ರಿಯನೂ ಸೂರ್ಯ ಕ್ಷೇತ್ರ

ಅಥವಾ ನವಾಂಶವಾಗಿದ್ದರೆ ಅತಿ ಮೃದು ಸ್ವಭಾವದವನೂ ಹೆಚ್ಚು ಕೆಲಸ ಮಾಡುವವನೂ ಆಗುತ್ತಾನೆ.

**ಈರ್ಷ್ಯಾನ್ವಿತಾ ಸುಖಪರಾ ಶಶಿಶುಕ್ರ ಲಗ್ನೇ।**
**ಜ್ಞೇಂದ್ವೋಃ ಕಲಾಸು ನಿಪುಣಾ ಸುಖಿತಾ ಗುಣಾಢ್ಯಾಃ॥**
**ಶುಕ್ರಜ್ಞಯೋಸ್ತು ರುಚಿರಾ ಸುಭಗಾ ಕಲಾಜ್ಞಾ।**
**ತ್ರಿಷ್ವಪ್ಯನೇಕ ವಸುಸೌಖ್ಯ ಗುಣಾಶ್ಶುಭೇಷು ॥೧೩॥**

ಲಗ್ನದಲ್ಲಿ ಚಂದ್ರ, ಶುಕ್ರರಿದ್ದಾಗ ಹುಟ್ಟಿದ ಸ್ತ್ರೀಯು ಹೊಟ್ಟೆಕಿಚ್ಚುಳ್ಳವಳೂ ಸುಖಪರಳೂ ಆಗುವಳು. ಲಗ್ನದಲ್ಲಿ ಬುಧ, ಚಂದ್ರರಿದ್ದರೆ ಕಲೆಗಳಲ್ಲಿ ಒಳ್ಳೇ ನಿಪುಣಳೂ, ಗುಣಾಢ್ಯಳೂ ಆಗುವಳು. ಲಗ್ನದಲ್ಲಿ ಶುಕ್ರ, ಬುಧರಿದ್ದರೆ ಮನೋಹರಳೂ, ಸುಂದರಳೂ, ಕಲಾಕುಶಲಳೂ ಆಗುವಳು. ಲಗ್ನದಲ್ಲಿ ಮೂರು ಶುಭಗ್ರಹರಿದ್ದರೆ ಅನೇಕ ಸಂಪತ್ತೂ ಸೌಖ್ಯ, ಗುಣಗಳಿಂದ ಕೂಡಿದವಳೂ ಆಗುವಳು.

**ಕ್ರೂರೇಷ್ಟಮೇ ವಿಧವತಾ ನಿಧಾನೇಶ್ವರೋಂಶೇ।**
**ಯಸ್ಯಸ್ಥಿತೋ ವಯಸಿ ತಸ್ಯಸಮೇ ಪ್ರದಿಷ್ಟಾ॥**
**ಸತ್ಸ್ವರ್ಥಗೇಷು ಮರಣಂ ಸ್ವಯಮೇವತಸ್ಯಾಃ।**
**ಕನ್ಯಾಳಿಗೋಹರಿಷು ಚಾಲ್ಪ ಸುತತ್ವಮಿಂದೌ ॥೧೪॥**

ಅಷ್ಟಮದಲ್ಲಿ ಪಾಪಗ್ರಹವಿದ್ದರೆ ವೈಧವ್ಯವನ್ನು ಹೊಂದುವಳು. ಅಷ್ಟಮಾಧಿಪತಿಯ ಅಂಶಕವು ಯಾವ ರಾಶಿಯಲ್ಲಿರುತ್ತದೆಯೋ ಆ ರಾಶ್ಯಾಧಿಪನ ದಶಾಭುಕ್ತಿ ಕಾಲಗಳಲ್ಲಿ ವೈಧವ್ಯ ಪ್ರಾಪ್ತಿಯಾಗುವುದು. ದ್ವಿತೀಯ ಭಾವದಲ್ಲಿ ಶುಭಗ್ರಹವಿದ್ದರೆ ತಾನೇ ಮೊದಲು ಸಾಯುವಳು. ಸ್ತ್ರೀಯ ಜಾತಕದಲ್ಲಿ ಕನ್ಯೆ, ವೃಶ್ಚಿಕ, ವೃಷಭ, ಸಿಂಹ ಈ ರಾಶಿಗಳಲ್ಲಿ ಚಂದ್ರನಿದ್ದರೆ ಅಲ್ಪ ಪುತ್ರವತಿಯಾಗುವಳು.

**ಸೌರೇ ಮಧ್ಯಬಲೇ ಬಲೇನ ರಹಿತ್ಯೈಃ ಶೀತಾಂಶು ಶುಕ್ರೇಂದುಜೈಃ।**
**ಶೇಷೈರ್ವೀರ್ಯ ಸಮನ್ವಿತೈಃ ಪುರುಷಿಣೀ ಯದ್ಯೋಜರಾಶ್ಯುದ್ಗಮಃ॥**
**ಜೀವಾರಾಸ್ಫುಜಿದ್ಯೆಂದವೇಷು ಬಲಿಷು ಪ್ರಾಗ್ಲಗ್ನ ರಾಶೌ ಸಮೇ।**
**ವಿಖ್ಯಾತಾ ಭುವಿನೈಕ ಶಾಸ್ತ್ರನಿಪುಣಾ ಸ್ತ್ರೀ ಬ್ರಹ್ಮವಾದಿನ್ಯಪಿ ॥೧೫॥**

ಶನಿಯು ಮಧ್ಯ ಬಲಶಾಲಿಯಾಗಿ ಚಂದ್ರ, ಶುಕ್ರ, ಬುಧ ಇವರು ಬಲರಹಿತರಾಗಿಯೂ ಮಿಕ್ಕ ರವಿ ಕುಜರುಗಳು ಬಲಿಷ್ಠರಾಗಿರೂ ಇರುವಾಗ ಪುರುಷರಾಶಿಯಲ್ಲಿ ಸ್ತ್ರೀಯ ಜನಿಸಿದರೆ ಆಕೆಯು ಪುರುಷ ಸ್ವಭಾವದವಳಾಗುತ್ತಾಳೆ. ಗುರು, ಕುಜ, ಶುಕ್ರ, ಬುಧ ಇವರು ಬಲಿಷ್ಠರಾಗಿಯೂ ಸಮರಾಶಿಯು ಲಗ್ನವಾಗಿಯೂ ಇದ್ದರೆ ವಿಖ್ಯಾತಳೂ ಅನೇಕ ಶಾಸ್ತ್ರ ನಿಪುಣಳೂ, ಬ್ರಹ್ಮವಾದಿನಿಯೂ ಆಗುತ್ತಾಳೆ.

**ಪಾಪೇಸ್ತೇ ನವಮಗತ ಗ್ರಹಸ್ಯ ತುಲ್ಯಾಂ।**
**ಪ್ರವ್ರಜ್ಯಾಂ ಯುವತಿ ರುಪೈತ್ಯ ಸಂಶಯೇನ॥**
**ಉದ್ವಾಹೇ ವರಣವಿಧೌ ಪ್ರಧಾನ ಕಾಲೇ।**
**ಚಿಂತಾಯಾಮಪಿ ಸಕಲಂ ವಿಧೇಯ ಮೇತತ್ ॥೧೬॥**

**॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ಸ್ತ್ರೀಜಾತಕ ಫಲ ನಿರೂಪಣಂ ನಾಮ ದ್ವಾವಿಂಶೋಽಧ್ಯಾಯಃ ॥**

ಸಪ್ತಮದಲ್ಲಿ ಪಾಪಗ್ರಹವಿದ್ದು, ನವಮದಲ್ಲಿ ಗ್ರಹವಿದ್ದರೆ ಈ ನವಮದಲ್ಲಿರುವ ಗ್ರಹಕ್ಕೆ ಸಮಾನವಾದ ಸನ್ಯಾಸವನ್ನು ಹೊಂದುತ್ತಾಳೆ. ಈ ಎಲ್ಲಾ ವಿಷಯಗಳನ್ನು ವಿವಾಹಕಾಲದಲ್ಲಿ ಕನ್ಯಾದಾನ ಕಾಲದಲ್ಲಿ ಕನ್ಯಾವರಣ ಕಾಲದಲ್ಲಿ ಮತ್ತು ಪ್ರಶ್ನಕಾಲಗಳಲ್ಲಿ ಮುಂತಾದುವುಗಳಲ್ಲೆಲ್ಲಾ ಚಿಂತಿಸಬೇಕು

**॥ ಸ್ತ್ರೀ ಜಾತಕವೆಂಬ ಇಪ್ಪತ್ತೆರಡನೇಯ ಅಧ್ಯಾಯವು ॥**

## ॥ ನಿರ್ಯಾಣಾಧ್ಯಾಯಃ ॥

ಮೃತ್ಯುರ್ಮೃತ್ಯು ಗ್ರಹೇಕ್ಷಣೇನ ಬಲಿಭಿಸ್ತದ್ಧಾತು ಕೋಪೋದ್ಭವ ।
ಸ್ತತ್ಸಂ ಯುಕ್ತಭಗಾತ್ರಜೋ ಬಹುಭವೋ ವೀರ್ಯಾನ್ವಿತೈರ್ಭೂರಿಭಿಃ ॥
ಅಗ್ನ್ಯಂಬ್ವಾಯುಧಜೋ ಜ್ವರಾಮಯಕೃತ ಸ್ತೃಟ್‌ಕ್ಷುತ್ಕೃತಶ್ಚಾಷ್ಟಮೇ ।
ಸೂರ್ಯಾದ್ಯೈರ್ನಿಧನೇ ಚರಾದಿಷು ಪರಸ್ವಾದ್ವ ಪ್ರದೇಶೇಷ್ವಿತಿ ॥೧॥

ಜನ್ಮಲಗ್ನದಿಂದ ಅಷ್ಟಮ ಭಾವದಲ್ಲಿ ಯಾವ ಗ್ರಹವೂ ಇಲ್ಲದೆ ಸ್ಥಾನಾದಿ ಷಡ್ಬಲ ಯುಕ್ತರಾದ ಸೂರ್ಯಾದಿ ಗ್ರಹರಲ್ಲಿ ಯಾವ ಗ್ರಹದ ದೃಷ್ಟಿಯಿದೆಯೋ ಆ ಗ್ರಹಕ್ಕೆ ಹೇಳಿದ ವಾತ, ಪಿತ್ತ, ಕಫಗಳೆಂಬ ಧಾತು ಪ್ರಕೋಪದಿಂದ ಅಷ್ಟಮ ಭಾವ ರಾಶಿಯು ಕಾಲಪುರುಷನ ಯಾವ ಅಂಗವೆಂದು ಹೇಳಿದೆಯೋ ಶರೀರದಲ್ಲಿ ಆ ಅಂಗಕ್ಕೆ ಪೀಡೆಯುಂಟಾಗಿ ಮೃತ್ಯು ಪ್ರಾಪ್ತಿ ಯಾಗುವುದು. ಅನೇಕ ಗ್ರಹಗಳು ಸ್ಥಾನಾದಿ ಷಡ್ಬಲಯುಕ್ತರಾಗಿ ಶೂನ್ಯವಾಗಿರುವ ಅಷ್ಟಮವನ್ನು ನೋಡುತ್ತಿದ್ದರೆ ಆ ಗ್ರಹರಿಗೆ ಹೇಳಿದ ಧಾತು ಉದ್ರೇಕದಿಂದ ಆ ಅಂಗಕ್ಕೆ ಪೀಡೆಯುಂಟಾಗಿ ಮರಣವೆಂದು ತಿಳಿಯತಕ್ಕದ್ದು. ಇದಲ್ಲದೆ ರವಿಯಿದ್ದರೆ ಅಗ್ನಿಯಿಂದಲೂ, ಚಂದ್ರನಿದ್ದರೆ ನೀರಿನಿಂದಲೂ, ಕುಜನಿದ್ದರೆ ಆಯುಧದಿಂದಲೂ, ಬುಧನಿದ್ದರೆ ಜ್ವರದಿಂದಲೂ, ಗುರುವಿದ್ದರೆ ದೀರ್ಘಕಾಲದ ರೋಗದಿಂದಲೂ, ಶುಕ್ರನಿದ್ದರೆ ಬಾಯಾರಿಕೆಯಿಂದಲೂ, ಶನಿಯಿದ್ದರೆ ಉಪವಾಸದಿಂದಲೂ ಮರಣ ಸಂಭವಿಸುವುದು. ಮತ್ತು ಅಷ್ಟಮ ಭಾವವು ಚರರಾಶಿಯಾಗಿದ್ದರೆ ಪರದೇಶದಲ್ಲಿಯೂ, ಸ್ಥಿರರಾಶಿಯಾದರೆ ಸ್ವದೇಶದಲ್ಲಿಯೂ, ದ್ವಿಸ್ವಭಾವರಾಶಿಯಾಗಿದ್ದರೆ ದಾರಿಯಲ್ಲಿಯೂ ಮರಣವೆಂದು ತಿಳಿಯತಕ್ಕದ್ದು.

ಶೈಲಾಗ್ರಾಭಿಹತಸ್ಯ ಸೂರ್ಯಕುಜಯೋರ್ಮೃತ್ಯುಃ ಖಬಂಧುಸ್ಥಯೋಃ ।
ಕೂಪೇ ಮಂದಶಶಾಂಕ ಭೂಮಿತನಯೈರ್ಬಂಧ್ವಸ್ತ ಕರ್ಮಸ್ಥಿತೈಃ ॥
ಕನ್ಯಾಯಾಂ ಸ್ವಜನಾದ್ಧಿ ಮೋಷ್ಣಕರಯೋಃ ಪಾಪ ಗ್ರಹೈರ್ದೃಷ್ಟಯೋಃ ।
ಸ್ಯಾತಾಂ ಯದ್ಯುಭಯೋದಯೇರ್ಕ ಶಶಿನೌ ತೋಯೇ ತದಾ ಮಜ್ಜತಃ ॥೨॥

ಜನ್ಮಕಾಲದಲ್ಲಿ ದಶಮದಲ್ಲಾಗಲೀ ಚತುರ್ಥದಲ್ಲಾಗಲೀ ರವಿ ಕುಜರು ಇದ್ದರೆ ಬೆಟ್ಟದ ತುದಿ ಯಲ್ಲಿ ಕಲ್ಲು ಅಥವಾ ಗುಂಡು ತಗಲಿದ ಆಘಾತದಿಂದ ಮರಣ ಸಂಭವಿಸುವುದು. ಶನಿ, ಚಂದ್ರ, ಕುಜರು ಚತುರ್ಥ, ಸಪ್ತಮ, ದಶಮ ಸ್ಥಾನಗಳಲ್ಲಿದ್ದರೆ, ಬಾವಿಯಲ್ಲಿ ಬಿದ್ದು ಮೃತಿಯಾಗುವುದು. ಕನ್ಯಾರಾಶಿಯಲ್ಲಿ ರವಿ ಚಂದ್ರರಿದ್ದು ಪಾಪಗ್ರಹರಿಂದ ನೋಡಲ್ಪಟ್ಟರೆ ಬಂಧುಜನರಿಂದ ಮರಣ ಪ್ರಾಪ್ತಿಯಾಗುವುದು. ಮಿಥುನ, ಕನ್ಯಾ, ಧನು, ಮೀನ ಈ ರಾಶಿಗಳಲ್ಲಿ ಯಾವುದಾದರೊಂದು ಲಗ್ನವಾಗಿದ್ದು ಅಲ್ಲಿ ರವಿ, ಚಂದ್ರರಿದ್ದರೆ ನೀರಿನಲ್ಲಿ ಮುಳುಗಿ ಮರಣ ಸಂಭವಿಸುವುದು.

ಮಂದೇ ಕರ್ಕಟಗೇ ಜಲೋದರ ಕೃತೋ ಮೃತ್ಯುರ್ಮೃಗಾಂಕೇ ಮೃಗೇ ।
ಶಸ್ತ್ರಾಗ್ನಿ ಪ್ರಭವಃ ಶಶಿನ್ಯ ಶುಭಯೋರ್ಮಧ್ಯೇ ಕುಜರ್ಕ್ಷೇ ಸ್ಥಿತೇ ॥

**ಕನ್ಯಾಯಾಂ ರುಧಿರೋತ್ಥ ಶೋಷಜನಿತಸ್ತದ್ವತ್ ಸ್ಥಿತೇ ಶೀತಗೌ ।**
**ಸೌರರ್ಕ್ಷೇಯದಿ ತದ್ವದೇವ ಹಿಮಗೌರಜ್ಜ್ವಗ್ನಿ ಪಾತ್ಯೈಃ ಕೃತಃ ॥ ೩ ॥**

ಜನ್ಮಕಾಲದಲ್ಲಿ ಶನಿಯು ಕರ್ಕಾಟಕ ರಾಶಿಯಲ್ಲಿಯೂ, ಚಂದ್ರನು ಮಕರರಾಶಿಯಲ್ಲಿಯೂ ಇದ್ದರೆ ಜಲೋದರ ರೋಗದಿಂದ ಮರಣವಾಗುವುದು. ಚಂದ್ರನು ಪಾಪಮಧ್ಯನಾಗಿ ಮೇಷ, ವೃಶ್ಚಿಕದಲ್ಲಿ ಕುಜ, ಶನಿಗಳಲ್ಲಿ ಯಾವುದಾದರೂ ಎರಡು ಗ್ರಹಗಳು (ಸ್ಫುಟ ಪ್ರಕಾರ ಚಂದ್ರನ ಹಿಂದೆ ಮುಂದೆಯಿದ್ದರೆ ಪಾಪ ಮಧ್ಯವಾಗುವುದು) ಇದ್ದರೆ ಶಸ್ತ್ರ, ಆಯುಧ, ಅಗ್ನಿ ಮೂಲಕ ಮರಣವುಂಟಾಗುವುದು. ಚಂದ್ರನು ಕನ್ಯಾರಾಶಿಯಲ್ಲಿ ಪಾಪ ಮಧ್ಯನಾಗಿದ್ದರೆ ರಕ್ತದೋಷದಿಂದಾಗಲಿ ಅಥವಾ ಕ್ಷಯ ರೋಗದಿಂದ ಮರಣ ಉಂಟಾಗುವುದು. ಚಂದ್ರನು ಮಕರದಲ್ಲಾಗಲಿ ಕುಂಭದಲ್ಲಾಗಲಿ ಪಾಪಮಧ್ಯನಾಗಿದ್ದರೆ ಹಗ್ಗದಿಂದಾಗಲಿ ಬೆಂಕಿಯಿಂದಾಗಲಿ ಬಿದ್ದು ಮರಣವಾಗುವುದು.

**ಬಂಧಾದ್ಧೀ ನವಮಸ್ಥಯೋರ ಶುಭಯೋಃ ಸೌಮ್ಯಗ್ರಹಾ ದೃಷ್ಟಯೋಃ ।**
**ದ್ರೇಕ್ಕಾಣೈಶ್ಚ ಸ ಸರ್ಪಪಾಶ ನಿಗಡೈಶ್ಛಿದ್ರಸ್ಥಿತೈರ್ಬಂಧಕಃ ॥**
**ಕನ್ಯಾಯಾಮ ಶುಭಾನ್ವಿತೇಸ್ತಮಯಗೇ ಚಂದ್ರೇಸಿತೇ ಮೇಷಗೇ ।**
**ಸೂರ್ಯೇ ಲಗ್ನಗತೇಚ ವಿದ್ಧಿಮರಣಂ ಸ್ತ್ರೀ ಹೇತುಕಂ ಮಂದಿರೇ ॥ ೪ ॥**

ಲಗ್ನದಿಂದ ಪಂಚಮ ಮತ್ತು ನವಮ ಸ್ಥಾನದಲ್ಲಿ ಶುಭದೃಷ್ಟಿಯಿಲ್ಲದೆ ಎರಡು ಪಾಪ (ರವಿ, ಕುಜ, ಶನಿಗಳಲ್ಲಿ) ಗ್ರಹರಿದ್ದರೆ ಬಂಧನದಿಂದ ಮರಣ ಉಂಟಾಗುವುದು. ಲಗ್ನದಿಂದ ಅಷ್ಟಮ ಸ್ಥಾನದಲ್ಲಿ ಸರ್ಪದ್ರೇಕ್ಕಾಣ ಪಾಶದ್ರೇಕ್ಕಾಣ ನಿಗಡ (ಸಂಕೋಲೆ) ದ್ರೇಕ್ಕಾಣವಾಗಿದ್ದರೂ ಬಂಧನ ದಿಂದ ಮರಣ ಉಂಟಾಗುವುದು. ಲಗ್ನವು ಮೀನವಾಗಿ ಸಪ್ತಮದಲ್ಲಿ ಚಂದ್ರನು ಪಾಪಯುಕ್ತ ನಾಗಿದ್ದು ಮೇಷದಲ್ಲಿ ಶುಕ್ರನೂ ಲಗ್ನದಲ್ಲಿ ರವಿಯೂ ಇದ್ದರೆ ಮನೆಯಲ್ಲಿಯೇ ಸ್ತ್ರೀ ಮೂಲಕ ಮರಣ ಉಂಟಾಗುವುದೆಂದು ತಿಳಿಯತಕ್ಕದ್ದು.

**ಶೂಲೋದ್ಭಿನ್ನತನುಃಸುಖೇವನಿ ಸುತೇ ಸೂರ್ಯೇಪಿ ವಾಖೇಯಮೇ ।**
**ಸಪ್ರಕ್ಷೀಣ ಹಿಮಾಂಶುಭಿಶ್ಚ ಯುಗಪತ್ಪಾಪೈ ಸ್ತ್ರಿಕೋಣಾದ್ಯಗೈಃ ॥**
**ಬಂಧುಸ್ಥೇ ಚರವೌ ವಿಯತ್ಯವನಿಜೇ ಕ್ಷೀಣೇಂದು ಸಂವೀಕ್ಷಿತೇ ।**
**ಕಾಷ್ಠೆ ನಾಭಿಹತಃಪ್ರಯಾತಿ ಮರಣಂ ಸೂರ್ಯಾತ್ಮಜೇ ನೇಕ್ಷಿತೇ ॥ ೫ ॥**

ಲಗ್ನದಿಂದ ಚತುರ್ಥದಲ್ಲಿ ಕುಜನೂ ಅಥವಾ ರವಿಯಿದ್ದು ದಶಮದಲ್ಲಿ ಶನಿಯಿದ್ದರೆ ಶೂಲ ದಿಂದ ಮರಣವಾಗುವುದು. ಕ್ಷೀಣಚಂದ್ರನು ಪಾಪಗ್ರಹರಾದ ರವಿ, ಕುಜ, ಶನಿಗಳಿಂದ ಕೂಡಿ ಲಗ್ನ ಪಂಚಮ, ನವಮ ಸ್ಥಾನದಲ್ಲಿದ್ದರೆ ಶೂಲದಿಂದ ಮರಣವಾಗುವುದು. ಚತುರ್ಥದಲ್ಲಿ ರವಿ, ದಶಮದಲ್ಲಿ ಕುಜನಿದ್ದು ಕ್ಷೀಣಚಂದ್ರನಿಂದ ನೋಡಲ್ಪಟ್ಟರೆ ಶೂಲದಿಂದ ಮರಣವಾಗುವುದು. ಚತುರ್ಥದಲ್ಲಿ ರವಿ ದಶಮದಲ್ಲಿ ಕುಜನಿದ್ದು ಶನಿದೃಷ್ಟಿಯಿದ್ದರೆ ಕಟ್ಟಿಗೆಯ ಪೆಟ್ಟಿನಿಂದ ಮರಣವಾಗುವುದು.

**ರಂಧ್ರಾಸ್ಪದಾಂಗ ಹಿಬುಕೈರ್ಲ ಗುಡಾಹತಾಂಗಃ ।**
**ಪ್ರಕ್ಷೀಣ ಚಂದ್ರ ರುಧಿರಾರ್ಕಿ ದಿನೇಶಯುಕ್ತೈಃ ॥**
**ತೈರೇವ ಕರ್ಮ ನವಮೋದಯ ಪುತ್ರ ಸಂಸ್ಥೈ ।**
**ಧೂರ್ಮಾಗ್ನಿ ಬಂಧನ ಶರೀರ ನಿಕುಟ್ಟನಾಂತಃ ॥೬॥**

ಲಗ್ನದಿಂದ ಅಷ್ಟಮದಲ್ಲಿ ಕ್ಷೀಣಚಂದ್ರನೂ ದಶಮದಲ್ಲಿ ಕುಜನೂ ಲಗ್ನದಲ್ಲಿ ಶನಿಯೂ ಚತುರ್ಥದಲ್ಲಿ ರವಿಯೂ ಇದ್ದರೆ ದೊಣ್ಣೆ ಪೆಟ್ಟಿನಿಂದ ಮರಣವಾಗುವುದು. ಲಗ್ನದಿಂದ ದಶಮದಲ್ಲಿ ಕ್ಷೀಣಚಂದ್ರನೂ ನವಮದಲ್ಲಿ ಕುಜನೂ ಲಗ್ನದಲ್ಲಿ ಶನಿಯೂ ಪಂಚಮದಲ್ಲಿ ರವಿಯೂ ಇದ್ದರೆ ಹೊಗೆಯಿಂದ ಶ್ವಾಸಕಟ್ಟಿಯಾಗಲಿ ಬೆಂಕಿಯಿಂದಾಗಲಿ ಪೆಟ್ಟಿನ ಸಂಬಂಧದಿಂದ ಮರಣವಾಗುವುದೆಂದು ತಿಳಿಯತಕ್ಕದ್ದು.

**ಬಂಧ್ವಸ್ತ ಕರ್ಮಸಹಿತ್ಯೈಃ ಕುಜಸೂರ್ಯ ಮಂದೈ ।**
**ನಿರ್ಯಾಣ ಮಾಯುಧ ಶಿಖಿ ಕ್ಷಿತಿಪಾಲ ಕೋಪಾತ್ ॥**
**ಸೌರೇಂದು ಭೂಮಿತನಯೈಃ ಸ್ವಸುಖಾಸ್ಪದಸ್ಥೈ ।**
**ಜ್ಞೇಯಃ ಕ್ಷತಕ್ರಮಿ ಕೃತಶ್ಚ ಶರೀರ ಘಾತಃ ॥೭॥**

ಲಗ್ನದಿಂದ ಚತುರ್ಥದಲ್ಲಿ ಕುಜನೂ, ಸಪ್ತಮದಲ್ಲಿ ರವಿಯೂ, ದಶಮದಲ್ಲಿ ಶನಿಯೂ ಇದ್ದರೆ ಆಯುಧದಿಂದಾಗಲಿ ಅಗ್ನಿಮೂಲದಿಂದಾಗಲಿ ರಾಜಕೋಪದಿಂದಾಗಲಿ ಮರಣವಾಗುವುದು. ಮತ್ತು ದ್ವಿತೀಯದಲ್ಲಿ ಶನಿಯೂ ಚತುರ್ಥದಲ್ಲಿ ಚಂದ್ರನೂ, ದಶಮದಲ್ಲಿ ಕುಜನೂ ಇದ್ದರೆ ಘಾಯದಲ್ಲಿ ಕ್ರಿಮಿಗಳುಂಟಾಗಿ ಮರಣ ಉಂಟಾಗುವುದು.

**ಖಸ್ಥೇರ್ಕೇ ವನಿಜೇ ರಸಾತಲಗತೇ ಯಾನ ಪ್ರಪಾತಾದ್ವಧೋ ।**
**ಯಂತ್ರೋತ್ಪೀಡನಜಃ ಕುಜೇಸ್ತಮಯಗೇ ಸೌರೇಂದ್ವಿನಾಭ್ಯುದ್ಗಮೇ ॥**
**ವಿಣ್ಮಧ್ಯೇ ರುಧಿರಾರ್ಕಿ ಶೀತ ಕಿರಣೈರ್ಜೂಕಾಜ ಸೌರರ್ಕ್ಷಗೈ ।**
**ರ್ಯಾತೈರ್ವಾಗಲಿತೇಂದು ಸೂರ್ಯರುಧಿರೈ ರ್ವ್ಯೋಮಾಸ್ತ ಬಂಧ್ವಾಹ್ವಯಾನ್ ॥೮॥**

ಲಗ್ನದಿಂದ ದಶಮದಲ್ಲಿ ರವಿಯೂ, ಚತುರ್ಥದಲ್ಲಿ ಕುಜನೂ ಇದ್ದರೆ ವಾಹನದಿಂದ ಬಿದ್ದು ಮರಣ ವಾಗುವುದು ಶನಿ, ಚಂದ್ರ, ಸೂರ್ಯರು ಲಗ್ನದಲ್ಲಿದ್ದು ಕುಜನು ಸಪ್ತಮದಲ್ಲಿದ್ದರೆ ಯಂತ್ರದ ಅಪಘಾತದಿಂದ ಮರಣವಾಗುವುದು. ತುಲೆಯಲ್ಲಿ ಕುಜನೂ, ಮೇಷದಲ್ಲಿ ಶನಿಯೂ, ಮಕರ ಅಥವಾ ಕುಂಭದಲ್ಲಿ ಚಂದ್ರನಿದ್ದರೆ ಮಲಮೂತ್ರಾದಿ ದುರ್ಗಂಧದಲ್ಲಿ ಬಿದ್ದು ಮರಣವಾಗುವುದು. ದಶಮ ದಲ್ಲಿ ಕ್ಷೀಣ ಚಂದ್ರನೂ, ಸಪ್ತಮದಲ್ಲಿ ರವಿಯೂ, ಚತುರ್ಥದಲ್ಲಿ ಕುಜನೂ ಇದ್ದರೆ ಮಲಮೂತ್ರಾದಿ ಗಳಲ್ಲಿ ಬಿದ್ದು ಮರಣವಾಗುವುದು.

**ವೀರ್ಯಾನ್ವಿತ ವಕ್ರವೀಕ್ಷಿತೇ ।**
**ಕ್ಷೀಣೇಂದೌ ನಿಧನ ಸ್ಥಿತೇರ್ಕಜೇ ॥**

ಗುಹ್ಯೋದ್ಭವ ರೋಗಪೀಡಯಾ ಮೃತ್ಯುಃ ।
ಸ್ಯಾತ್ಕೃಮಿ ಶಸ್ತ್ರದಾಹಜಃ ॥೯॥

ಕ್ಷೀಣಚಂದ್ರನ ಮೇಲೆ ಬಲಯುಕ್ತವಾದ ಕುಜನ ದೃಷ್ಟಿಯಿದ್ದು, ಅಷ್ಟಮದಲ್ಲಿ ಶನಿಯಿದ್ದರೆ ಗುಹ್ಯಸ್ಥಾನದಲ್ಲಿ ಹುಟ್ಟಿದ ರೋಗ (ಭಗಂದರ, ಮೂಲವ್ಯಾಧಿ ಇತ್ಯಾದಿ)ದಿಂದ ಕ್ರಿಮಿ, ಶಸ್ತ್ರ, ಅಗ್ನಿ, ಮೂಲಕವಾಗಿ ಮರಣವೆಂದು ತಿಳಿಯತಕ್ಕದ್ದು.

ಅಸ್ತೇರವೌ ಸರುಧಿರೇ ನಿಧನೇರ್ಕ ಪುತ್ರೇ ।
ಕ್ಷೀಣೇ ರಸಾತಲಗತೇ ಹಿಮಗೌ ಖಗಾಂತಃ ॥
ಲಗ್ನಾತ್ಮಜಾಷ್ಟ ಮತಪ ಸ್ವಿನಭೌಮ ಮಂದ ।
ಚಂದ್ರೈಸ್ತು ಶೈಲಶಿಖರಾ ಶನಿಕುಡ್ಯ ಪಾತೈಃ ॥೧೦॥

ಲಗ್ನದಿಂದ ಸಪ್ತಮದಲ್ಲಿ ರವಿ, ಕುಜರೂ, ಅಷ್ಟಮದಲ್ಲಿ ಶನಿಯೂ, ಚತುರ್ಥದಲ್ಲಿ ಕ್ಷೀಣ ಚಂದ್ರನೂ ಇದ್ದರೆ ಪಕ್ಷಿಮೂಲಕವಾಗಿ ಮರಣವಾಗುವುದು (ಅಗ್ನಿಸಂಸ್ಕಾರವಾಗಲಿಕ್ಕಿಲ್ಲ). ಲಗ್ನದಲ್ಲಿ ರವಿಯೂ, ಪಂಚಮದಲ್ಲಿ ಕುಜನೂ, ಅಷ್ಟಮದಲ್ಲಿ ಶನಿಯೂ, ನವಮದಲ್ಲಿ ಚಂದ್ರನೂ ಇದ್ದರೆ ಪರ್ವತ ಶಿಖರದಿಂದಾಗಿ ಗೋಡೆ ಬೀಳುವುದರಿಂದಾಗಿ ಸಿಡಿಲು ಅಥವಾ ವಿದ್ಯುತ್ ಪಾತದಿಂದಾಗಲಿ ಮರಣವಾಗುವುದು.

ದ್ವಾವಿಂಶಃ ಕಥಿತಸ್ತು ಕಾರಣಂ ।
ದ್ರೇಕ್ಕಾಣೋ ನಿಧನಸ್ಯ ಸೂರಿಭಿಃ ॥
ತಸ್ಯಾಧಿಪತಿರ್ಭವೋ ಪಿವಾ ।
ನಿರ್ಯಾಣಂ ಸ್ವಗುಣೈಃ ಪ್ರಯಚ್ಛತಿ ॥೧೧॥

ಜನ್ಮಕಾಲದಲ್ಲಿ ಲಗ್ನಕ್ಕೆ ಯಾವ ದ್ರೇಕ್ಕಾಣ ಬರುವುದೋ ಅದಕ್ಕೆ ಇಪ್ಪತ್ತೆರಡನೇ ದ್ರೇಕ್ಕಾಣವು ಮೃತ್ಯುವಿಗೆ ಕಾರಣವಾಗುವುದೆಂದು ವಿದ್ವಾಂಸರಿಂದ ಹೇಳಲ್ಪಟ್ಟಿದೆ. ಆ ಇಪ್ಪತ್ತೆರಡನೇ ದ್ರೇಕ್ಕಾಣಾಧಿಪತಿ ಅಥವಾ ಅಷ್ಟಮ ರಾಶ್ಯಾಧಿಪತಿ ಇವರಲ್ಲಿ ಯಾರು ಬಲವಂತರಾಗಿರುವರೋ ಆ ಗ್ರಹಕ್ಕೆ ಹೇಳಿದ "ಅಗ್ನ್ಯೇದ್ವಾಯುಧ" ಇತ್ಯಾದಿ ಹೇತುಗಳಿಂದ ಮರಣವುಂಟಾಗುವುದೆಂದು ತಿಳಿಯತಕ್ಕದ್ದು.

ಹೋರಾನವಾಂ ಶಕಪ್ರಯುಕ್ತ ಸಮಾನ ಭೂಮೌ ।
ಯೋಗೇ ಕ್ಷಣಾದಿ ಭಿರತಃ ಪರಿಕಲ್ಪ್ಯ ಮೇತತ್ ॥
ಮೋಹಸ್ತು ಮೃತ್ಯು ಸಮಯೇ ನುದಿತಾಂಶ ತುಲ್ಯಃ ।
ಸ್ವೇಶೇಕ್ಷಿತೇ ದ್ವಿಗುಣಿತ ಸ್ತ್ರಿಗುಣಃ ಶುಭೈಶ್ಚ ॥೧೨॥

ಜನ್ಮಲಗ್ನದಲ್ಲಿ ಉದಯವಾದ ನವಾಂಶಧಿಪತಿಯು ಇದ್ದ ರಾಶಿಗೆ ಸಮಾನವಾಗಿ ಸಂಚಾರ ಯೋಗ್ಯವಾದ ಭೂಪ್ರದೇಶದಲ್ಲಿ ಮರಣವಾಗುವುದು. ಲಗ್ನನವಾಂಶಾಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶಿಯಲ್ಲಿ ಮತ್ತೊಂದು ಗ್ರಹವಿದ್ದರೆ ಅಥವಾ ಬೇರೆ ಗ್ರಹದ ದೃಷ್ಟಿಯಿದ್ದರೆ ಈ ಗ್ರಹಗಳಲ್ಲಿ ಬಲಾಧಿಕ್ಯವಾದ ಗ್ರಹಕ್ಕೆ ಹೇಳಿರುವ ಭೂಮಿಯಲ್ಲಿ ಮರಣವಾಗುವುದೆಂದು ತಿಳಿಯತಕ್ಕದ್ದು. ಜನ್ಮಲಗ್ನದಲ್ಲಿ ಶೇಷ ನವಾಂಶೆಯ ಕಾಲವನ್ನು ಕೂಡಿಸಿದರೆ ಆಗುವ ಘಟಿ ವಿಘಟಿಗಳಷ್ಟು ಕಾಲವು ಮರಣ ಸಮಯದಲ್ಲಿ ಶರೀರಜ್ಞಾನವಿಲ್ಲದೆ ಹೋಗುವುದು. ಲಗ್ನಾಧಿಪತಿ ಲಗ್ನ ನೋಡಿದರೆ ಎರಡರಿಂದಲೂ ಶುಭಗ್ರಹರ ದೃಷ್ಟಿಯಿದ್ದರೆ ಮೂರರಿಂದಲೂ ಲಗ್ನಾಧಿಪತಿ ನೋಡಿ ಶುಭಗ್ರಹರ ದೃಷ್ಟಿ ಹೀಗೆ ಎರಡೂ ಇದ್ದರೆ ಆರರಿಂದಲೂ (ಆ ಲಗ್ನದ ಶೇಷಕಾಲವನ್ನು) ಗುಣಿಸಿ ಎಷ್ಟು ಕಾಲ ಬರುವುದೋ ಅಷ್ಟು ಸಮಯದವರೆಗೆ ಮರಣಕಾಲದಲ್ಲಿ ಸ್ಮೃತಿ ತಪ್ಪಿ ಹೋಗುವುದೆಂದು ತಿಳಿಯತಕ್ಕದ್ದು.

ವಿ. ಸೂ. ಈ ಹಿಂದೆ ಹೇಳಿದ ಆಯುರ್ದಾಯ ಗಣಿತದಿಂದ ಆಯುಸ್ಸಿನ ಅವಸಾನ ಕಾಲವೂ ಮೇಲೆ ಹೇಳಿದ ಮೃತ್ಯುಕಾರಕ ಗ್ರಹರ ದಶಾಭುಕ್ತಿಗಳ ಕಾಲವೂ ಪರಸ್ಪರ ವಿರೋಧವಾಗುವುದಾದರೆ ಬಹಳ ವಿಚಾರ ಮಾಡಿ ಹೇಳ ತಕ್ಕದ್ದು. ಲಗ್ನ ಮತ್ತು ನವಾಂಶಾಧಿಪತಿ ರಾಶಿಗಳಿಗೆ "ಮತ್ಸ್ಯೌಘಟೀನೃಮಿಧುನಂ" ಎಂಬಂತೆ ರಾಶಿಗಳ ಸಂಚಾರ ಭೂಮಿ ಎಂತಲೂ "ದೇವಾಂಬ್ವಗ್ನಿ ವಿಹಾರ" ಎಂಬಂತೆ ಗ್ರಹರ ಸಂಚಾರ ಭೂಮಿ ಎಂತಲೂ ತಿಳಿಯತಕ್ಕದ್ದು. ಯಾವ ಗ್ರಹರಿಗಾದರೂ ರಾಶಿದ್ವಯಾಧಿಪತ್ಯವಿದ್ದಲ್ಲಿ ಆ ಗ್ರಹರ ಮೂಲತ್ರಿಕೋಣ ರಾಶಿಗೆ ಸಮಾನವಾದ ಭೂಮಿ ಎಂತಲೂ ಇವುಗಳಲ್ಲಿ ಬಲಾಧಿಕ್ಯವಾಗಿರುವ ಪ್ರದೇಶದಲ್ಲಿ ಮರಣವಾಗುವುದೆಂತಲೂ ತಿಳಿಯತಕ್ಕದ್ದು

ದಹನ ಜಲವಿಮಿಶ್ರೈರ್ಭಸ್ಮ ಸಂಕ್ಲೇದ ಶೋಷೈ ।
ರ್ನಿಧನ ಭವನ ಸಂಸ್ಥೈ ರ್ವ್ಯಾಲವರ್ಗೈರ್ವಿಡಂಬಃ ॥
ಇತಿ ಶವ ಪರಿಣಾಮಶ್ಚಿಂತನೀಯೋ ಯಥೋಕ್ತ: ।
ಪೃಥು ವಿರಚಿತ ಶಾಸ್ತ್ರಾದ್ಗತ್ಯನೂ ಕಾದಿ ಚಿಂತ್ಯಂ ॥೧೩॥

ಲಗ್ನಕ್ಕೆ ಅಷ್ಟಮ ರಾಶಿಯಲ್ಲಿರುವ ಇಪ್ಪತ್ತೆರಡನೆ ದ್ರೇಕ್ಕಾಣ (ಪಾಪಗ್ರಹರದ್ರೇಕ್ಕಾಣ)ವಾಗಿದ್ದರೆ ಸತ್ತವನ ಶರೀರವು ಅಗ್ನಿಯಿಂದ ಸುಡಲ್ಪಡುವುದು. ಜಲದ್ರೇಕ್ಕಾಣ (ಶುಭಗ್ರಹ ದ್ರೇಕ್ಕಾಣ)ವಾಗಿದ್ದರೆ ಸತ್ತವನ ಶರೀರವು ನೀರಿನಲ್ಲಿ ಕೊಳೆತು ಹೋಗುವುದು. (ಮಿಶ್ರದ್ರೇಕ್ಕಾಣ) ಅಂದರೆ ಶುಭಗ್ರಹ ದ್ರೇಕ್ಕಾಣವ್ಯಾಗಿ ಆ ದ್ರೇಕ್ಕಾಣದಲ್ಲಿ ಪಾಪಗ್ರಹವಿದ್ದರೂ, ಪಾಪಗ್ರಹ ದ್ರೇಕ್ಕಾಣಕ್ಕಾಗಿ ಆ ದ್ರೇಕ್ಕಾಣದಲ್ಲಿ ಶುಭಗ್ರಹವಿದ್ದರೂ ಆಗುವುದು ಹಾಗೆ, ಮಿಶ್ರದ್ರೇಕ್ಕಾಣವಾಗಿದ್ದರೆ ಸತ್ತವನನ್ನು ಭೂಮಿಯಲ್ಲಿ ಹುಗಿದು ಅಥವಾ ಹಾಗೆಯೇ ಒಣಗಿಹೋಗುವುದು. ಸರ್ಪದ್ರೇಕ್ಕಾಣವಾಗಿದ್ದರೆ ನಾಯಿ, ನರಿ, ಹದ್ದು, ಕಾಗೆಗಳಿಂದ ಸತ್ತವನ ದೇಹವು ತಿನ್ನಲ್ಪಡುವುದೆಂದು ಹೇಳತಕ್ಕದ್ದು. ಪೃಥುಯರಿಂದ ರಚಿಸಲ್ಪಟ್ಟ ಶಾಸ್ತ್ರದಿಂದ ಮೃತಕನ ಲೋಕಾಂತರ ಪ್ರಾಪ್ತಿಯನ್ನು ಮುಂದಿನ ಜನ್ಮ ಅಥವಾ ಪೂರ್ವ ಜನ್ಮಸ್ಥಿತಿ ಮೊದಲಾದ ವಿಷಯಗಳನ್ನು ತಿಳಿಯತಕ್ಕದ್ದು.

ಗುರು ರುಡುಪತಿ ಶುಕ್ರೌ ಸೂರ್ಯಭೌಮೌಯಮಜ್ಞೌ ।
ವಿಬುಧ ಪಿತೃತಿರಶ್ಚೋ ನಾರಕೀಯಾಂಶ್ಚ ಕುರ್ಯು: ॥
ದಿನಕರ ಶಶಿವೀರ್ಯಾಧಿಷ್ಠಿ ತತ್ರ್ಯಂಶನಾಥಾ ।
ತ್ಪ್ರವರ ಸಮನಿಕೃಷ್ಟಾಸ್ತುಂಗ ಹ್ರಾಸಾದನೂಕೇ ॥೧೪॥

ಜನ್ಮಕಾಲದ ಸೂರ್ಯ ಚಂದ್ರರಲ್ಲಿ ಯಾರು ಬಲಿಷ್ಠರಾಗಿರುವರೋ ಅವರಲ್ಲಿ ಬಲವಂತರಾದ ಗ್ರಹವಿರುವ ದ್ರೇಕ್ಕಾಣಾಧಿಪತಿ ಯಾವ ಗ್ರಹವೋ ಆ ಗ್ರಹಕ್ಕೆ ಹೇಳಿದ ಲೋಕ ಅಂದರೆ ಗುರು ಎಂದರೆ ದೇವಲೋಕದಿಂದಲೂ ಚಂದ್ರ ಅಥವಾ ಶುಕ್ರನಾದರೆ ಪಿತೃಲೋಕದಿಂದಲೂ ರವಿ ಕುಜರಲ್ಲೊಬ್ಬರಾದರೆ ತಿರ್ಯಗ್‌ಲೋಕದಿಂದಲೂ ಶನಿ ಬುಧರಾದರೆ ನರಲೋಕದಿಂದಲೂ ಬಂದು ಹುಟ್ಟಿದ್ದಾನೆಂತ ತಿಳಿಯತಕ್ಕದ್ದು. ಆಯಾಯ ಲೋಕವೆಂದು ಹೇಳಲ್ಪಟ್ಟ ಗ್ರಹವು ಉಚ್ಚ ಮಧ್ಯ ನೀಚ ಸ್ಥಿತಿ ಪ್ರಕಾರ ಉತ್ತಮ ಮಧ್ಯಮ ಹೀನಸ್ಥಿತಿಯಲ್ಲಿ ಪೂರ್ವಜನ್ಮದಲ್ಲಿದ್ದನೆಂದು ತಿಳಿಯತಕ್ಕದ್ದು.

ಗತಿರಪಿ ರಿಪುರಂಧ್ರತ್ರ್ಯಂಶ ಪೋಸ್ತ ಸ್ಥಿತೋವಾ ।
ಗುರುರಥ ರಿಪುಕೇಂದ್ರ ಚ್ಛಿದ್ರಗಃ ಸ್ವೋಚ್ಚ ಸಂಸ್ಥಃ ॥
ಉದಯತಿ ಭವನೇಂತ್ಯೇ ಸೌಮ್ಯಭಾಗೇ ಚ ಮೋಕ್ಷೋ ।
ಭವತಿ ಯದಿ ಬಲೇನ ಪ್ರೋಜ್ಝಿತಾಸ್ತತ್ರ ಶೇಷಾಃ ॥೧೫॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ನೈರ್ಯಾಣಿಕ ವಿಚಾರ ನಿರೂಪಣಂ ನಾಮ ತ್ರಯೋವಿಂಶೋಧ್ಯಾಯಃ ॥

ಜನ್ಮಕಾಲದ ಲಗ್ನದಿಂದ ಷಷ್ಠ, ಸಪ್ತಮ, ಅಷ್ಟಮ ಸ್ಥಾನಗಳಲ್ಲಿ ಗ್ರಹಗಳಿಲ್ಲದಿದ್ದರೆ ಷಷ್ಠಾಷ್ಟಮ ಭಾವಾದಿಗಳು ಯಾವ ದ್ರೇಕ್ಕಾಣದಲ್ಲಿದ್ದಾರೆಯೋ ಆ ಎರಡು ದ್ರೇಕ್ಕಾಣಾಧಿಪತಿಗಳಲ್ಲಿ ಯಾರು ಬಲವಂತರಾಗಿರುವನೋ ಆ ಗ್ರಹಕ್ಕೆ ಹೇಳಿರುವ ಲೋಕಕ್ಕೆ ಮರಣ ಹೊಂದಿದವನು ಹೋಗುವನೆಂದು ಹೇಳತಕ್ಕದ್ದು. ಷಷ್ಠ ಅಷ್ಟಮ ಅಥವಾ ಕೇಂದ್ರ ೧—೪—೭—೧೦ನೇ ಸ್ಥಾನಗಳಲ್ಲಿ ಗುರುವು ತನ್ನ ಉಚ್ಚ ಸ್ಥಾನದಲ್ಲಿದ್ದರೆ ಮೋಕ್ಷವಾಗುವುದೆಂದು ಹೇಳತಕ್ಕದ್ದು. ಮೀನಲಗ್ನವಾಗಿ ಶುಭಗ್ರಹ ನವಾಂಶದಲ್ಲಿ ಗುರುವಿದ್ದು ಉಳಿದ ಗ್ರಹರು ಬಲಹೀನವಾಗಿದ್ದರೆ ಮೋಕ್ಷವಾಗುವುದೆಂದು ಹೇಳತಕ್ಕದ್ದು. ಜನ್ಮಕಾಲ ಲಗ್ನದಿಂದ ಫಲಗಳನ್ನು ಹೇಳುವಂತೆ ಮರಣಕಾಲ ಲಗ್ನದಿಂದ ಮುಂದಿನ ಗತಿಯನ್ನೂ ಪುನರ್ಜನ್ಮಾದಿ ಫಲಗಳನ್ನು ಹೇಳತಕ್ಕದ್ದು.

॥ ನೈರ್ಯಾಣಿಕ ವಿಚಾರವೆಂಬ ಇಪ್ಪತ್ತಮೂರನೇಯ ಅಧ್ಯಾಯವು ॥

## ॥ ನಷ್ಟಜಾತಕಾಧ್ಯಾಯಃ ॥

ಆಧಾನ ಜನ್ಮಾಪರಿ ಬೋಧಕಾಲೇ ।
ಸಂಪೃಚ್ಛತಾಂ ಜನ್ಮವದೇ ದ್ವಿಲಗ್ನಾತ್ ॥
ಪೂರ್ವಾಪರಾರ್ಧೇ ಭವನಸ್ಯ ವಿಂದ್ಯಾ।
ದ್ಭಾನಾವುದಗ್ದಕ್ಷಿಣಗೇ ಪ್ರಸೂತಿಮ್ ॥೧॥

ಆಧಾನಲಗ್ನವೂ ಜನ್ಮಲಗ್ನವೂ ಗೊತ್ತಿಲ್ಲದೆ ಬಂದವರಿಗೆ "ತತ್ಕಾಲ ಮಿಂದು ಸಹಿತ" ಎಂಬಂತೆ ಜನನಕಾಲ ಜ್ಞಾನವನ್ನು ಹಿಂದೆ ನಿರೂಪಿಸಲಾಗಿದೆ ಹಾಗೆಯೇ ತತ್ಕಾಲಲಗ್ನದಿಂದ ಅವರ ಜನ್ಮವನ್ನು ಹೇಳಬೇಕು. ಆ ಕಾಲದ ಲಗ್ನವು (ರಾಶಿಯ ಪ್ರಥಮ ಹೋರಾ) ಪೂರ್ವಾರ್ಧದಲ್ಲಿದ್ದರೆ ಆತನ ಜನನವು ಉತ್ತರಾಯಣದಲ್ಲಿ ಎಂದೂ, ಲಗ್ನವು ಪರಾರ್ಧದಲ್ಲಿದ್ದರೆ (ದ್ವಿತೀಯ ಹೋರಾ) ಜನನವೂ ದಕ್ಷಿಣಾಯನದಲ್ಲಿ ಎಂದೂ ತಿಳಿಯಬೇಕು.

ಲಗ್ನ ತ್ರಿಕೋಣೇಷು ಗುರುತ್ರಿಭಾಗೈ ।
ರ್ವಿಕಲ್ಪ್ಯವರ್ಷಾಣಿ ವಯೋನು ಮಾನಾತ್ ॥
ಗ್ರೀಷ್ಮೋರ್ಕ ಲಗ್ನೇ ಕಥಿತಸ್ತು ಶೇಷೈ ।
ರನ್ಯಾಯನರ್ತಾ ವೃತುರರ್ಕ ಚಾರಾತ್ ॥೨॥

ತತ್ಕಾಲ ಪ್ರಶ್ನಲಗ್ನವು ಆದಿ ದ್ರೇಕ್ಕಾಣದಲ್ಲಾದರೆ ಈ ಲಗ್ನರಾಶಿಯಲ್ಲಿಯೇ ಗುರು ಇದ್ದಾಗ ಜನನವೆಂದು ಹೇಳಬೇಕು. ಪ್ರಶ್ನಲಗ್ನವು ದ್ವಿತೀಯ ದ್ರೇಕ್ಕಾಣವಾದರೆ ಆ ರಾಶಿಯ ಪಂಚಮದಲ್ಲಿ ಗುರುವಿದ್ದಾಗ ಆತನ ಜನನವೆಂದೂ, ಲಗ್ನವು ತೃತೀಯ ದ್ರೇಕ್ಕಾಣವಾದರೆ ಆ ರಾಶಿಯ ನವಮದಲ್ಲಿ ಗುರುವಿದ್ದಾಗ ಜನನವೆಂದೂ ಹೇಳಬೇಕು. ಆತನ ವಯಸ್ಸಿನ ಪರಿಣಾಮವನ್ನು ಈಗ ಅನುಮಾನ ಪ್ರಮಾಣದಿಂದ ನಿಶ್ಚೈಸಿ ಎಷ್ಟು ವರ್ಷಗಳ ಹಿಂದಿನ ಗುರುವಿನ ಸಂಚಾರ ಕ್ರಮವನ್ನು ನಾವು ತೆಗೆದುಕೊಳ್ಳಬೇಕೆಂಬುದನ್ನು ಊಹಿಸಬೇಕು. ಪ್ರಶ್ನಲಗ್ನದಲ್ಲಿ ಸೂರ್ಯನಿದ್ದರೆ ಜನನವು ಗ್ರೀಷ್ಮ ಋತುವಿನಲ್ಲೆಂದೂ, ಮಿಕ್ಕ ಗ್ರಹರಿದ್ದಲ್ಲಿ ಆ ಗ್ರಹರಿಗೆ ಸಂಜ್ಞಾಧ್ಯಾಯದಲ್ಲಿ ಹೇಳಿದ ಋತುವಿನಲ್ಲಿ ಜನನವೆಂದು ಗ್ರಹಿಸಬೇಕು. ಹೀಗೆ ಊಹಿಸುವಾಗ ಅಯನವು ಒಂದಾಗಿ ಋತುವು ಅದಕ್ಕೆ ಸಂಬಂಧಿಸದೆ ಬೇರೆಯಾಗಿ ಬಂದಲ್ಲಿ ಹೇಗೆ ಮಾಡಬೇಕು?

ಚಂದ್ರಜ್ಞ ಜೀವಾ ಪರಿಕಲ್ಪನೀಯಾ ।
ಶುಕ್ರಾರ ಮಂದೈ ರಯನೇ ವಿಲೋಮೇ ॥
ದ್ರೇಕ್ಕಾಣ ಭಾಗೇ ಪ್ರಥಮೇತು ಪೂರ್ವೋ ।
ಮಾಸೋನು ಪಾತಾಚ್ಚ ತಿಥಿ ರ್ವಿಕಲ್ಪ್ಯಃ ॥೩॥

ಅಯನವು ಋತುವು ಅಸಂಬದ್ಧವಾಗಿ ಬಂದರೆ ಶುಕ್ರ, ಕುಜ, ಶನಿ, ಇವರ ಋತುಗಳಿಗೆ ಬದಲಾಗಿ ಕ್ರಮವಾಗಿ ಚಂದ್ರ, ಬುಧ, ಗುರು, ಇವರ ಋತುಗಳನ್ನು ತೆಗೆದುಕೊಳ್ಳಬೇಕು. ಹೀಗೆ ಋತುವನ್ನು ನಿರ್ಣೈಸಿಕೊಂಡು ಜನನವು ಲಗ್ನದ್ರೇಕ್ಕಾಣದ ಪೂರ್ವವಾಗಿದ್ದರೆ ನಾವು ನಿರ್ಣಯಿಸಿಕೊಂಡ ಋತುವಿನ ಮೊದಲಿನ ಮಾಸವನ್ನೂ ಅದು ಪರಾರ್ಧವಾಗಿದ್ದರೆ ಆ ಋತುವಿನ ಎರಡನೆ ಮಾಸವನ್ನೂ ಜನನದ ತಿಂಗಳಾಗಿ ತಿಳಿಯುವುದು. ಹೀಗೆ ಚೈತ್ರಾದಿ ತಿಂಗಳುಗಳು ಬಂದ ಮೇಲೆ ಚೈತ್ರಕ್ಕೆ ಮೀನ, ವೈಶಾಖಕ್ಕೆ ಮೇಷ, ಜ್ಯೇಷ್ಠಕ್ಕೆ ವೃಷಭ ಹೀಗೆ ಸೌರಮಾನದ ತಿಂಗಳುಗಳನ್ನೂ ಊಹಿಸಬೇಕು. ಇಲ್ಲಿ ಜನ್ಮತಿಥಿಯನ್ನು ನಿರ್ಣೈಸುವುದು ಹೇಗೆಂದರೆ ದ್ರೇಕ್ಕಾಣದ ಒಂದು ಭಾಗವನ್ನು ಎಂದರೆ ೫ ಗಳಿಗೆಗಳನ್ನು ನಾವು ಮಾಸ ನಿರ್ಣಯಕ್ಕೆ ತೆಗೆದುಕೊಂಡಿದ್ದೇವೆ. ಈ ೫ ಗಳಿಗೆಗಳನ್ನು ೩೦ ಭಾಗಗಳನ್ನಾಗಿ ಮಾಡಿಕೊಳ್ಳಬೇಕು. ಒಂದು ಭಾಗಕ್ಕೆ $\frac{೧}{೬}$ ಗಳಿಗೆಗಳಾಯಿತು. ಜನನವು ಹೀಗೆ ಎಷ್ಟನೆಯ ಗಳಿಗೆಯಲ್ಲಿ ಎಂಬುದನ್ನು ನೋಡಿಕೊಂಡು ಅಷ್ಟನೇ ತಿಥಿಯಲ್ಲಿ ಜನನವೆಂದು ಹೇಳಬೇಕು

**ಅತ್ರಾಪಿ ಹೋರಾ ಪಟವೋ ದ್ವಿಜೇಂದ್ರಾಃ ।**
**ಸೂರ್ಯಾಂಶ ತುಲ್ಯಾಂ ತಿಥಿ ಮುದ್ದಿಶಂತಿ ॥**
**ರಾತ್ರಿ ದ್ಯುಸಂಜ್ಞೇಷು ವಿಲೋಮ ಜನ್ಮ ।**
**ಭಾಗೈಶ್ಚ ವೇಲಾಃ ಕ್ರಮಶೋ ವಿಕಲ್ಪ್ಯಾಃ ॥೪॥**

ತತ್ಕಾಲ ಸೂರ್ಯಸ್ಫುಟದಲ್ಲಿ ಆ ರಾಶಿಯ ಎಷ್ಟು ಭಾಗವು ಕಳೆದಿವೆಯೋ ಆ ಭಾಗ ಸಂಖ್ಯೆಗನು ಗುಣವಾಗಿ ತಿಥಿಯನ್ನು ಹೇಳಬೇಕೆಂದು ಹೋರಾಪಟು ಮುನಿಗಳಿಂದ ಹೇಳಲ್ಪಟ್ಟ ಮತಾಂತರವಿದೆ. ಪ್ರಶ್ನಲಗ್ನವು ರಾತ್ರಿರಾಶಿಯಾಗಿದ್ದರೆ ಹಗಲು ಜನನವೆಂದೂ (ಹಗಲು) ದಿವಾರಾಶಿಯಾಗಿದ್ದರೆ ರಾತ್ರಿ ಜನನವೆಂದೂ ಹೇಳಬೇಕು. ಸಂದ ಭಾಗಗಳಿಂದ ನಾವು ತಿಥಿಯನ್ನು ನಿರ್ಣಯಿಸಿದ್ದೇವಷ್ಟೆ. ಆ ಕೊನೆಯ ಭಾಗದ ಮುಂದೆ ಭಿನ್ನಾಂಶವು ಎಷ್ಟು ಉಳಿಯುವುದೋ ಆ ಗಳಿಗೆ ವಿಗಳಿಗೆಗಳನ್ನು ರಾತ್ರಿ ಪ್ರಮಾಣದಿಂದ ಗುಣಿಸಿ ದಿವಾ ಪ್ರಮಾಣದಿಂದ ಭಾಗಿಸಿದರೆ ಹಗಲಿನ ಗಳಿಗೆಯೂ ದಿವಾ ಪ್ರಮಾಣದಿಂದ ಗುಣಿಸಿ ರಾತ್ರಿ ಪ್ರಮಾಣದಿಂದ ಭಾಗಿಸಿದರೆ ರಾತ್ರಿಯಲ್ಲಿ ಗಳಿಗೆಯೂ ಸಿಗುವುದು. ಎಂದರೆ ಹಗಲು ಜನನವಾಗಿದ್ದರೆ ಎಷ್ಟು ಗಳಿಗೆಯಲ್ಲಿ? ಅಥವಾ ರಾತ್ರಿ ಜನನವಾಗಿದ್ದರೆ ಎಷ್ಟು ಗಳಿಗೆಯಲ್ಲಿ? ಎಂಬ ಈ ವಿಷಯವನ್ನು ಮೇಲಿನ ಕ್ರಮದಂತೆ ಮಾಡಿ ಊಹಿಸಿಕೊಳ್ಳಬಹುದು.

**ಕೇಚಿಚ್ಚ ಶಾಂಕಾಧ್ಯುಷಿತಾನ್ನವಾಂಶಾ ।**
**ಚ್ಛುಕ್ಲಾಂತ ಸಂಜ್ಞಂ ಕಥಯಂತಿ ಮಾಸಮ್ ॥**
**ಲಗ್ನ ತ್ರಿಕೋಣೋತ್ತಮ ವೀರ್ಯಯುಕ್ತಂ ।**
**ಸಂಪ್ರೋಚ್ಯತೇಂಗಾ ಲಭನಾದಿಭಿರ್ವಾ ॥೫॥**

ತತ್ಕಾಲದಲ್ಲಿ ಚಂದ್ರನಿರುವ ರಾಶಿಯ ನವಾಂಶಕ್ಕೆ ಯಾವ ನಕ್ಷತ್ರವು ಸಲುವುದೋ ಆ ನಕ್ಷತ್ರವು ಸೇರುವ ಹುಣ್ಣಿಮೆಯ ತಿಂಗಳನ್ನೇ ಜನ್ಮಮಾಸವನ್ನಾಗಿ ಕೆಲವರು ಹೇಳುತ್ತಾರೆ. ಹನ್ನೆರಡು

ಪೂರ್ಣಿಮೆಗಳಲ್ಲಿಯೂ ಚಂದ್ರನು ಒಂದೊಂದು ನಕ್ಷತ್ರದ ಸಮೀಪದಲ್ಲಿರುತ್ತಾನೆ ಆದ್ದರಿಂದಲೇ ಆ ಮಾಸಕ್ಕೆ ಆ ನಕ್ಷತ್ರ ಸಂಬಂಧವಾದ ಹೆಸರನ್ನು ಕೊಟ್ಟಿರುತ್ತಾರೆ. ಅಂದರೆ ಚಿತ್ರಾ ನಕ್ಷತ್ರದಲ್ಲಿ ಹುಣ್ಣಿಮೆಯ ಸಮೀಪ ಚಂದ್ರನಿರುವ ತಿಂಗಳು ಚೈತ್ರಮಾಸ ಹೀಗೆಯೇ ವೈಶಾಖಾದಿ ಮಾಸಗಳಿಗೂ ತಿಳಿಯಬೇಕು. ಹೇಗೆಂದರೆ ಚೈತ್ರಮಾಸಕ್ಕೆ—ಚಿತ್ರಾ, ಸ್ವಾತಿ ನಕ್ಷತ್ರಗಳು, ವೈಶಾಖಕ್ಕೆ—ವಿಶಾಖೆ, ಅನುರಾಧೆಗಳೂ, ಜ್ಯೇಷ್ಠಕ್ಕೆ—ಜ್ಯೇಷ್ಠಾ, ಮೂಲಗಳೂ, ಆಷಾಢಕ್ಕೆ—ಪೂರ್ವಾಷಾಢಾ, ಉತ್ತರಾಷಾಢಾಗಳೂ, ಶ್ರಾವಣಕ್ಕೆ—ಶ್ರವಣ, ಧನಿಷ್ಠೆಗಳೂ, ಭಾದ್ರಪದಕ್ಕೆ—ಶತತಾರ, ಪೂರ್ವಾಭಾದ್ರಾ, ಉತ್ತ್ರಾಭಾದ್ರಗಳೂ, ಆಶ್ವಯುಜಕ್ಕೆ—ರೇವತಿ, ಅಶ್ವಿನಿ, ಭರಣಿಗಳೂ, ಕಾರ್ತಿಕಕ್ಕೆ—ಕೃತ್ತಿಕಾ, ರೋಹಿಣಿಗಳೂ, ಮಾರ್ಗಶಿರಕ್ಕೆ—ಮೃಗಶಿರಾ, ಆರ್ದ್ರೆಗಳೂ, ಪುಷ್ಯಮಾಸಕ್ಕೆ ಪುನರ್ವಸು, ಪುಷ್ಯಗಳೂ, ಮಾಘಕ್ಕೆ—ಆಶ್ಲೇಷಾ, ಮಘಗಳೂ, ಫಾಲ್ಗುಣಕ್ಕೆ—ಹುಬ್ಬಾ, ಉತ್ತರೆ ಹಸ್ತಗಳೂ—ಹೀಗೆ ನಕ್ಷತ್ರಗಳನ್ನು ತಿಳಿದುಕೊಂಡು ಮಾಸವನ್ನು ನಿರ್ಣಯಿಸಬೇಕು. ಆಗ ಪಂಚಮ ನವಮಗಳಲ್ಲಿ ಯಾವ ರಾಶಿಯು ಬಲಿಷ್ಠವಾದುದೋ ಆ ರಾಶಿಯಲ್ಲಾದರೂ ಜನನವನ್ನು ಹೇಳಬೇಕು. ಅಂಗ ಸ್ಪರ್ಶಾದಿಗಳಿಂದ "ಕಾಲಾಂಗಾನಿ ವರಾಂಗ" ಎಂಬಂತೆ ಪ್ರಚ್ಛಕನು ಯಾವ ರಾಶಿಯ ಅಂಗವನ್ನು ಸ್ಪರ್ಶ ಮಾಡಿರುವನೋ ಆ ರಾಶಿಯಿಂದ ಚಂದ್ರನಿರುವ ರಾಶಿಯನ್ನೂ "ಸ್ಪರ್ಶೆಮಾರ್ಧನಿ ಕೃತ್ತಿಕಾ" ಎಂಬಂತೆ ಜನ್ಮ ನಕ್ಷತ್ರವನ್ನೂ ತಿಳಿದುಕೊಳ್ಳಬಹುದು

**ಯಾವಾನ್‌ಗತಃ ಶೀತಕರೋ ವಿಲಗ್ನಾ ।**
**ಚ್ಚಂದ್ರಾದ್ವದೇತ್ತಾವತಿ ಜನ್ಮರಾಶಿಃ ॥**
**ಮೀನೋದಯೇ ಮೀನಯುಗಂ ಪ್ರದಿಷ್ಟಂ ।**
**ಭಕ್ಷ್ಯಾ ಹೃತಾಕಾರ ರುತೈಶ್ಚ ಚಿಂತ್ಯಮ್ ॥೬॥**

ಜನ್ಮರಾಶಿಯನ್ನು ತಿಳಿಯುವ ಮತ್ತೊಂದು ಕ್ರಮವು, ಪ್ರಶ್ನಲಗ್ನದಿಂದ ಆ ಕಾಲದ ಚಂದ್ರನು ಎಷ್ಟನೆಯ ರಾಶಿಯಲ್ಲಿರುತ್ತಾನೆಯೋ ಆ ಚಂದ್ರನಿಂದ ಅಷ್ಟನೆಯ ರಾಶಿಯಲ್ಲಿ ಹಿಂದೆ ಚಂದ್ರನಿದ್ದಾಗ ಜನನವೆಂದು ತಿಳಿಯಬೇಕು. ಮೀನವು ಪ್ರಶ್ನಲಗ್ನವಾಗಿ ಬಂದಿದ್ದರೆ ಹಿಂದೆ ಮೀನದಲ್ಲಿ ಚಂದ್ರನಿದ್ದಾಗ ಜನನವೆಂದು ತಿಳಿಯಬೇಕು. ಇಷ್ಟೇ ಅಲ್ಲದೆ ಪ್ರಶ್ನಕಾಲದಲ್ಲಿ ಕಾಣಬರುವ ಭಕ್ಷ್ಯದ್ರವ್ಯಗಳು ಯಾವ ರಾಶಿಯ ಜಂತುವಿಗೆ ಯೋಗ್ಯವಿರುವುದೋ ಆ ರಾಶಿ, ಹೀಗೆಯೇ ಕಾಣಬರುವ ಆಕಾರಾದಿಗಳು, ಶಬ್ದ, ಇವು ಯಾವ ಪ್ರಾಣಿಗಳಿಗೆ ಹೆಚ್ಚಾಗಿ ಹೋಲುವುದೋ ಆ ಪ್ರಾಣಿಗೆ ಉಕ್ತವಾದ ರಾಶಿಯಲ್ಲಿ ಹಿಂದೆ ಚಂದ್ರನಿದ್ದಾಗ ಜನನವೆಂದು ಹೇಳಬೇಕು. ಹಿಂದೆ ಎಂದು ಹೇಳಿದರೆ ಎಷ್ಟು ವರ್ಷಗಳ ಹಿಂದೆ ಎಂಬುದನ್ನೂ ವಯಃಪರಿಮಾಣವನ್ನೂ ಊಹಿಸಿ ತಿಳಿಯತಕ್ಕದ್ದು.

**ಹೋರಾ ನವಾಂಶ ಪ್ರತಿಮಂ ವಿಲಗ್ನಂ ।**
**ಲಗ್ನಾದ್ರವಿರ್ಯಾವತಿ ವಾದೃಕಾಣೇ ॥**
**ತಸ್ಮಾದ್ವದೇತ್ತಾವತಿವಾ ವಿಲಗ್ನಂ ।**
**ಪ್ರಷ್ಟುಃ ಪ್ರಸೂತಾ ವಿತಿಶಾಸ್ತ್ರ ಮಾಹ ॥೭॥**

ತತ್ಕಾಲ ಪ್ರಶ್ನಲಗ್ನದ ನವಾಂಶಕ ರಾಶಿಯೇ ಲಗ್ನರಾಶಿ ಅಥವಾ ಲಗ್ನದಿಂದ ಸೂರ್ಯನು ಎಷ್ಟನೆಯ ದ್ರೇಕ್ಕಾಣದಲ್ಲಿರುತ್ತಾನೆಯೋ ಆ ಸೂರ್ಯನಿಂದ ಅಷ್ಟನೆಯ ದ್ರೇಕ್ಕಾಣದಲ್ಲಿ ಜನನವೆಂದು ತಿಳಿಯಬೇಕು

ಜನ್ಮಾದಿ ಶೇಲ್ಲಗ್ನಗತೇ ಸವೀರ್ಯೇ ।
ಛಾಯಾಂಗು ಲಘ್ನೇರ್ಕ ಹತೇವ ಶಿಷ್ಟಂ ॥
ಆಸೀನ ಸುಪ್ತೋತ್ಥಿ ತತಿಷ್ಠತಾಂಭಂ ।
ಜಾಯಾ ಸುಖಾಜ್ಞೋದಯಗಂ ಪ್ರದಿಷ್ಟಮ್ ॥೮॥

ಪ್ರಶ್ನಲಗ್ನವು ಬಲವಾಗಿದ್ದರೆ ಆ ಲಗ್ನವನ್ನು ಲಿಪ್ತಿ (ಕಲೆ)ಗಳನ್ನಾಗಿ ಮಾಡಿಕೊಂಡು ತತ್ಕಾಲದ ಪದಚ್ಛಾಯೆಗೆ ಸಲುವ ಅಂಗುಲ ವ್ಯಂಗುಲಗಳಿಂದ ಗುಣಿಸಿ ಗುಣಲಬ್ಧವನ್ನು ೧೨ರಿಂದ ಭಾಗಿಸಿ ಉಳಿದ ಸಂಖ್ಯೆಗೆ ಮೇಷಾದಿಯಾಗಿ ಸಲ್ಲುವ ಲಗ್ನವನ್ನು ಗೊತ್ತು ಮಾಡಿಕೊಂಡಲ್ಲಿ ಅದೇ ಜನ್ಮಲಗ್ನ ವಾಗಿರುವುದೆಂದು ತಿಳಿಯಬೇಕು ಇಲ್ಲಿ "ಲಗ್ನಗತೇ ಸವೀರ್ಯೇ" ಎಂದರೆ ಲಗ್ನಗತನಾದ ಗ್ರಹವು ಬಲಿಷ್ಠನಾಗಿದ್ದರೆ ಆ ಗ್ರಹಸ್ಫುಟದ ಲಿಪ್ತಿ ವಿಲಿಪ್ತಿಗಳನ್ನು ತತ್ಕಾಲ ಪದಚ್ಛಾಯೆಯ ಅಂಗುಲ ವ್ಯಂಗುಲಗಳಿಂದ ಗುಣಿಸಿ ೧೨ರಿಂದ ಭಾಗಿಸಿ ಶೇಷ ಸಂಖ್ಯೆಗೆ ಸರಿಯಾಗಿ ಮೇಷಾದಿ ಲಗ್ನವೆಂದು ತಿಳಿಯಬೇಕು. ಇದಲ್ಲದೆ ಪ್ರಚ್ಛಕನು ಕುಳಿತು ಪ್ರಶ್ನೆ ಮಾಡಿದರೆ ತತ್ಕಾಲ ಲಗ್ನದಿಂದ ಏಳನೆಯದೂ ಮಲಗಿ ಪ್ರಶ್ನೆ ಮಾಡಿದರೆ ನಾಲ್ಕನೆಯದೂ ನಡೆಯುವಾಗ ಪ್ರಶ್ನಿಸಿದರೆ ಹತ್ತನೆಯದೂ, ನಿಂತು ಪ್ರಶ್ನಿಸಿದರೆ ಲಗ್ನವೂ ಜನ್ಮಲಗ್ನವೆಂದು ತಿಳಿಯಬೇಕು

ಗೋಸಿಂಹೌತು ಮಾಷ್ಟಮೌ ಕ್ರಿಯತುಲೇ ಕನ್ಯಾಮೃಗೌಚಕ್ರಮಾ ।
ತ್ಸಂವರ್ಗ್ಯಾ ದಶಕಾಷ್ಟ ಸಪ್ತ ವಿಷಯ್ಯೈಃ ಶೇಷಾಃ ಸ್ವಸಂಖ್ಯಾ ಗುಣಾಃ ॥
ಜೀವಾರಾ ಸ್ಫುಜಿದ್ಯೆಂದವಾಃ ಪ್ರಥಮವಚ್ಛೇಷಾ ಗ್ರಹಾಃ ಸೌಮ್ಯವತ್ ।
ರಾಶೀನಾಂ ನಿಯತೋ ವಿಧಿಗ್ರಹಯುತ್ಯೈಃ ಕಾರ್ಯಾಚ ತದ್ವರ್ಗಣಾಃ ॥೯॥

ಪ್ರಶ್ನಲಗ್ನ ರಾಶಿಯು ವೃಷಭ ಸಿಂಹಗಳಾಗಿದ್ದರೆ ತತ್ಕಾಲ ಲಗ್ನಸ್ಫುಟ ಕಲೆಗಳನ್ನು ಹತ್ತರಿಂದಲೂ, ಮಿಥುನ ವೃಶ್ಚಿಕಗಳಾಗಿದ್ದರೆ ಎಂಟರಿಂದಲೂ, ಮೇಷ ತುಲೆಗಳಾದರೆ ಏಳರಿಂದಲೂ, ಕನ್ಯಾ ಮಕರಗಳಾಗಿದ್ದರೆ ಐದರಿಂದಲೂ, ಮಿಕ್ಕವುಗಳಾಗಿದ್ದರೆ ಆ ರಾಶಿಯು ಎಷ್ಟನೆಯದೋ ಆ ಸಂಖ್ಯೆಯಿಂದಲೂ ಗುಣಿಸಿಟ್ಟುಕೊಳ್ಳಬೇಕು. ಇದಕ್ಕೆ ರಾಶಿ ಗುಣಕವೆಂದು ಸಂಜ್ಞೆಯು. ತತ್ಕಾಲ ಲಗ್ನದಲ್ಲಿ ಗ್ರಹವಿದ್ದರೆ ಗ್ರಹ ಗುಣಕವನ್ನು ಮಾಡಿಕೊಳ್ಳಬೇಕು ಅದು ಹೇಗೆಂದರೆ ಲಗ್ನಸ್ಫುಟದ ಕಲೆಗಳನ್ನು ಆ ಲಗ್ನದಲ್ಲಿ ಗುರುವಿದ್ದರೆ ಹತ್ತರಿಂದಲೂ, ಕುಜನಿದ್ದರೆ ಎಂಟರಿಂದಲೂ, ಶುಕ್ರನಿದ್ದರೆ ಏಳರಿಂದಲೂ, ಬುಧನಿದ್ದರೆ ಐದರಿಂದಲೂ, ಮಿಕ್ಕ ಗ್ರಹರಿದ್ದರೆ ಬುಧನಂತೆ ಅಂದರೆ ಐದರಿಂದಲೂ ಗುಣಿಸಿಟ್ಟುಕೊಳ್ಳಬೇಕು. ಲಗ್ನದಲ್ಲಿ ಒಂದಕ್ಕಿಂತಲೂ ಹೆಚ್ಚು ಗ್ರಹರಿದ್ದರೆ ಆ ಗ್ರಹರಿಗೆ ಹೇಳಿದ ಸಂಖ್ಯೆಯಿಂದ ಪ್ರತ್ಯೇಕ ಪ್ರತ್ಯೇಕವಾಗಿ ಗುಣಿಸಬೇಕು ಕೊನೆಯಲ್ಲಿ ರಾಶಿ ಗುಣಕ ಗ್ರಹ ಗುಣಕಗಳನ್ನು ಕೂಡಿಸಬೇಕು

ಸಪ್ತಾಹತಂ ತ್ರಿಘನ ಭಾಜಿತ ಶೇಷಮೃಕ್ಷಂ ।
ದತ್ವಾಥವಾ ನವವಿಶೋಧ್ಯ ನವಾಥವಾಸ್ಯಾತ್ ॥

**ಏವಂ ಕಳತ್ರ ಸಹಜಾತ್ಮಜ ಶತ್ರುಭ್ಯೇಭ್ಯಃ ।**
**ಪೃಷ್ಟುರ್ವದೇ ದುದಯರಾಶಿ ವಶೇನ ತೇಷಾಮ್ ॥೧೦॥**

ಈ ಮೇಲೆ ಹೇಳಿದ ರಾಶಿ ಗುಣಕ ಗ್ರಹಗುಣಕಗಳ ಮೊತ್ತಕ್ಕೆ ಪ್ರಶ್ನಲಗ್ನವು ಪ್ರಥಮ ದ್ರೇಕ್ಕಾಣ ವಾಗಿದ್ದರೆ ೯ನ್ನು ಸೇರಿಸಬೇಕು. ದ್ವಿತೀಯ ದ್ರೇಕ್ಕಾಣವಾದರೆ ಏನನ್ನೂ ಮಾಡಬೇಕಾದುದಿಲ್ಲ. ತೃತೀಯ ದ್ರೇಕ್ಕಾಣವಾಗಿದ್ದರೆ ೯ನ್ನು ಅದರಲ್ಲಿ ಕಳೆಯಬೇಕು. ಹೀಗೆ ಮಾಡಿ ಬಂದುದನ್ನು ೭ರಿಂದ ಗುಣಿಸಿ ೨೭ರಿಂದ ಭಾಗಿಸಿ ಬರುವ ಭಾಗಲಬ್ಧದ ಸಂಖ್ಯೆಗನುಗುಣವಾಗಿ ಆಶ್ವಿನ್ಯಾದಿ ನಕ್ಷತ್ರವನ್ನು ಗೊತ್ತುಮಾಡಿಕೊಳ್ಳಬೇಕು. ಇದು ಜನ್ಮನಕ್ಷತ್ರವಾಗಿರುವುದು ಹೀಗೆಯೇ ಲಗ್ನದಿಂದ ಸಪ್ತಮ ತೃತೀಯ ಪಂಚಮ ಷಷ್ಠ ಈ ಭಾವಗಳಿಂದ ಕ್ರಮವಾಗಿ ಕಳತ್ರ, ಸೋದರ, ಪುತ್ರ, ಶತ್ರು, ಇವರ ಜನ್ಮನಕ್ಷತ್ರಾದಿಗಳನ್ನು ಊಹಿಸಬಹುದು

**ವರ್ಷರ್ತು ಮಾಸ ತಿಥಯೋ ದ್ಯುನಿಶಂ ಹ್ಯುಡೂನಿ ।**
**ವೇಲೋದಯರ್ಕ್ಷ ನವಭಾಗ ವಿಕಲ್ಪನಾಃ ಸ್ಯುಃ ॥**
**ಭೂಯೋದಶಾದಿ ಗುಣಿತಾಃಸ್ವ ವಿಕಲ್ಪಭಕ್ತಾ ।**
**ವರ್ಷಾದಯೋ ನವಕದಾನ ವಿಶೋಧನಾಭ್ಯಾಂ ॥೧೧॥**

ಮೇಲೆ ಹೇಳಿದ ಮೊತ್ತವನ್ನು ನಾಲ್ಕು ಸ್ಥಾನದಲ್ಲಿಟ್ಟು ಮತ್ತೆ ಹತ್ತರಿಂದ, ಎಂಟರಿಂದ, ಏಳರಿಂದ, ಐದರಿಂದ ಬೇರೆಬೇರೆಯಾಗಿ ಗುಣಿಸಿ ಇಟ್ಟುಕೊಳ್ಳಬೇಕು. ಈ ಗುಣಲಬ್ಧಕ್ಕೆ ನವಕ ಶೋಧನ ಎಂದರೆ ಮೇಲಿನ ಶ್ಲೋಕದಲ್ಲಿ ಹೇಳಿದಂತೆ ದ್ರೇಕ್ಕಾಣಾನುಸಾರ ೯ ಕೂಡುವುದೋ ಬಿಡುವುದೋ ಕಳೆಯುವುದೋ ಮಾಡಿಟ್ಟುಕೊಳ್ಳಬೇಕು.

**ವಿಜ್ಞೇಯಾದಶಕೇಷ್ವಬ್ದಾ ।**
**ಋತುಮಾಸಾಸ್ತ ಥೈವಚ ॥**
**ಅಷ್ಟಕೇಷ್ವಪಿಮಾಸಾರ್ಧಂ ।**
**ತಿಥಯಶ್ಚ ತಥಾ ಸ್ಮೃತಾಃ ॥೧೨॥**

ಮೇಲೆ ಹತ್ತರಿಂದ ಗುಣಿಸಿಕೊಂಡು ನವಕ ಶೋಧನೆಯನ್ನು ಮಾಡಿದ ಮೇಲೆ ಬರುವ ಸಂಖ್ಯೆಯನ್ನು ಪರಮಾಯುಸ್ಸಂಖ್ಯೆ ಎಂದರೆ ೧೨೦ರಿಂದ ಭಾಗಿಸಿದರೆ ಉಳಿಯುವ ಶೇಷ ತಾತ್ಕಾಲಿಕ ಪ್ರಾಯವು. ಇದೇ ಮೊತ್ತವನ್ನು ೬೦ರಿಂದ ಭಾಗಿಸಿದರೆ ಉಳಿಯುವ ಶೇಷ ಪ್ರಭವಾದಿ ಸಂವತ್ಸರವನ್ನು ತೋರಿಸಲು ಸಹಕಾರಿಯಾಗುವುದು. ಅದೇ ಮೊತ್ತವನ್ನು ೬ರಿಂದ ಭಾಗಿಸಿ ಬಂದ ಶೇಷದಿಂದ ಋತುವನ್ನು ಕಂಡುಹಿಡಿಯಬಹುದು. ಅದೇ ಮೊತ್ತವನ್ನು ೨ರಿಂದ ಭಾಗಿಸಿ ಬರುವ ಶೇಷದಿಂದ ಮಾಸವನ್ನು ಗೊತ್ತುಮಾಡಬಹುದು.ನಿಶ್ಶೇಷವಾಗಿ ಬಂದರೆ ಮೇಲೆ ಬಂದ ಋತುವಿನಲ್ಲಿ ಎರಡನೆಯ ಮಾಸವನ್ನು, ೧ ಉಳಿದರೆ ಪ್ರಥಮದ ಮಾಸವನ್ನು ತೆಗೆದುಕೊಳ್ಳಬಹುದು. ೮ರಿಂದ ಗುಣಿಸಿ ನವಕ ಶೋಧನೆಯನ್ನು ಮಾಡಿದ ಎರಡನೆ ಮೊತ್ತವನ್ನು ೧೫ರಿಂದ ಭಾಗಿಸಿ ಉಳಿಯುವ

ಸಂಖ್ಯೆಯಿಂದ ತಿಥಿಯನ್ನು ಅದೇ ಮೊತ್ತವನ್ನು ೨ರಿಂದ ಭಾಗಿಸಿ ಉಳಿಯುವ ಶೇಷದಿಂದ ಪಕ್ಷವನ್ನು ತಿಳಿಯಬಹುದು ಎಂದರೆ ೧ ಉಳಿದರೆ ಶುಕ್ಲಪಕ್ಷವೆಂತ, ಶೂನ್ಯವಾದರೆ ಕೃಷ್ಣಪಕ್ಷವೆಂತ ತೆಗೆದುಕೊಳ್ಳಬಹುದು.

ದಿವಾರಾತ್ರಿ ಪ್ರಸೂತಂ ಚ ।
ನಕ್ಷತ್ರಾ, ನಯನಂ ತಥಾ ॥
ಸಪ್ತಕೇಷ್ವಪಿ ವರ್ಗೇಷು ।
ನಿತ್ಯಮೇವೋಷ ಲಕ್ಷಯೇತ್ ॥೧೩॥

ಏಳರಿಂದ ಗುಣಿಸಿ ನವಕ ಶೋಧನೆಯನ್ನು ಮಾಡಿದ ೨ರಿಂದ ಭಾಗಿಸಿದ ಶೇಷವು ೧ ಆದರೆ ಹಗಲು ಜನನವೆಂದೂ, ನಿಶ್ಶೇಷವಾದರೆ ರಾತ್ರಿ ಜನನವೆಂದೂ ಹೇಳಬೇಕು. ಇದೇ ಮೊತ್ತವನ್ನು ೨೭ರಿಂದ ಭಾಗಿಸಿ ಬಂದ ಶೇಷದಿಂದ ನಕ್ಷತ್ರವನ್ನು ಗೊತ್ತುಮಾಡಿಕೊಳ್ಳಬೇಕು.

ವೇಲಾಮಥ ವಿಲಗ್ನಂ ಚ ।
ಹೋರಾಮಂಶಕ ಮೇವ ಚ ॥
ಪಂಚಕೇಷು ವಿಜಾನೀಯಾ ।
ನ್ನಷ್ಟ ಜಾತಕ ಸಿದ್ಧಯೇ ॥೧೪॥

ಐದರಿಂದ ಗುಣಿಸಿ ನವಕ ಶೋಧನೆ ಮಾಡಿಟ್ಟುಕೊಂಡ ಮೊತ್ತವನ್ನು ಜನನವು ರಾತ್ರಿಯಲ್ಲಾದರೆ ರಾತ್ರಿ ಪ್ರಮಾಣದಿಂದಲೂ, ಹಗಲಿನಲ್ಲಾದರೆ ಹಗಲಿನ ಪ್ರಮಾಣದಿಂದಲೂ ಭಾಗಿಸಿ ಉಳಿದ ಶೇಷದ ಲಿಪ್ತಿ ವಿಲಿಪ್ತಿಗಳನ್ನೇ ಜನನಕಾಲದ ಗಳಿಗೆ ವಿಗಳಿಗೆಗಳನ್ನಾಗಿ ತಿಳಿಯಬೇಕು. ಇದೇ ಮೊತ್ತವನ್ನು ೧೨ರಿಂದ ಭಾಗಿಸಿ ಶೇಷವನ್ನು ಮೇಷಾದಿಯಾಗಿ ಎಣಿಸಿ ಲಗ್ನವನ್ನು ಗೊತ್ತುಮಾಡಿಕೊಳ್ಳಬೇಕು. ಇದೇ ಮೊತ್ತವನ್ನು ೨ರಿಂದ ಭಾಗಿಸಿದರೆ ಹೋರೆಯೂ, ೩ರಿಂದ ಭಾಗಿಸಿದರೆ ದ್ರೇಕ್ಕಾಣವೂ, ೯ರಿಂದ ಭಾಗಿಸಿದರೆ ನವಾಂಶವೂ, ೧೨ರಿಂದ ಭಾಗಿಸಿದರೆ ದ್ವಾದಶಾಂಶವೂ, ೩೦ರಿಂದ ಭಾಗಿಸಿದರೆ ತ್ರಿಂಶಾಂಶವೂ ಬರುವುವು.

ಸಂಸ್ಕಾರ ನಾಮ ಮಾತ್ರಾ ।
ದ್ವಿಗುಣಾಛಾಯಾಂ ಗುಲೈಃ ಸಮಾಯುಕ್ತಾಃ ॥
ಶೇಷಂ ತ್ರಿನವಕ ಭಕ್ತಾಚ್ಛೇಷಂ ।
ನಕ್ಷತ್ರಂ ತದ್ಧನಿಷ್ಠಾದಿ ॥೧೫॥

ಜನ್ಮನಕ್ಷತ್ರವನ್ನು ಅನ್ಯಪ್ರಕಾಶ ಸಾಧನೆ ಮಾಡುವುದೆಂದರೆ ನಾಮಕರಣದಲ್ಲಿ ಆತನಿಟ್ಟಿರುವ ಹೆಸರಿನಲ್ಲಿ ಎಷ್ಟು ಮಾತ್ರೆಗಳಿರುತ್ತವೆಯೋ ಅವನ್ನು ೨ರಿಂದ ಗುಣಿಸಿ ತತ್ಕಾಲ ಪದಚ್ಛಾಯೆಯ ಅಂಗುಲ ವ್ಯಂಗುಲಗಳನ್ನು ಅದಕ್ಕೆ ಕೂಡಿಸಿ ೨೭ರಿಂದ ಭಾಗಿಸಬೇಕು. ಆಗ ಬರುವ ಶೇಷವನ್ನು ಧನಿಷ್ಠಾ ನಕ್ಷತ್ರದಿಂದ ಎಣಿಸಿ ಬರುವ ನಕ್ಷತ್ರವನ್ನು ಜನ್ಮನಕ್ಷತ್ರವೆಂದರಿಯಬೇಕು.

ದ್ವಿತ್ರಿ ಚತುರ್ದಶ ದಶತಿಥಿ ।
ಸಪ್ತ ಸ್ತ್ರಿಗುಣಾ ನವಾಷ್ಟ ಚೈಂದ್ರಾದ್ಯಾಃ ॥
ಪಂಚದಶಘ್ನಾಸ್ತದ್ದಿ ।
ಚ್ಛುಕ್ತಾನ್ವಿತಂಭಂಧನಿಷ್ಠಾದಿ ॥೧೬॥

ನಕ್ಷತ್ರ ಸಾಧನೆಗೆ ಮತ್ತೊಂದು ಕ್ರಮವು ನಷ್ಟಜಾತಕ ಪ್ರಶ್ನೆ ಮಾಡುವವನು ಯಾವ ದಿಕ್ಕಿಗೆ ಮುಖವಾಗಿರುತ್ತಾನೆಂದು ನೋಡಿಕೊಂಡು ಅದು ಪೂರ್ವ ದಿಕ್ಕಿನದ್ದಾದರೆ೨, ಆಗ್ನೇಯದಲ್ಲಿ ೩, ದಕ್ಷಿಣದಲ್ಲಿ ೧೪, ನೈಋತ್ಯದಲ್ಲಿ ೧೦, ಪಶ್ಚಿಮದಲ್ಲಿ ೧೫, ವಾಯುವ್ಯದಲ್ಲಿ ೨೧, ಉತ್ತರದಲ್ಲಿ ೯, ಈಶಾನ್ಯದಲ್ಲಿ ೮, ಈ ಸಂಖ್ಯೆಗಳನ್ನು ೧೫ರಿಂದ ಗುಣಿಸಿ ಆ ಕಾಲದಲ್ಲಿ ಆ ದಿಕ್ಕಿಗೆ ಎದುರಾಗಿ ಎಷ್ಟು ಜನರಿರುತ್ತಾರೆಯೋ ಆ ಸಂಖ್ಯೆಯನ್ನು ಕೂಡಿಸಿ ೨೭ರಿಂದ ಭಾಗಿಸಿ ಉಳಿದುದನ್ನು ಧನಿಷ್ಠಾದಿಯಾಗಿ ಎಣಿಸಿಕೊಂಡು ನಕ್ಷತ್ರವನ್ನು ನಿರ್ಣಯಿಸಬಹುದು.

ಇತಿ ನಷ್ಟ ಜಾತಕ ಮಿದಂ ।
ಬಹು ಪ್ರಕಾರಂ ಮಯಾ ವಿನಿರ್ದಿಷ್ಟಮ್ ॥
ಗ್ರಾಹ್ಯಮತ ಸಚ್ಛಿಷ್ಯೈಃ ಪರೀಕ್ಷ್ಯ ।
ಯತ್ನಾದ್ಯಥಾ ಭವತಿ ॥೧೭॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ನಷ್ಟಜಾತಕಾಖ್ಯ ವಿಚಾರ ನಿರೂಪಣಂ ನಾಮ ಚತುರ್ವಿಂಶೋಧ್ಯಾಯಃ ॥

ಈ ಪ್ರಕಾರವಾಗಿ ನಷ್ಟಜಾತಕ ವಿಷಯದಲ್ಲಿ ಬಹುಮತವನ್ನನುಸರಿಸಿ ನನ್ನಿಂದ ವಿವರವಾಗಿ ಹೇಳಲ್ಪಟ್ಟಿದೆ. ಇದನ್ನು ಸಚ್ಛಿಷ್ಯರುಗಳು ಪ್ರಯತ್ನಪೂರ್ವಕವಾಗಿ ತಿಳಿದುಕೊಂಡು ಯಾವ ಪ್ರಕಾರ ಅನುಭವಕ್ಕೆ ಸರಿಬರುವುದೋ ಅದರಂತೆ ಗ್ರಹಿಸಿಕೊಳ್ಳತಕ್ಕದ್ದು.

॥ ನಷ್ಟಜಾತಕವೆಂಬ ಇಪ್ಪತ್ತನಾಲ್ಕನೇಯ ಅಧ್ಯಾಯವು ॥

## ॥ ದ್ರೇಕ್ಕಾಣಾಧ್ಯಾಯಃ ॥

ಕಟ್ಯಾಂ ಸಿತವಸ್ತ್ರವೇಶ್ಠಿತಃ ।
ಕೃಷ್ಣಃ ಶಕ್ತ ಇವಾಭಿರಕ್ಷಿತುಮ್ ॥
ರೌದ್ರಂ ಪರಶುಂ ಸಮುದ್ಯತಂ ।
ಧತ್ತೇರಕ್ತ ವಿಲೋಚನಃ ಪುಮಾನ್ ॥೧॥

ಮೇಷದ ಪ್ರಥಮ ದ್ರೇಕ್ಕಾಣ ಸ್ವರೂಪವು ಸೊಂಟದಲ್ಲಿ ಬಿಳಿಯ ವಸ್ತ್ರವನ್ನು ಸುತ್ತಿದವನೂ, ಕಪ್ಪು ವರ್ಣದವನೂ, ರಕ್ಷಿಸುವ ಶಕ್ತಿಯುಳ್ಳವನೂ, ರೌದ್ರನೂ, ಕೊಡಲಿಯನ್ನು ಹಿಡಿದವನೂ, ಕೆಂಪಾದ ಕಣ್ಣುಳ್ಳವನೂ ಆದ ಪುರುಷನ ಸ್ವಭಾವದಲ್ಲಿರುವುದು. ಮನುಷ್ಯರೂಪ ಧರಿಸಿರುವುದರಿಂದ ಮನುಷ್ಯ ದ್ರೇಕ್ಕಾಣುವೆಂದೂ, ಆಯುಧವನ್ನು ಧರಿಸಿರುವುದರಿಂದ ಆಯುಧ ದ್ರೇಕ್ಕಾಣವೆಂದೂ ಇದಕ್ಕೆ ಸಂಜ್ಞೆಯಿದೆ. ಈ ದ್ರೇಕ್ಕಾಣಾಧಿಪತಿ ಕುಜನು.

ವಿ.ಸೂ.: ಜನನಕಾಲ ಲಕ್ಷಣ ಅನಿಷ್ಟಯೋಗ ನೈರ್ಯಾಣಿಕ ಮುಂತಾಗಿ ಜಾತಕಾದಿಗಳಲ್ಲಿಯೂ, ಪ್ರಶ್ನಾದಿಗಳಲ್ಲಿಯೂ, ಲಗ್ನ ನಿರ್ಣಯಾದಿಗಳಲ್ಲಿಯೂ ಈ ವಿಷಯಗಳನ್ನು ಪುರುಷ ಸ್ತ್ರೀಯರ ಸ್ವರೂಪ ಸ್ವಭಾವಾದಿಗಳಿಗೆ ಹೋಲಿಸಿ ಹೇಳಬಹುದು (ಹೊಂದಿಸಿಕೊಂಡು ವಿಚಾರಪೂರ್ವಕ ಹೇಳಬೇಕು)

ರಕ್ತಾಂಬರಾ ಭೂಷಣ ಭಕ್ಷಚಿತ್ತಾ ।
ಕುಂಭಾ ಕೃತಿರ್ವಾಜಿಮುಖೀ ತೃಷಾರ್ತಾ ॥
ಏಕೇನ ಪಾದೇನ ಚ ಮೇಷ ಮಧ್ಯೇ ।
ದ್ರೇಕ್ಕಾಣ ರೂಪಂ ಯವನೋಪದಿಷ್ಟಮ್ ॥೨॥

ಮೇಷ ದ್ವಿತೀಯ ದ್ರೇಕ್ಕಾಣ ಸ್ವರೂಪವು ರಕ್ತವರ್ಣದ ಬಟ್ಟೆಯನ್ನು ಧರಿಸಿದವಳೂ, ಅಲಂಕಾರದಲ್ಲಿ ಭಕ್ಷದಲ್ಲಿ ಮನಸ್ಸುಳ್ಳವಳೂ, ಕೊಡದ ಆಕೃತಿ (ಹೊಟ್ಟೆ)ಯುಳ್ಳವಳೂ, ಕುದುರೆಯಂತೆ ಮುಖವುಳ್ಳವಳೂ, ಬಾಯಾರಿಕೆಯಿಂದ ಪೀಡಿತಳೂ, ಒಂದೇ ಕಾಲುಳ್ಳವಳೂ ಎಂಬ ಈ ಸ್ವರೂಪವು ಯವನಾಚಾರ್ಯರಿಂದ ಹೇಳಲ್ಪಟ್ಟಿದೆ. ಸ್ತ್ರೀಯ ವಿಷಯಕ ಸ್ವರೂಪಾದಿಗಳನ್ನು ಹೇಳಿದುದರಿಂದ ಇದು ಸ್ತ್ರೀದ್ರೇಕ್ಕಾಣವು. ಇದಕ್ಕೆ ಅಧಿಪತಿ ಸೂರ್ಯನು.

ಕ್ರೂರಃ ಕಲಾಜ್ಞಃ ಕಪಿಲಃ ಕ್ರಿಯಾರ್ಥೀ ।
ಭಗ್ನ ವ್ರತೋಭ್ಯುದ್ಯತ ದಂಡ ಹಸ್ತಃ ॥
ರಕ್ತಾನಿ ವಸ್ತ್ರಾಣಿ ಬಿಭರ್ತಿ ಚಂಡೋ ।
ಮೇಷೇ ತೃತೀಯಃ ಕಥಿತಃ ಸ್ತ್ರಿಭಾಗಃ ॥೩॥

ಮೇಷದ ತೃತೀಯ ದ್ರೇಕ್ಕಾಣ ಸ್ವರೂಪವು ಕ್ರೂರನೂ, ಕಲಾಜ್ಞಾನಿಯೂ, ಕಪಿಲವರ್ಣದವನೂ, ಕೆಲಸವನ್ನು ಕೇಳತಕ್ಕವನೂ, ವ್ರತನಿಷ್ಠೆಯಿಲ್ಲದವನೂ, ಕೈಯ ದಂಡವನ್ನು ಎತ್ತಿ ಹಿಡಿದವನೂ, ರಕ್ತವನ್ನು ಧರಿಸಿದವನೂ, ಪ್ರಚಂಡನೂ ಆದ ಪುರುಷ ಸ್ವಭಾವದಲ್ಲಿರುವುದು. ಇದು ಪುರುಷ ದ್ರೇಕ್ಕಾಣವು. ಇದರ ಅಧಿಪತಿ ಗುರುವು.

**ಕುಂಚಿತಲೂನಕಚಾ ಘಟದೇಹಾ ।**
**ದಗ್ಧಪಟಾ ತೃಷಿತಾಶನ ಚಿತ್ತಾ ॥**
**ಆಭರಣಾನ್ಯಭಿ ವಾಂಛತಿನಾರೀ ।**
**ರೂಪಮಿದಂ ವೃಷಭೇ ಪ್ರಥಮಸ್ಯ ॥೪॥**

ವೃಷಭ ಪ್ರಥಮ ದ್ರೇಕ್ಕಾಣ ಸ್ವರೂಪವು ವಕ್ರವಕ್ರವಾದ ಮತ್ತು ಕತ್ತರಿಸಿದ ಕೂದಲುಳ್ಳವಳೂ, ಕೊಡದ ಆಕೃತಿ ದೇಹವುಳ್ಳವಳೂ, ಸುಟ್ಟುಹೋದ ವಸ್ತ್ರವುಳ್ಳವಳೂ, ಬಾಯಾರಿಕೆ ಮತ್ತು ಊಟ ತಿಂಡಿಗಳಲ್ಲಿ ಹೆಚ್ಚು ಆಸಕ್ತಿಯುಳ್ಳವಳೂ, ಆಭರಣಗಳನ್ನು ಇಚ್ಛಿಸುವವಳೂ ಆದ ಸ್ತ್ರೀರೂಪ ದಲ್ಲಿರುವುದು ಇದರ ಅಧಿಪತಿಯು ಶುಕ್ರನು.

**ಕ್ಷೇತ್ರಧಾನ್ಯ ಗೃಹಧೇನು ಕಲಾಜ್ಞೋ ।**
**ಲಾಂಗಲೇಸ ಶಕಟೇ ಕುಶಲಶ್ಚ ॥**
**ಸ್ಕಂದಮುದ್ವಹತಿ ಗೋಪತಿ ತುಲ್ಯಃ ।**
**ಕ್ಷುತ್ಪರೋಜ ವದನೋ ಮಲವಾಸಾಃ ॥೫॥**

ವೃಷಭ ದ್ವಿತೀಯ ದ್ರೇಕ್ಕಾಣ ಸ್ವರೂಪವು ಕ್ಷೇತ್ರ, ಧಾನ್ಯ, ಗೃಹ, ಆಕಳು, ಕಲೆ ಇವುಗಳನ್ನು ತಿಳಿದವನೂ, ನೇಗಿಲು ಬಂಡಿ ಇವುಗಳ ವೃತ್ತಿಕುಶಲನೂ, ಎತ್ತುಗಳಂತೆ ಇರುವ ಭುಜ ಶಿರಸ್ಸುಳ್ಳವನೂ, ಹೆಚ್ಚು ಹಸಿವುಳ್ಳವನೂ, ಆಡಿನ ಮುಖದಂತೆ ಮುಖವುಳ್ಳವನೂ, ಬಿಳಿಯ ಮಲಿನ ಬಟ್ಟೆಯುಳ್ಳವನೂ ಆದ ಪುರುಷರೂಪದಂತೆ ಇರುವುದು. ಇದರ ಅಧಿಪತಿ ಬುಧನು.

**ದ್ವಿಪ ಸಮಕಾಯಃ ಪಾಂಡುರದಂಷ್ಟ್ರಃ ।**
**ಶರಭ ಸಮಾಂಘ್ರಿಃ ಪಿಂಗಳಮೂರ್ತಿಃ ॥**
**ಅಜಮೃಗಲೋಭ ವ್ಯಾಕುಲಚಿತ್ತೋ ।**
**ವೃಷಭವನಸ್ಯ ಪ್ರಾಂತಗತೋಯಮ್ ॥೬॥**

ವೃಷಭ ಅಂತ್ಯದ್ರೇಕ್ಕಾಣ ಸ್ವರೂಪವು, ಆನೆಗೆ ಸಮಾನವಾದ ಮೈಯುಳ್ಳವನೂ, ಬಿಳಿಯ ಹಲ್ಲು ಗಳುಳ್ಳವನೂ, ಶರಭ ಮೃಗದಂತೆ ಇರುವ ಕಾಲುಗಳುಳ್ಳವನೂ, ಪಿಂಗಳ ವರ್ಣದ ಶರೀರವುಳ್ಳ ವನೂ, ಮೇಕೆ ಮೃಗಗಳಲ್ಲಿ ವ್ಯಾಕುಲವಾದ ಮನವುಳ್ಳವನೂ ಆದ ಪುರುಷ ಸ್ವಭಾವದಲ್ಲಿರುವುದು. ಇದರ ಅಧಿಪತಿ ಶನಿಯು. ಇಲ್ಲಿ ಚತುಷ್ಪಾದದ ರೂಪವನ್ನೂ, ಪಕ್ಷಿ ಸ್ವರೂಪವನ್ನೂ ಮನುಷ್ಯ ರೂಪ ವನ್ನೂ ಹೇಳಿರುವುದರಿಂದ ಇದು ಚತುಷ್ಪದ ಪಕ್ಷಿ ಮತ್ತು ಮನುಷ್ಯ ಈ ರೂಪಕವಾದ ದ್ರೇಕ್ಕಾಣವು.

ಸೂಚ್ಯಾಶ್ರಯಂ ಸಮಭಿ ವಾಂಛತಿ ಕರ್ಮನಾರೀ ।
ರೂಪಾನ್ವಿತಾಭರಣ ಕಾರ್ಯ ಕೃತಾದರಾ ಚ ।
ಹೀನ ಪ್ರಜೋಚ್ಛ್ರಿತ ಭುಜರ್ತು ಮತೀ ತ್ರಿಭಾಗ ।
ಮಾದ್ಯಂ ತೃತೀಯ ಭವನಸ್ಯ ವದಂತಿ ತಜ್ಞಾ ॥೭॥

ಮಿಥುನ ಆದಿದ್ರೇಕ್ಕಾಣವು, ಆಭರಣಾದಿ ಕೆಲಸಗಳನ್ನು ಮಾಡುವುದರಲ್ಲಿ ಆದರವುಳ್ಳವಳೂ, ಸಂತತಿ ಇಲ್ಲದವಳೂ, ಸೂಜಿಯಿಂದ ಮಾಡಬಹುದಾದ ಕಸೂತಿ ಮುಂತಾದ ಕಾರ್ಯಗಳನ್ನು ಮಾಡುವವಳೂ, ಎತ್ತರವಾದ ಭುಜವುಳ್ಳವಳೂ, ಋತುಮತಿಯಾದವಳೂ ಆಗಿರುವ ಸ್ತ್ರೀರೂಪದಲ್ಲಿರುವುದು ಇದರ ಅಧಿಪತಿ ಬುಧನು ಇದು ಸ್ತ್ರೀದ್ರೇಕ್ಕಾಣವು.

ಉದ್ಯಾನ ಸಂಸ್ಥಃ ಕವಚೀ ಧನುಷ್ಮಾನ್ ।
ಶೂರೋಸ್ತ್ರಧಾರೀ ಗರುಡಾನನಶ್ಚ ॥
ಕ್ರೀಡಾತ್ಮ ಜಾಲಂ ಕರಣಾರ್ಥ ಚಿಂತಾ ।
ಕರೋತಿ ಮಧ್ಯೇ ಮಿಥುನಸ್ಯ ರಾಶೇಃ ॥೮॥

ಮಿಥುನ ಮಧ್ಯದ್ರೇಕ್ಕಾಣವು ಉದ್ಯಾನವನದಲ್ಲಿರುವವನಾಗಿಯೂ, ಕವಚವುಳ್ಳವನಾಗಿಯೂ, ಧನುರ್ಧಾರಿಯಾಗಿಯೂ, ಶೂರನಾಗಿಯೂ, ಅಸ್ತ್ರಧಾರಿಯಾಗಿಯೂ, ಗರುಡನಂತಿರುವ ಮುಖವುಳ್ಳವನಾಗಿಯೂ, ಕ್ರೀಡೆ, ಅಲಂಕರಣ, ಮಕ್ಕಳು ಇವರ ವಿಷಯಕವಾದ ಚಿಂತೆಯುಳ್ಳವನಾಗಿಯೂ ಇರುವ ಮನುಷ್ಯನ ಸ್ವಭಾವದಲ್ಲಿರುವುದು. ಇದು ಪುರುಷ ಮತ್ತು ಪಕ್ಷಿ ದ್ರೇಕ್ಕಾಣವು ಇದರ ಅಧಿಪತಿಯು ಶುಕ್ರನು

ಭೂಷಿತೋ ವರುಣವದ್ಬಹು ರತ್ನೋ ।
ಬದ್ಧತೂಣ ಕವಚಃ ಸಧನುಷ್ಕಃ ॥
ನೃತ್ಯ ವಾದನ ಕಲಾಸು ಚ ವಿದ್ವಾನ್ ।
ಕಾವ್ಯ ಕೃನ್ಮಿಥುನ ರಾಶ್ಯವಸಾನೇ ॥೯॥

ಮಿಥುನ ರಾಶಿಯ ಅಂತ್ಯದ್ರೇಕ್ಕಾಣವು ವರುಣನ ಹಾಗೆ ಅನೇಕ ರತ್ನಗಳಿಂದ ಅಲಂಕರಿಸಲ್ಪಟ್ಟವನೂ, ಬಿಲ್ಲು ಬತ್ತಳಿಕೆಗಳುಳ್ಳ ಮತ್ತು ಕವಚವನ್ನು ಧರಿಸಿರುವ ಧನುರ್ಧರನೂ, ನೃತ್ಯ, ವಾದನ ಈ ಕಲೆಯಲ್ಲಿ ವಿದ್ವಾಂಸನೂ, ಕಾವ್ಯಕರ್ತನೂ ಆಗಿರುವ ಪುರುಷನಂತಿರುವುದು. ಇದು ಪುರುಷ ಮತ್ತು ಆಯುಧ ದ್ರೇಕ್ಕಾಣವು. ಇದರ ಅಧಿಪತಿ ಶನಿಯು.

ಪತ್ರಮೂಲ ಫಲಭೃದ್ದ್ವಿಪ ಕಾಯಃ ।
ಕಾನನೇ ಮಲಯಗಃ ಶರಭಾಂಘ್ರಿಃ ॥
ಕ್ರೋಡ ತುಲ್ಯ ವದನೋ ಹಯಕಂಠಃ ।
ಕರ್ಕಟೇ ಪ್ರಥಮ ರೂಪ ಮುಶಂತಿ ॥೧೦॥

ಕರ್ಕಾಟಕದ ಪ್ರಥಮ ದ್ರೇಕ್ಕಾಣವು ಎಲೆ, ಗಡ್ಡೆಗೆಣಸು, ಹಣ್ಣು ಇವುಗಳನ್ನು ಧರಿಸಿದವನೂ, ಆನೆಯಂತೆ ಮೈಯುಳ್ಳವನೂ, ಮಲಯ ಪರ್ವತದ ಕಾಡುಗಳಲ್ಲಿ ಸಂಚರಿಸುವವನೂ, ಅಷ್ಟಾಪದ (ಶರಭ)ವೆಂಬ ಮೃಗದ ಹೆಜ್ಜೆಯಂತಿರುವ ಹೆಜ್ಜೆಯುಳ್ಳವನೂ, ಕುದುರೆಯ ಕಂಠದಂತೆ ಕತ್ತುಳ್ಳವನೂ, ಹಂದಿಯ ಮೊಗದಂತೆ ಮುಖವುಳ್ಳವನೂ, ಕುದುರೆಯ ಕಂಠದಂತೆ ಕಂಠವುಳ್ಳವನೂ ಆದ ಪುರುಷ ಸ್ವರೂಪದಲ್ಲಿರುವುದು. ಇದರ ಅಧಿಪತಿ ಚಂದ್ರನು.

**ಪದ್ಮಾರ್ಚಿತಾ ಮೂರ್ಧನಿ ಭೋಗಿಯುಕ್ತಾ ।**
**ಸ್ತ್ರೀಕರ್ಕಶಾರಣ್ಯ ಗತಾವಿರೌತಿ ॥**
**ಶಾಖಾಂ ಪಲಾಶಸ್ಯ ಸಮಾಶ್ರಿತಾ ಚ ।**
**ಮಧ್ಯೇ ಸ್ಥಿತಃ ಕರ್ಕಟಕಸ್ಯ ರಾಶೇಃ ॥೧೧॥**

ಕರ್ಕಾಟಕ ರಾಶಿಯ ಮಧ್ಯದ್ರೇಕ್ಕಾಣವು ಪದ್ಮವನ್ನು ಪೂಜಿಸುವವಳೂ, ತಲೆಯಲ್ಲಿ ಸರ್ಪವುಳ್ಳವಳೂ, ಕಠಿಣಳೂ, ಅರಣ್ಯವನ್ನು ಹೊಂದಿದವಳೂ, ಅಳುವವಳೂ, ಮುತ್ತುಗ (ಪಲಾಶ)ದ ಹರೆಯನ್ನು ಆಶ್ರಯಿಸಿದವಳೂ ಆಗಿರುವ ಸ್ತ್ರೀರೂಪದಲ್ಲಿರುವುದು ಇದು ಸರ್ಪ ಮತ್ತು ಸ್ತ್ರೀದ್ರೇಕ್ಕಾಣವು. ಇದರ ಅಧಿಪತಿಯು ಕುಜನು.

**ಭಾರ್ಯಾ ಭರಣಾರ್ಥಮರ್ಣವೇ ।**
**ನೌಸ್ಥೋ ಗಚ್ಛತಿ ಸರ್ಪವೇಷ್ಟಿತಃ ॥**
**ಹೈಮೈಶ್ಚಯುತೋ ವಿಭೂಷಣೈ ।**
**ಶ್ಚಿಪಿಟಾ ಸ್ಯೋಂತ್ಯ ಗತಸ್ಯ ಕರ್ಕಟೇ ॥೧೨॥**

ಕರ್ಕಾಟಕದ ಅಂತ್ಯದ್ರೇಕ್ಕಾಣವು ಹೆಂಡತಿಯ ಆಭರಣಾರ್ಥವಾಗಿ ಸಮುದ್ರದಲ್ಲಿ, ಹಡಗಿನಲ್ಲಿ ಕುಳಿತು ಹೋಗುವವನೂ, ಸರ್ಪದಿಂದ ಸುತ್ತಲ್ಪಟ್ಟವನೂ, ಕನಕಾಭರಣಗಳುಳ್ಳವನೂ (ದೊಡ್ಡ ಮೊಗವುಳ್ಳವನೂ ಪಾಠವಿದೆ), ಗುಬ್ಬಚ್ಚಿಯಂತೆ ಬಾಯಿಯುಳ್ಳವನೂ ಆದ ಪುರುಷನ ಸ್ವರೂಪ ದಲ್ಲಿರುವುದು. ಇದು ಸರ್ಪ ಮತ್ತು ಪುರುಷ ದ್ರೇಕ್ಕಾಣವು. ಇದರ ಅಧಿಪತಿ ಗುರುವು

**ಶಲ್ಮಲೇರು ಪರಿಗೃಧ್ರ ಜಂಬುಕ ।**
**ಶ್ವಾನರಶ್ಚ ಮಲಿನಾಂ ಬರಾನ್ವಿತಾ ॥**
**ರೌತಿಮಾತೃ ಪಿತೃ ವಿಪ್ರಯೋಜಿತಃ ।**
**ಸಿಂಹರೂಪ ಮಿದಮಾಧ್ಯ ಮುಚ್ಯತೇ ॥೧೩॥**

ಸಿಂಹದ ಪ್ರಥಮ ದ್ರೇಕ್ಕಾಣವು ಬೂರುಗ ಮರದ ಮೇಲಿರುವ ಹದ್ದಿನ ಶಬ್ದ, ನರಿಯ ಶಬ್ದ, ನಾಯಿಯ ಶಬ್ದ ಇವುಗಳಂತೆ ಶಬ್ದವುಳ್ಳವನೂ, ಮಲಿನವಾದ ಬಟ್ಟೆಯುಳ್ಳವನೂ, ತಾಯಿತಂದೆ ಗಳಿಲ್ಲದವನೂ ಆಗಿರುವ ಪುರುಷ ಸ್ವಭಾವದಂತಿರುವುದು. ಇದು ಪಕ್ಷಿ ಮತ್ತು ಪುರುಷ ದ್ರೇಕ್ಕಾಣವು. ಇದರ ಅಧಿಪತಿ ಸೂರ್ಯನು.

ಹಯಾಕೃತಿಃ ಪಾಂಡುರ ಮಾಲ್ಯ ಶೇಖರೋ ।
ಬಿಭರ್ತಿ ಕೃಷ್ಣಾಜಿನ ಕಂಬಳಂ ನರಃ ॥
ದುರಾಸದಸ್ಸಿಂಹ ಇವಾತ್ತ ಕಾರ್ಮುಕೋ ।
ನತಾಗ್ರನಾ ಸೋಮೃಗ ರಾಜಮಧ್ಯಮಃ ॥೧೪॥

ಸಿಂಹ ಮಧ್ಯ ದ್ರೇಕ್ಕಾಣವು ಕುದುರೆಯ ಆಕೃತಿಯುಳ್ಳವನೂ, ಬಿಳಿಯ ಪುಷ್ಪಮಾಲೆಯನ್ನು ಧರಿಸಿದ ತಲೆಯುಳ್ಳವನೂ, ಕಂಬಳಿ ಮತ್ತು ಕೃಷ್ಣಾಜಿನಗಳನ್ನು ಧರಿಸಿದವನೂ, ಸಿಂಹದಂತೆ ಸಮಿೂಪಕ್ಕೆ ಯಾರೂ ಬಾರದಂತೆ ಇರತಕ್ಕವನೂ, ಧನುರ್ಧರನೂ, ತುದಿಯಲ್ಲಿ ಸ್ವಲ್ಪ ಬಗ್ಗಿದ ಮೂಗುಳ್ಳವನೂ ಆಗಿರುವ ಪುರುಷ ಸ್ವರೂಪದಲ್ಲಿರುವುದು. ಇದು ಚತುಷ್ಪಾದ ಮತ್ತು ಮನುಷ್ಯ ದ್ರೇಕ್ಕಾಣವು. ಇದರ ಅಧಿಪತಿ ಗುರುವು.

ಋಕ್ಷಾನನೋ ವಾನರ ತುಲ್ಯ ಚೇಷ್ಟೋ ।
ಬಿಭರ್ತಿದಂಡಂ ಫಲಮಾಮಿಷಂ ಚ ॥
ಕೂರ್ಚೀ ಮನುಷ್ಯಃ ಕುಟಿಲಶ್ಚಕೇಶೈ ।
ಮೃಗೇಶ್ವರ ಸ್ಯಾಂತಗತ ಸ್ತ್ರಿ ಭಾಗಃ ॥೧೫॥

ಸಿಂಹದ ಅಂತ್ಯ ದ್ರೇಕ್ಕಾಣವು ಕರಡಿಯ ಮುಖದಂತೆ ಮೊಗವುಳ್ಳವನೂ, ಮಂಗನಂತೆ ಚೇಷ್ಟೆ ಮಾಡುವವನೂ, ಕೈಯಲ್ಲಿ ದಂಡ, ಹಣ್ಣುಗಳು ಮತ್ತು ಮಾಂಸ ಇವನ್ನು ಧರಿಸಿದವನೂ, ಉದ್ದವಾದ ಮಿೂಸೆಯುಳ್ಳವನೂ, ಕುಟಿಲವಾದ ಕೇಶವುಳ್ಳವನೂ ಆಗಿರುವ ಪುರುಷ ಸ್ವಭಾವ ದಲ್ಲಿರುವುದು. ಇದು ಚತುಷ್ಪಾದ ಮತ್ತು ಮನುಷ್ಯ ದ್ರೇಕ್ಕಾಣವು ಇದರ ಅಧಿಪತಿ ಕುಜನು.

ಪುಷ್ಪ ಪೂರ್ಣೇನ ಘಟೇನ ಕನ್ಯಾ ।
ಮಲಪ್ರದಿಗ್ಧಾಂಬರ ಸಂವೃತಾಂಗೀ ॥
ವಸ್ತ್ರಾರ್ಥ ಸಂಯೋಗಮ ಭೀಪ್ಸಮಾನಾ ।
ಗುರೋಃ ಕುಲಂ ವಾಂಛತಿ ಕನ್ಯಕಾದ್ಯಃ ॥೧೬॥

ಕನ್ಯೆಯ ಆದಿ ದ್ರೇಕ್ಕಾಣವು ಪುಷ್ಪಭರಿತವಾದ ಕೊಡದಿಂದ ಕೂಡಿದವಳಾಗಿಯೂ, ಮಲಿನವಾದ ಬಟ್ಟೆಯನ್ನುಟ್ಟುಕೊಂಡವಳೂ, ವಸ್ತ್ರ, ಧನ ಇವುಗಳನ್ನು ಬಯಸುವವಳೂ, ಗುರುಕುಲವನ್ನಪೇಕ್ಷಿಸು ವವಳೂ ಆದ ಸ್ತ್ರೀರೂಪದಲ್ಲಿರುವುದು. ಇದು ಸ್ತ್ರೀ ದ್ರೇಕ್ಕಾಣವು. ಇದರ ಅಧಿಪತಿ ಬುಧನು.

ಪುರುಷಃ ಪ್ರಗೃಹೀತ ಲೇಖನ ।
ಶ್ಯಾಮೋ ವಸ್ತ್ರಶಿರಾ ವ್ಯಯಾಯ ಕೃತ್ ॥
ವಿಪುಲಂಚ ಬಿಭರ್ತಿ ಕಾರ್ಮುಖಂ ।
ರೋಮವ್ಯಾಪ್ತ ತನುಶ್ಚ ಮಧ್ಯಮಃ ॥೧೭॥

ಕನ್ನೆಯ ಮಧ್ಯ ದ್ರೇಕ್ಕಾಣವು ಲೇಖನಿಯನ್ನು ಹಿಡಿದಿರುವವನೂ, ಶ್ಯಾಮವರ್ಣದವನೂ, ತಲೆಗೆ ವಸ್ತ್ರವುಳ್ಳವನೂ, ಆಯವ್ಯಯ ಲೆಖ್ಖ ಬರೆಯುವವನೂ, ದೊಡ್ಡ ಬಿಲ್ಲನ್ನು ಧರಿಸಿರುವವನೂ, ರೋಮದಿಂದ ವ್ಯಾಪ್ತವಾದ ಮೈಯುಳ್ಳವನೂ ಆದ ಪುರುಷ ರೂಪದಲ್ಲಿರುವುದು. ಇದು ಪುರುಷ ದ್ರೇಕ್ಕಾಣವು. ಇದರ ಅಧಿಪತಿ ಶನಿಯು

**ಗೌರೀ ಸುಧೌತಾ ಗ್ರದುಕೂಲ ಗುಪ್ತಾ ।**
**ಸಮುಚ್ಛ್ರಿತಾ ಕುಂಭಕಟೇಚ್ಛು ಹಸ್ತಾ ॥**
**ದೇವಾಲಯಂ ಸ್ತ್ರೀಪ್ರಯತಾ ಪ್ರವೃತ್ತಾ ।**
**ವದಂತಿ ಕನ್ಯಾಂತ ಗತಸ್ತ್ರಿ ಭಾಗಃ ॥೧೮॥**

ಕನ್ನೆಯ ಅಂತ್ಯ ದ್ರೇಕ್ಕಾಣವು ಬಿಳಿಯ ಬಣ್ಣವುಳ್ಳವಳೂ, ಒಳ್ಳೆಯ ಸೆರಗು ಅಂಚುಳ್ಳ ಪೀತಾಂಬರ ಧರಿಸಿರುವವಳೂ, ಅತ್ಯಂತ ಉದ್ದವಾಗಿರುವವಳೂ, ಮೇಲಕ್ಕೆತ್ತಿಕೊಂಡ ಕೊಡ, ಚಾಪೆ, ಸೌಟು ಇವುಗಳನ್ನು ಹಿಡಿದುಕೊಂಡವಳೂ, ತಪ್ಪದೆ ದೇವಾಲಯಕ್ಕೆ ಹೋಗುತ್ತಿರುವವಳೂ ಆಗಿರುವ ಸ್ತ್ರೀರೂಪದಲ್ಲಿರುವುದು ಇದು ಸ್ತ್ರೀ ದ್ರೇಕ್ಕಾಣವು ಇದರ ಅಧಿಪತಿ ಶುಕ್ರನು

**ವೀಥ್ಯಂತರಾಪಣ ಗತಃ ಪುರುಷಸ್ತುಲಾವಾ ।**
**ನುನ್ಮಾನ ಮಾನಕುಶಲಃ ಪ್ರತಿಮಾನ ಹಸ್ತಃ ॥**
**ಭಾಂಡಂ ವಿಚಿಂತಯತಿ ತಸ್ಯ ಚ ಮೂಲಮೇತ ।**
**ದ್ರೂಪಂ ವದಂತಿ ಯವನಾಃ ಪ್ರಥಮಂ ತುಲಾಯಾಃ ॥೧೯॥**

ತುಲೆಯ ಆದಿ ದ್ರೇಕ್ಕಾಣವು ಬೀದಿಯಲ್ಲಿರುವ ಅಂಗಡಿಯಲ್ಲಿರುವವನಾಗಿಯೂ, ತಕ್ಕಡಿಯನ್ನು ಹಿಡಿದವನಾಗಿಯೂ, ತೂಕ ಅಳತೆಗಳಲ್ಲಿ ಕುಶಲನೂ, ಬಂಗಾರದ ಒರೆಗಲ್ಲನ್ನು ಕೈಯಲ್ಲಿ ಹಿಡಿದವನೂ, ತನ್ನ ವ್ಯಾಪಾರದ ಬಂಡವಾಳವನ್ನು ಚಿಂತಿಸುತ್ತಿರುವವನೂ ಆಗಿರುವ ಪುರುಷ ಸ್ವರೂಪದಲ್ಲಿರುವುದೆಂದು ಯವನರು ಹೇಳುತ್ತಾರೆ. ಇದು ಮನುಷ್ಯ ದ್ರೇಕ್ಕಾಣವು ಇದರ ಅಧಿಪತಿ ಶುಕ್ರನು

**ಕಲಶಂ ಪರಿಗೃಹ್ಯ ವಿನಿಷ್ಪತಿತುಂ ।**
**ಸಮಭೀಪ್ಸತಿ ಗೃಧ್ರಮುಖಃ ಪುರುಷಃ ॥**
**ಕ್ಷುಧಿತಸ್ತೃಷಿತಶ್ಚ ಕಳತ್ರ ಸುತಾನ್ ।**
**ಮನಸೇತಿ ತುಲಾಧರ ಮಧ್ಯಗತಃ ॥೨೦॥**

ತುಲೆಯ ಮಧ್ಯ ದ್ರೇಕ್ಕಾಣವು ನೀರು ತುಂಬಿದ ಕೊಡವನ್ನು ಹಿಡಿದುಕೊಂಡು ನೀರೆರೆಯಲು ಇಚ್ಛಿಸುವವನೂ, ಹದ್ದಿನಂತೆ ಮುಖವುಳ್ಳವನೂ, ಹಸಿವುಳ್ಳವನೂ, ಬಾಯಾರಿಕೆಯುಳ್ಳವನೂ, ಮನಸ್ಸಿನಿಂದ ಹೆಂಡಿರು ಮಕ್ಕಳನ್ನು ಚಿಂತಿಸುವವನೂ ಆಗಿರುವ ಪುರುಷ ಸ್ವಭಾವದಲ್ಲಿರುವುದು. ಇದು ಮನುಷ್ಯ ಮತ್ತು ಪಕ್ಷಿ ದ್ರೇಕ್ಕಾಣವು. ಇದರ ಅಧಿಪತಿ ಶನಿಯು.

**ವಿಭೀಷಯಂ ಸ್ತಿಷ್ಠತಿ ರತ್ನ ಚಿತ್ರಿತೋ ।**
**ವನೇ ಮೃಗಾನ್ ಕಾಂಚನ ತೂಣವರ್ಮಭೃತ್ ॥**
**ಫಲಾಮಿಷಂ ವಾನರ ರೂಪಭೃನ್ನರ ।**
**ಸ್ತುಲಾವಸಾನೇ ಯವನೈರುದಾಹೃತಃ ॥೨೧॥**

ತುಲೆಯ ಅಂತ್ಯ ದ್ರೇಕ್ಕಾಣವು ರತ್ನಗಳಿಂದ ಅಲಂಕರಿಸಲ್ಪಟ್ಟವನೂ, ವನದಲ್ಲಿ ಮೃಗಗಳನ್ನು ಹೆದರಿಸುವವನೂ, ಬಂಗಾರದ ಬಾಣ, ಬತ್ತಳಿಕೆ ಮತ್ತು ಕವಚಗಳನ್ನು ಧರಿಸಿದವನೂ, ಹಣ್ಣನ್ನು, ಮಾಂಸವನ್ನು ಧರಿಸಿಕೊಂಡು ನಿಂತವನೂ, ಕಪಿಯ ರೂಪಧಾರಿಯೂ ಆಗಿರುವ ಪುರುಷನ ಸ್ವರೂಪದಲ್ಲಿರುವುದು. ಇದು ಪುರುಷ ಚತುಷ್ಪಾದ ಮತ್ತು ಆಯುಧ ದ್ರೇಕ್ಕಾಣವು. ಇದರ ಅಧಿಪತಿ ಬುಧನು.

**ವಸ್ತ್ರೈರ್ವಿಹೀನಾ ಭರಣೈಶ್ಚ ನಾರೀ ।**
**ಮಹಾ ಸಮುದ್ರಾತ್ಸ ಮುಪೈತಿ ಕೂಲಮ್ ॥**
**ಸ್ಥಾನಚ್ಯುತಾ ಸರ್ಪ ನಿಬದ್ಧಪಾದಾ ।**
**ಮನೋರಮಾ ವೃಶ್ಚಿಕರಾಶಿ ಪೂರ್ವಃ ॥ ೨೨॥**

ವೃಶ್ಚಿಕ ರಾಶಿಯ ಆದಿ ದ್ರೇಕ್ಕಾಣವು ವಸ್ತ್ರಾಭರಣಗಳಿಂದ ವಿಹೀನಳೂ, ಸರ್ಪಸ್ಥಾನಚ್ಯುತಳೂ, ಸರ್ಪದಿಂದ ಸುತ್ತಲ್ಪಟ್ಟ ಕಾಲುಗಳುಳ್ಳವಳೂ, ಮಹಾ ಸಮುದ್ರದಿಂದ ತೀರಕ್ಕೆ ಬರುತ್ತಿರುವವಳೂ, ಸುಂದರಿಯೂ ಆಗಿರುವ ಸ್ತ್ರೀರೂಪವನ್ನು ಧರಿಸಿರುವುದು. ಇದು ಸ್ತ್ರೀ ಮತ್ತು ಸರ್ಪ ದ್ರೇಕ್ಕಾಣವು. ಇದರ ಅಧಿಪತಿ ಕುಜನು.

**ಸ್ಥಾನಸುಖಾನ್ಯಭಿ ವಾಂಛತಿ ನಾರೀ ।**
**ಭರ್ತೃ ಕೃತೇ ಭುಜಗಾವೃತ ದೇಹಾ ॥**
**ಕಚ್ಛಪ ಕುಂಭ ಸಮಾನ ಶರೀರಾ ।**
**ವೃಶ್ಚಿಕ ಮಧ್ಯಮ ರೂಪ ಮುಶಂತಿ ॥೨೩॥**

ವೃಶ್ಚಿಕದ ಮಧ್ಯ ದ್ರೇಕ್ಕಾಣವು ಗಂಡನಿಗಾಗಿ ಸ್ಥಾನ ಸುಖ ಇವುಗಳನ್ನು ಇಚ್ಛಿಸುವವಳೂ, ಸರ್ಪದಿಂದ ಸುತ್ತಲ್ಪಟ್ಟವಳೂ, ಆಮೆ ಮತ್ತು ಕೊಡ ಇವಕ್ಕೆ ಸಮಾನವಾದ ಶರೀರವುಳ್ಳವಳೂ ಆಗಿರುವ ಸ್ತ್ರೀರೂಪದಲ್ಲಿರುವುದು. ಇದು ಸ್ತ್ರೀ ಮತ್ತು ಸರ್ಪ ದ್ರೇಕ್ಕಾಣವು. ಇದರ ಅಧಿಪತಿಯು ಗುರುವು.

**ಪೃಥುಲ ಚಿಪಿಟ ಕೂರ್ಮ ತುಲ್ಯವಕ್ತ್ರಃ ।**
**ಶ್ವಮೃಗವರಾಹ ಸೃಗಾಲಭೀತಿಕಾರೀ ॥**
**ಅವತಿಚ ಮಲಯಾಚಲ ಪ್ರದೇಶಂ ।**
**ಮೃಗಪತಿ ರಂತ್ಯಗತಶ್ಚ ವೃಶ್ಚಿಕಸ್ಯ ॥೨೪॥**

ವೃಶ್ಚಿಕದ ಅಂತ್ಯ ದ್ರೇಕ್ಕಾಣವು ವಿಶಾಲವಾಗಿ ತಟ್ಟೆಯಾಗಿ ಆಮೆಯಂತೆ ಇರುವ ಮೊಗವುಳ್ಳವನೂ, ನಾಯಿ, ಜಿಂಕೆ, ಹಂದಿ, ನರಿ ಇವುಗಳಿಗೆ ಭಯಕಾರಿಯೂ, ಮಲಯಾಚಲ ಪ್ರದೇಶದ ರಕ್ಷಕನೂ ಆಗಿರುವ ಪುರುಷನ ಸ್ವರೂಪದಂತಿರುವುದು ಇದು ಪುರುಷ ಮತ್ತು ಪಶು ದ್ರೇಕ್ಕಾಣವು ಇದರ ಅಧಿಪತಿಯು ಚಂದ್ರನು

**ಮನುಷ್ಯ ವಕ್ತ್ರೋ ಶ್ವಸಮಾನ ಕಾಯೋ ।**
**ಧನುರ್ವಿ ಗೃಹ್ಯಾಯತ ಮಾಶ್ರಮಸ್ಥ: ॥**
**ಕ್ರತೂಪಯೋಜ್ಯಾನಿ ತಪಸ್ವಿನಶ್ಚ ।**
**ರರಕ್ಷ ಪೂರ್ವೋ ಧನುಷ ಸ್ತ್ರಿಭಾಗ: ॥೨೫॥**

ಧನುವಿನ ಆದಿ ದ್ರೇಕ್ಕಾಣವು ಮನುಷ್ಯನಂತೆ ಮುಖವುಳ್ಳವನೂ, ಕುದುರೆಯಂತೆ ಮೈಯುಳ್ಳವನೂ, ಧನುವನ್ನು ಹಿಡಿದುಕೊಂಡು ಆಶ್ರಮದಲ್ಲಿದ್ದು ಯಜ್ಞಗಳಿಗೆ ಉಪಯೋಗ ವಾದ ವಸ್ತುಗಳನ್ನೂ, ಋಷಿಗಳನ್ನೂ ಸಂರಕ್ಷಿಸತಕ್ಕವನೂ ಆಗಿರುವ ಪುರುಷ ಸ್ವರೂಪದಂತಿರು ವುದು ಇದು ಮನುಷ್ಯ ಮತ್ತು ಚತುಷ್ಪಾದ ದ್ರೇಕ್ಕಾಣವು ಇದರ ಅಧಿಪತಿಯು ಗುರುವು

**ಮನೋರಮಾ ಚಂಪಕ ಹೇಮವರ್ಣಾ ।**
**ಭದ್ರಾಸನೇ ತಿಷ್ಠತಿ ಮಧ್ಯರೂಪಾ ॥**
**ಸಮುದ್ರ ರತ್ನಾನಿ ವಿಘಟ್ಟಯಂತೀ ।**
**ಮಧ್ಯ ತ್ರಿಭಾಗೋ ಧನುಷ: ಪ್ರದಿಷ್ಟ: ॥೨೬॥**

ಧನುಸ್ಸಿನ ಮಧ್ಯ ದ್ರೇಕ್ಕಾಣವು ಮನೋಹರಳೂ, ಸಂಪಿಗೆಯ ಹೂವಿನಂತಿರುವ ಬಂಗಾರದ ವರ್ಣದವಳೂ, ಭದ್ರಾಸನ (ಪೀಠ)ದ ಮೇಲೆ ಕುಳಿತವಳೂ, ನಡುವಯಸ್ಸಿನ ರೂಪವುಳ್ಳವಳೂ, ಸಮುದ್ರದ ರತ್ನಗಳನ್ನು ಮರ್ದಿಸುವವಳೂ (ರತ್ನಗಳಿಂದ ಕ್ರೀಡಿಸುವವಳೂ) ಆದ ಹೆಂಗಸಿನ ಸ್ವರೂಪದಲ್ಲಿರುವುದು ಇದು ಸ್ತ್ರೀ ದ್ರೇಕ್ಕಾಣವು. ಇದರ ಅಧಿಪತಿಯೂ ಕುಜನು

**ಕೂರ್ಚೀನರೋಹಾಟಕ ಚಂಪಕಾಭೋ ।**
**ವರಾಸನೇ ದಂಡಧರೋ ನಿಷಣ್ಣ: ॥**
**ಕೌಶೇಯ ಕಾನ್ಯುದ್ವಹತೇ ಜಿನಂ ಚ ।**
**ತೃತೀಯ ರೂಹಂ ನವಮಸ್ಯರಾಶೇ: ॥೨೭॥**

ಧನುವಿನ ಅಂತ್ಯ ದ್ರೇಕ್ಕಾಣವು (ಉದ್ದವಾದ ಗಡ್ಡ ಮೀಸೆಯುಳ್ಳವನೂ), ಮೀಸೆ ಇರುವವನೂ, ಸ್ವರ್ಣ ಮತ್ತು ಸಂಪಿಗೆಯಂತೆ ಮೈಬಣ್ಣವುಳ್ಳವನೂ, ಶ್ರೇಷ್ಠವಾದ ಆಸನದಲ್ಲಿ ದಂಡವನ್ನು ಧರಿಸಿ ಕುಳಿತಿರುವವನೂ, ಪಟ್ಟೆ ವಸ್ತ್ರ ಮತ್ತು ಕೃಷ್ಣಾಜಿನವನ್ನು ಧರಿಸಿದವನೂ ಆದ ಮನುಷ್ಯ ಸ್ವರೂಪ ದಲ್ಲಿರುವುದು. ಇದು ಮನುಷ್ಯ ಮತ್ತು ಆಯುಧ ದ್ರೇಕ್ಕಾಣವು. ಇದರ ಅಧಿಪತಿಯು ಸೂರ್ಯನು.

ರೋಮಚಿತೋ ಮಕರೋಪ ಮದಂಷ್ಟ್ರಃ ।
ಸೂಕರ ಕಾಯ ಸಮಾನ ಶರೀರಃ ॥
ಯೋಕ್ತ್ರಕ ಜಾಲಕ ಬಂಧನಧಾರೀ ।
ರೌದ್ರ ಮುಖೋ ಮಕರೇ ಪ್ರಥಮ ಸ್ಯಾತ್ ॥೨೮॥

ಮಕರದ ಪ್ರಥಮ ದ್ರೇಕ್ಕಾಣವು, ರೋಮಯುಕ್ತನೂ, ಮೊಸಳೆಯ ಹಲ್ಲಿನಂತೆ ಹಲ್ಲುಳ್ಳವನೂ, ಕಾಡುಹಂದಿಗೆ ಸಮಾನವಾದ ಮೈಯುಳ್ಳವನೂ, ಹಗ್ಗ ಬಲೆ ಜುಟ್ಟು ಇವನ್ನು ಧರಿಸಿದವನೂ, ಕ್ರೂರವಾದ ಮುಖವುಳ್ಳವನೂ ಆಗಿರುವ ಪುರುಷಸ್ವರೂಪದಲ್ಲಿರುವುದು ಇದು ಪುರುಷ ಆಯುಧ ಮತ್ತು ಚತುಷ್ಪಾದ ದ್ರೇಕ್ಕಾಣವು ಇದರ ಅಧಿಪತಿಯು ಶನಿಯು.

ಕಲಾ ಸ್ವಭಿಜ್ಞಾಬ್ಜದಳಾಯತಾಕ್ಷೀ ।
ಶ್ಯಾಮಾ ವಿಚಿತ್ರಾಣಿ ಚ ಮಾರ್ಗಮಾಣಾ ॥
ವಿಭೂಷಣಾಲಂಕೃತ ಲೋಹಕರ್ಣಾ ।
ಯೋಷಾ ಪ್ರದಿಷ್ಟಾ ಮಕರಸ್ಯ ಮಧ್ಯೇ ॥೨೯॥

ಮಕರದ ಮಧ್ಯ ದ್ರೇಕ್ಕಾಣವು ಕಲೆಗಳಲ್ಲಿ ಅಭಿಜ್ಞಳೂ, ಕಮಲದಂತೆ ಕಣ್ಣುಳ್ಳವಳೂ, ಶ್ಯಾಮಲ ವರ್ಣದವಳೂ, ಚಿತ್ರವಿಚಿತ್ರಗಳನ್ನು ಹುಡುಕುವವಳೂ, ಕಬ್ಬಿಣದ ಆಭರಣಗಳಿಂದ ಅಲಂಕರಿಸಲ್ಪಟ್ಟ ಕಿವಿಗಳುಳ್ಳವಳೂ ಆದ ಸ್ತ್ರೀಸ್ವರೂಪದಲ್ಲಿರುವುದು ಇದು ಸ್ತ್ರೀ ದ್ರೇಕ್ಕಾಣವು. ಇದರ ಅಧಿಪತಿಯು ಶುಕ್ರನು

ಕಿನ್ನರೋಪಮ ತನುಸ್ಸ ಕಂಬಳ ।
ಸ್ತೂಣಚಾಪಕವಚೈ ಸ್ಸಮನ್ವಿತಂ ॥
ಕುಂಭಮುದ್ವ ಹತಿರತ್ನ ಚಿತ್ರಿತಂ ।
ಸ್ಕಂಧಗಂ ಮಕರ ರಾಶಿ ಪಶ್ಚಿಮಃ ॥೩೦॥

ಮಕರದ ಅಂತ್ಯ ದ್ರೇಕ್ಕಾಣವು ಕಿನ್ನರರಿಗೆ ಸಮಾನವಾದ ಮೈಯುಳ್ಳವನೂ, ಕಂಬಳಿಯಿಂದ ಕೂಡಿದವನೂ, ಬಿಲ್ಲು ಬತ್ತಳಿಕೆ ಮತ್ತು ಕವಚಗಳನ್ನು ಧರಿಸಿದವನೂ, ರತ್ನಗಳಿಂದ ಕೆತ್ತಲ್ಪಟ್ಟ ಕೊಡವನ್ನು ಭುಜದಲ್ಲಿ ಹೊತ್ತುಕೊಂಡಿರುವವನೂ ಆದ ಪುರುಷ ಸ್ವರೂಪದಲ್ಲಿರುವುದು. ಇದು ಪುರುಷ ಮತ್ತು ಆಯುಧ ದ್ರೇಕ್ಕಾಣವು ಇದರ ಅಧಿಪತಿ ಬುಧನು.

ಸ್ನೇಹಮದ್ಯ ಜಲಭೋಜನಾಗಮ ।
ವ್ಯಾಕುಲೀಕೃತ ಮನಾಸ್ಸ ಕಂಬಳಃ ॥
ಕೋಶಕಾರ ವಸನೋ ಜಿನಾನ್ವಿತೋ ।
ಗೃಧ್ರ ತುಲ್ಯ ವದನೋ ಘಟಾದಿಗಃ ॥೩೧॥

ಕುಂಭದ ಆದಿ ದ್ರೇಕ್ಕಾಣವು, ತೈಲ, ಮದ್ಯ, ಜಲ, ಭೋಜನ ಇವುಗಳನ್ನು ಸಂಪಾದಿಸುವುದರಲ್ಲಿ ವ್ಯಾಕುಲವಾದ ಮನಸ್ಸುಳ್ಳವನೂ, ಕಂಬಳಿಯನ್ನು ಹೊಂದಿದವನೂ, ಪಟ್ಟೆಯ ವಸ್ತ್ರ ಮತ್ತು ಕೃಷ್ಣಾಜಿನಗಳುಳ್ಳವನೂ, ಹದ್ದಿನಂತೆ ಮುಖವುಳ್ಳವನೂ ಆದ ಪುರುಷ ಸ್ವರೂಪದಲ್ಲಿರುವುದು ಇದು ಪುರುಷ ಮತ್ತು ಪಕ್ಷಿ ದ್ರೇಕ್ಕಾಣವು. ಇದರ ಅಧಿಪತಿಯು ಶನಿಯು.

ದಗ್ಧೇ ಶಕಟೆಸಶಾಲ್ಮಲೀ ।
ಲೋಹಾನ್ಯಾ ಹರತಾಂಗನಾವನೇ ॥
ಮಲಿನೇನ ಪಟೇನ ಸಂವೃತಾ ।
ಭಾಂಡೈ ಮೂರ್ಧ್ನಿ ಗತ್ಯೈಶ್ಚ ಮಧ್ಯಮಃ ॥ ೩೨ ॥

ಕುಂಭರಾಶಿಯ ಮಧ್ಯ ದ್ರೇಕ್ಕಾಣವು ಮಲಿನ ವಸ್ತ್ರವನ್ನು ಧರಿಸಿ ಗಾಡಿಯಲ್ಲಿ ಹೋಗಿ ಸುಟ್ಟು ಹೋಗಿರುವ ಬೂರುಗದ ಮರಗಳ ವನದಲ್ಲಿ ಲೋಹವನ್ನು ಹುಡುಕುವವಳೂ, ತಲೆಯಲ್ಲಿ ಕೊಡವನ್ನು ಧರಿಸಿದವಳೂ ಆಗಿರುವ ಹೆಂಗಸಿನ ರೂಪವನ್ನು ಧರಿಸಿರುತ್ತದೆ ಇದು ಸ್ತ್ರೀ ಮತ್ತು ಆಯುಧ ದ್ರೇಕ್ಕಾಣವು. ಇದರ ಅಧಿಪತಿಯು ಬುಧನು

ಶ್ಯಾಮಸ್ಸರೋಮ ಶ್ರವಣಃ ಕಿರೀಟೀ ।
ತ್ವಕ್ಪತ್ರ ನಿರ್ಯಾಸ ಫಲಂ ಬಿಭರ್ತಿ ॥
ಭಾಂಡಾನಿ ಲೋಹವ್ಯತಿ ಮಿಶ್ರಿತಾನಿ ।
ಸಂಚಾರಯತ್ಯಂತ್ಯ ಗತೋ ಘಟಸ್ಯ ॥ ೩೩ ॥

ಕುಂಭರಾಶಿಯ ಅಂತ್ಯ ದ್ರೇಕ್ಕಾಣವು ಕಪ್ಪು ದೇಹವುಳ್ಳವನೂ, ಕೂದಲಿರುವ ಕಿವಿಯುಳ್ಳವನೂ, ಮರದ ತೊಗಟೆ, ಎಲೆ, ಅಂಟು, ಹಣ್ಣು ಇವುಗಳನ್ನು ಹೊತ್ತುಕೊಂಡವನೂ, ಲೋಹ ಮಿಶ್ರವಾದ ಕೊಡವನ್ನು ಧರಿಸಿದವನೂ ಆಗಿರುವ ಪುರುಷ ಸ್ವರೂಪದಲ್ಲಿರುವುದು. ಇದು ಪುರುಷ ದ್ರೇಕ್ಕಾಣವು. ಇದರ ಅಧಿಪತಿಯು ಶುಕ್ರನು.

ಸ್ರುಗ್ಭಾಂಡ ಮುಕ್ತಾ ಮಣಿ ಶಂಖಮಿಶ್ರೈ ।
ರ್ವ್ಯಾಕ್ಷಿಪ್ತ ಹಸ್ತಸ್ಸ ವಿಭೂಷಣಶ್ಚ ॥
ಭಾರ್ಯಾ ಭರಣಾರ್ಥಿ ಮುಖಾಂ ನಿಧಾನಂ ।
ನಾವಾಪ್ಲವತ್ಯಾದಿ ಗತೋ ಝಷಸ್ಯ ॥ ೩೪ ॥

ಮೀನ ರಾಶಿಯ ಆದಿ ದ್ರೇಕ್ಕಾಣವು ಹೂಮಾಲೆ, ಕೊಡ, ಮುತ್ತು, ಮಣಿ, ಶಂಖ ಇವುಗಳಿಂದ ಕೂಡಿ ಹೆಚ್ಚು ಕಷ್ಟವನ್ನು ಹೊಂದಿದ ಕೈಯುಳ್ಳವನೂ, ಅಲಂಕಾರ ಮಾಡಿಕೊಂಡವನೂ, ಹೆಂಡತಿಯ ಆಭರಣಗಳಿಗಾಗಿ ನಾವೆಯಲ್ಲಿ ಕುಳಿತು ನೀರಿನ ಸಮೀಪದಲ್ಲಿ ಸಂಚರಿಸುವವನೂ ಆಗಿರುವ ಪುರುಷ ಸ್ವರೂಪದಂತಿರುವುದು. ಇದು ಪುರುಷ ದ್ರೇಕ್ಕಾಣವು. ಇದರ ಅಧಿಪತಿ ಗುರುವು.

ಅತ್ಯುಚ್ಛ್ರಿತ ಧ್ವಜಪತಾಕ ಮುಪೈತಿ ಪೋತಂ ।
ಕೂಲಂ ಪ್ರಯಾತಿ ಜಲಧೇಃ ಪರಿವಾರ ಯುಕ್ತಾ ॥
ವರ್ಣೇನ ಚಂಪಕ ಮುಖಾ ಪ್ರಮದಾ ತ್ರಿಭಾಗೋ ।
ಮೀನಸ್ಯ ಚೈಷ ಕಥಿತೋ ಮುನಿಭಿರ್ದ್ವಿತೀಯಃ ॥ ೩೫ ॥

ಮೀನದ ಮಧ್ಯ ದ್ರೇಕ್ಕಾಣವು ಬಹಳ ಎತ್ತರವಾದ ಧ್ವಜ ಪತಾಕೆಗಳುಳ್ಳ ದೋಣಿಯಲ್ಲಿ ಕುಳಿತು ಸಮುದ್ರಕ್ಕೆ ಹೋಗುತ್ತಿರುವವಳೂ, ಪರಿವಾರ ಪರಿವೃತಳೂ (ಪತಿ ಪುತ್ರಾದಿ ಪರಿವಾರದಿಂದ ಕೂಡಿದವಳೂ), ಸಂಪಿಗೆಯ ಹೂವಿನಂತೆ ಬಣ್ಣವುಳ್ಳವಳೂ, ಆಗಿರುವ ಸ್ತ್ರೀಸ್ವರೂಪದಲ್ಲಿರುವುದು ಇದು ಸ್ತ್ರೀ ದ್ರೇಕ್ಕಾಣವು. ಇದರ ಅಧಿಪತಿಯು ಚಂದ್ರನು.

ಶುಭ್ರಾಂತಿಕೇ ಸರ್ಪ ನಿವೇಷ್ಟಿತಾಂಗೋ ।
ವಸ್ತ್ರೈರ್ವಿಹೀನಃ ಪುರುಷಸ್ತ್ವಟವ್ಯಾಮ್ ॥
ಚೋರಾನಿಲ ವ್ಯಾಕುಲಿ ತಾಂತರಾತ್ಮಾ ।
ವಿಕ್ರೋಶ ತೇಂತ್ಯೋಷ ಗತೋ ಝಷಸ್ಯ ॥ ೩೬ ॥

ಮೀನದ ಅಂತ್ಯ ದ್ರೇಕ್ಕಾಣವು ಗುಹೆಯ ಸಮೀಪದಲ್ಲಿ ಹಾವಿನಿಂದ ಸುತ್ತಲ್ಪಟ್ಟು ವಸ್ತ್ರವಿಲ್ಲದೆ ಅಡವಿಯಲ್ಲಿರುವವನೂ, ಕಳ್ಳರು ಬೆಂಕಿ ಇವುಗಳಿಂದ ಪೀಡಿತನಾಗಿ ಕಳವಳವನ್ನು ಹೊಂದಿದ ಅಂತರಾತ್ಮವುಳ್ಳವನಾಗಿ ಹೆಚ್ಚು ಅಳುವವನೂ ಆಗಿರುವ ಪುರುಷ ಸ್ವರೂಪದಲ್ಲಿರುವುದು. ಇದು ಪುರುಷ ದ್ರೇಕ್ಕಾಣವು. ಇದರ ಅಧಿಪತಿ ಕುಜನು.

## ಉಪಸಂಹಾರ

ರಾಶಿಪ್ರಭೇದೋ ಗ್ರಹಯೋನಿಭೇದೋ ।
ವಿಯೋನಿ ಜನ್ಮಾಥ ನಿಷೇಕ ಕಾಲಃ ॥
ಜನ್ಮಾಥ ಸದ್ಯೋ ಮರಣಂ ತಥಾಯು ।
ರ್ದಶಾ ವಿಪಾಕೋಷ್ಟಕವರ್ಗ ಸಂಜ್ಞಃ ॥ ೩೭ ॥

ಹೋರಾಶಾಸ್ತ್ರವೆಂಬ ಈ ಬೃಹಜ್ಜಾತಕ ಗ್ರಂಥದಲ್ಲಿ ಹೇಳಲ್ಪಟ್ಟ ಅಧ್ಯಾಯ ಅನುಕ್ರಮಗಳು ೧ ರಾಶಿಭೇದ, ೨ ಗ್ರಹಯೋನಿಭೇದ, ೩ ವಿಯೋನಿಜನ್ಮ, ೪ ನಿಷೇಕ, ೫ ಜನ್ಮಕಾಲ ಲಕ್ಷಣ, ೬ ಅರಿಷ್ಟ, ೭ ಆಯುರ್ದಾಯ, ೮ ದಶಾವಿಪಾಕ, ೯ ಅಷ್ಟಕ ವರ್ಗವೆಂತಲೂ,

ಕರ್ಮಾಜೀವೋ ರಾಜಯೋಗಾಃ ಖಯೋಗಾ ।
ಶ್ಚಾಂದ್ರಾಯೋಗಾದ್ವಿ ಗ್ರಹಾದ್ಯಾಶ್ಚ ಯೋಗಾಃ ॥
ಪ್ರವ್ರಜ್ಯಾಥೊ ರಾಶಿಶೀಲಾನಿದೃಷ್ಟಿ ।
ರ್ಭಾವಸ್ತ ಸ್ಮಾದಾಶ್ರಯೋಥ ಪ್ರಕೀರ್ಣಃ ॥ ೩೮ ॥

೧೦ ಕರ್ಮಾಜೀವ, ೧೧ ರಾಜಯೋಗ, ೧೨ ನಾಭಸಯೋಗ, ೧೩ ಚಾಂದ್ರಯೋಗ, ೧೪ ದ್ವಿಗ್ರಹ ಯೋಗ, ೧೫ ಪ್ರವಜ್ಯಾ, ೧೬ ರಾಶಿಶೀಲ, ೧೭ ದೃಷ್ಟಿಫಲ, ೧೮ ಭಾವಫಲ, ೧೯ ಆಶ್ರಯ ಯೋಗ, ೨೦ ಪ್ರಕೀರ್ಣಯೋಗವೆಂತಲೂ,

ನೇಷ್ಟಾಯೋಗಾ ಜಾತಕಂ ಕಾಮಿನೀನಾಂ ।
ನಿರ್ಯಾಣಂ ಸ್ಯಾನ್ನಷ್ಟ ಜನ್ಮದೃಕಾಣಃ ॥
ಅಧ್ಯಾಯಾನಾಂ ವಿಂಶತಿಃ ಪಂಚಯುಕ್ತಾ ।
ಜನ್ಮನ್ಯೇ ತದ್ಯಾತ್ರಿ ಕಂಚಾಭಿಧಾಸ್ಯೇ ॥೩೯॥

೨೧ ಅನಿಷ್ಟಯೋಗ, ೨೨ ಸ್ತ್ರೀಜಾತಕ, ೨೩ ನಿರ್ಯಾಣ, ೨೪ ನಷ್ಟಜಾತಕ, ೨೫ ದ್ರೇಕ್ಕಾಣ ಸ್ವರೂಪವೆಂಬ ೨೫ ಅಧ್ಯಾಯಗಳಿಂದ ಈ ಗ್ರಂಥವು ಜಾತಕ ವಿಷಯದಲ್ಲಿ ಹೇಳಲ್ಪಟ್ಟಿದೆ. ಇದಲ್ಲದೆ ಯಾತ್ರಾಧ್ಯಾಯ ಬೃಹತ್ಸಂಹಿತಾದಿ ವಿಷಯಗಳನ್ನು ಹೇಳಿರುತ್ತಾರೆ.

ಪ್ರಶ್ನಾಸ್ತಿಥಿರ್ಭಂ ದಿವಸಃ ಕ್ಷಣಶ್ಚ ।
ಚಂದ್ರೋ ವಿಲಗ್ನಂ ತ್ವಥಲಗ್ನ ಭೇದಃ ॥
ಶುದ್ಧಿರ್ಗ್ರಹಾಣಾ ಮಥಚಾಪವಾದೋ ।
ವಿಮಿಶ್ರಕಾಖ್ಯಂ ತನುವೇ ಪನಂಚ ॥೪೦॥

೧ ಪ್ರಶ್ನ, ೨ ತಿಥಿ, ೩ ನಕ್ಷತ್ರ, ೪ ದಿವಸ, ೫ ಕ್ಷಣ, ೬ ಚಂದ್ರ, ೭ ಲಗ್ನ, ೮ ಲಗ್ನಭೇದ, ೯ ಗ್ರಹಶುದ್ಧಿ, ೧೦ ಅಪವಾದ, ೧೧ ಮಿಶ್ರಕ, ೧೨ ದೇಹಸ್ಫುರಣವೆಂತಲೂ,

ಅತಃ ಪರಂ ಗುಹ್ಯಕ ಪೂಜನಂಸ್ಯಾ ।
ತ್ಸ್ವಪ್ನಂ ತತಃ ಸ್ನಾನವಿಧಿಃ ಪ್ರದಿಷ್ಟಃ ॥
ಯಜ್ಞೋ ಗ್ರಹಾಣಾ ಮಥನಿರ್ಗಮಶ್ಚ ।
ಕ್ರಮಾಚ್ಚದಿಷ್ಟಃ ಶಕುನೋಪದೇಶಃ ॥೪೧॥

೧೩ ಗುಹ್ಯಕ ಪೂಜನ, ೧೪ ಸ್ವಪ್ನ, ೧೫ ಸ್ನಾನವಿಧಿ, ೧೬ ಗ್ರಹಯಜ್ಞ, ೧೭ ನಿರ್ಗಮ, ೧೮ ಶಕುನೋಪದೇಶ ಹೀಗೆ ಕ್ರಮವಾಗಿ ಹೇಳಲ್ಪಟ್ಟಿದೆ

ವಿವಾಹ ಕಾಲಃ ಕರಣಂ ಗ್ರಹಾಣಾಂ ।
ಪ್ರೋಕ್ತಂ ಪೃಥಕ್ ತದ್ವಿಪುಲಾಚ ಶಾಖಾ ॥
ಸ್ಕಂಧೈ ಸ್ತ್ರಿಭಿರ್ಜ್ಯೋತಿಷ ಸಂಗ್ರಹೋಯಂ ।
ಮಯಾಕೃತೋ ದೈವವಿದಾಂ ಹಿತಾಯ ॥೪೨॥

ವಿವಾಹಕಾಲ ೧೯ ಗ್ರಹಗಳ ಅನೇಕ ವಿಧವಾದ ಗಣಿತ ಶಾಖೆಗಳಿದ್ದು ಅದೆಲ್ಲವನ್ನೂ ಹೇಳಿದ "ಪಂಚಸಿದ್ಧಾಂತ" ಕರಣ ಗ್ರಂಥ ೨೦, ಈ ಪ್ರಕಾರವಾಗಿ ಮೂರು ಸ್ಕಂಧಗಳಿಂದ ಜ್ಯೋತಿ ಶ್ಶಾಸ್ತ್ರವನ್ನು ಸಂಗ್ರಹಿಸಿ ದೈವಜ್ಞರ ಹಿತಕ್ಕಾಗಿ ನನ್ನಿಂದ ಮಾಡಲ್ಪಟ್ಟಿದೆ.

ಪೃಥುವಿರಚಿತ ಮನ್ಯೈಃ ಶಾಸ್ತ್ರಮೇತತ್ಸ ಮಸ್ತಂ ।
ತದನು ಲಘುಮಯೇದಂ ತತ್ಪ್ರವೇಶಾರ್ಥ ಮೇವಮ್ ॥
ಕೃತಮಿಹ ಹಿ ಸಮರ್ಥಂ ಧೀವಿಷಾಣಾ ಮಲತ್ವೇ ।
ಮಮಯದಿಹ ಯದುಕ್ತಂ ಸಜ್ಜನೈಃ ಕ್ಷಮ್ಯತಾಂತತ್ ॥೪೩॥

ಜ್ಯೋತಿಶ್ಶಾಸ್ತ್ರವೆಲ್ಲವನ್ನೂ ಬೇರೆಯವರಿಂದ ವಿಸ್ತಾರವಾಗಿ ರಚಿಸಲ್ಪಟ್ಟಿದೆ. ಅವರು ಹೇಳಿದು ದನ್ನೇ ಸಂಕ್ಷೇಪವಾಗಿ ಸಂಗ್ರಹಿಸಿ—"ಹೋರಾಶಾಸ್ತ್ರ"ವೆಂಬ ಬೃಹಜ್ಜಾತಕವು ನನ್ನಿಂದ ಮಾಡ ಲ್ಪಟ್ಟಿದೆ ಬುದ್ಧಿಯ ಅಲ್ಪತ್ವದಿಂದ ಸಮರ್ಥವಾದ ಈ ಗ್ರಂಥದಲ್ಲಿ ನನ್ನಿಂದ ವಿವರವಾಗಿ ಶುದ್ಧವಾಗಿ ಹೇಳಲ್ಪಡದೆಯಿದ್ದಲ್ಲಿ ಅದನ್ನು ಸತ್ಪುರುಷರು ಕ್ಷಮಿಸಲ್ಪಡುವುದು.

ಗ್ರಂಥಸ್ಯ ಯತ್ಪ್ರಚರತೋಽಸ್ಯ ವಿನಾಶಮೇತಿ ।
ಲೇಖ್ಯಾ ಬಹುಶ್ರುತ ಮುಖಾಧಿಗಮ ಕ್ರಮೇಣ ॥
ಯದ್ವಾಮಯಾ ಕುಕೃತ ಮಲ್ಪಮಿಹಾ ಕೃತಂ ವಾ ।
ಕಾರ್ಯಂ ತದತ್ರ ವಿದುಷಾ ಪರಿಹೃತ್ಯರಾಗಮ್ ॥೪೪॥

ಈ ಗ್ರಂಥದ ಪ್ರಚಾರವಾಗುವಾಗ, ಬರೆಯುವಾಗ, ಒಬ್ಬರಿಂದೊಬ್ಬರಿಗೆ ಹೇಳುವಾಗ ಅಥವಾ ನಾನು ರಚಿಸಲ್ಪಡುವಾಗ ವಿಶೇಷ ಸಂಕ್ಷೇಪವಾಗಿ ಭಾವಾರ್ಥವು ತಿಳಿಯದೇ ಹೋಗಬಹುದು ಈ ವಿಷಯದಲ್ಲಿ ಅನೇಕ ಶಾಸ್ತ್ರವೇತ್ತರುಗಳಾದ ವಿದ್ವಾಂಸರು ರಾಗಮತ್ಸರಗಳನ್ನು ಬಿಟ್ಟು ಈ ಗ್ರಂಥವನ್ನು ಕ್ರಮವಾಗಿ ತಿಳಿಯುವಂತೆ ಶುದ್ಧವಾಗಿರುವಂತೆ ಮಾಡತಕ್ಕದ್ದು.

ಆದಿತ್ಯದಾಸ ತನಯಸ್ತದ ವಾಪ್ತ ಬೋಧಃ ।
"ಕಾಪಿತ್ಥಕೇ" ಸವಿತೃಲಬ್ಧ ವರಪ್ರಸಾದಃ ॥
ಆವಂತಿಕೋ ಮುನಿಮತಾನ್ಯ ವಲೋಕ್ಯಸಮ್ಯ ।
ಗ್ಘೋರಾಂ ವರಾಹ ಮಿಹಿರೋ ರುಚಿರಾಂ ಚಕಾರ ॥೪೫॥

ಆದಿತ್ಯನ ದಾಸರಾದ ಬ್ರಾಹ್ಮಣೋತ್ತಮರ ಮಗನಾಗಿ ಅವರಿಂದಲೇ ಜ್ಯೋತಿಶ್ಶಾಸ್ತ್ರ ಜ್ಞಾನವನ್ನು ಪಡೆದು ಕಪಿತ್ಥವನದಲ್ಲಿ ತಪವನ್ನಾಚರಿಸಿ ಸೂರ್ಯೋಪಾಸನೆಯಿಂದುಂಟಾದ ವರಪ್ರಸಾದದಿಂದ ಆವಂತಿಕಾ (ಉಜ್ಜಯಿನಿ) ನಗರದಲ್ಲಿ ವಾಸವಾಗಿರುವ ಶ್ರೀ ವರಾಹಮಿಹಿರಾಚಾರ್ಯರು ಅನೇಕ ಮಹರ್ಷಿ ಗಳಿಂದ ರಚಿಸಲ್ಪಟ್ಟ ಶಾಸ್ತ್ರಗಳನ್ನು ನೋಡಿ ಸುಲಭವಾಗಿ ತಿಳಿಯುವಂತೆ ಹೋರಾಶಾಸ್ತ್ರವನ್ನು ರಚಿಸಿದರು. "ಕಾಪಿಷ್ಠಲಃ ಕಾಪಿಷ್ಠಲ ಋಷಿಗೋತ್ರದಲ್ಲಿ ಹುಟ್ಟಿದವನೂ ಎಂತ ಪಾಠಾಂತರವಿದೆ."

ದಿನಕರ ಮುನಿ ಗುರುಚರಣ ।
ಪ್ರಣಿಪಾತಕೃತ ಪ್ರಸಾದ ಮತಿನೇದಮ್ ॥
ಶಾಸ್ತ್ರ ಮುಪಸಂಗೃಹೀತಂ ।
ನಮೋಽಸ್ತು ಪೂರ್ವ ಪ್ರಣೇತೃಭ್ಯಃ ॥ ೪೬ ॥

॥ ಇತಿ ಶ್ರೀ ವರಾಹಮಿಹಿರಾಚಾರ್ಯ ವಿರಚಿತ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರೇ ದ್ರೇಕ್ಕಾಣ ವರ್ಣನಂ ತಥಾ ಉಪಸಂಹಾರ ನಿರೂಪಣಂ ನಾಮ ಪಂಚವಿಂಶೋಽಧ್ಯಾಯಃ ॥

ಸೂರ್ಯಾದಿ ಸರ್ವ ಗ್ರಹರಿಗೂ ವಸಿಷ್ಠಾದಿ ಮುನಿಗಳಿಗೂ ಗುರುವಾಗಿರುವ ತನ್ನ ತಂದೆಯವರ ಚರಣಗಳಿಗೂ ನಮಸ್ಕಾರ ಮಾಡಿ ಅವರ ಕೃಪಾನುಗ್ರಹದಿಂದ ಉಂಟಾದ ಬುದ್ಧಿಯಿಂದ (ಜ್ಞಾನ) ಈ ಶಾಸ್ತ್ರದ ಮಹತ್ಕಾರ್ಯವು ನನ್ನಿಂದ ಸಂಕ್ಷೇಪವಾಗಿ ಸಂಗ್ರಹಿಸಲ್ಪಟ್ಟಿತು. ಪೂರ್ವ ಶಾಸ್ತ್ರಕರ್ತರೆಲ್ಲರಿಗೂ ನಮಸ್ಕಾರಗಳು.

॥ ದ್ರೇಕ್ಕಾಣ ವರ್ಣನ ಮತ್ತು ಉಪಸಂಹಾರವೆಂಬ ಇಪ್ಪತ್ತೈದನೇಯ ಅಧ್ಯಾಯವು ॥

ವೇದ ಖಂ ನಂದ ಭೂ ( ೧೯೦೪) ಶಾಕೇ ದುಂದುಭೌವತ್ಸರೇ ತಥಾ ।
ಶ್ರಾವಣೇ ಶುಕ್ಲ ಪಕ್ಷಸ್ಯ ಪಂಚಮ್ಯಾಂ ಭಾನುವಾಸರೇ ॥
ಗ್ರಂಥಃ ಪೂರ್ಣೋ ಭವತ್ ಸೂರ್ಯಗುರ್ವಾದೀನಾಂ ಪ್ರಸಾದತಃ ।
ಭೂಯಾತ್ ಲೋಕಹಿತಾರ್ಥಂಚ ಪ್ರೀಯತಾಂಮೇಜನಾರ್ದನಃ ॥

॥ ಇತಿ ಶ್ರೀ ಬೃಹಜ್ಜಾತಕಾಖ್ಯ ಹೋರಾಶಾಸ್ತ್ರಮ್ ॥

## ॥ ಸಂಪೂರ್ಣಂ ॥

॥ ಶ್ರೀರಸ್ತು ॥

# ॥ ಶ್ಲೋಕಾನುಕ್ರಮಣಿಕಾ ॥

| ಶ್ಲೋಕಗಳು | ಅಧ್ಯಾಯ | ಶ್ಲೋಕ ಸಂಖ್ಯೆ |
|---|---|---|
| ಕಲಿಲಘನಾಂಕುರ | ೪ | ೧೬ |
| ಕಲ್ಯಸ್ವವಿಕ್ರಮ | ೧ | ೧೬ |
| ಕರಭಗಲಃಸಿರಾಲುಃ | ೧೬ | ೨೫ |
| ಕಲ್ಯಾಣರೂಪ | ೧೯ | ೬ |
| ಕಲಶಂಪರಿಗ್ರಹ್ಯ | ೨೫ | ೨೦ |
| ಕಲಾಸ್ವಭಿಜ್ಞಾ | ೨೫ | ೨೯ |
| ಕರ್ಮಾಜೀವ್ಯೋ | ೨೫ | ೩೮ |
| ಕಾಲಾಂಗಾನಿ | ೧ | ೪ |
| ಕಾಲಾತ್ಮಾದಿನಕೃನ್ಮ | ೨ | ೧ |
| ಕಾಂತಃಖೇಲಗತಿಃ | ೧೬ | ೧೬ |
| ಕ್ರಿಯತಾವ್ರುರು | ೧ | ೮ |
| ಕ್ರಿಯಃಶಿರೋವಕ್ತ್ರ | ೩ | ೩ |
| ಕಿಂತ್ವತ್ರಭಾಂಶ | ೭ | ೧೨ |
| ಕೀರ್ತ್ಯಾಯುತಶ್ಚ | ೧೨ | ೧೬ |
| ಕಿನ್ನರೋಪಮ | ೨೫ | ೩೦ |
| ಕುಜರವಿಜ | ೧ | ೭ |
| ಕುಜೇಂದುಹೇತು | ೪ | ೧ |
| ಕುಜೇತುಂಗೇರ್ಕೇ | ೧೧ | ೫ |
| ಕುಲಸಮಕುಲಮುಖ್ಯ | ೧೯ | ೧ |
| ಕುಂಚಿತಲೂನಕಚಾ | ೨೫ | ೪ |
| ಕ್ರೂರಸೌಮ್ಯ | ೧ | ೧೧ |
| ಕ್ರೂರದೃಕ್ ತರುಣ | ೨ | ೯ |
| ಕ್ರೂರಗ್ರಹೈಃ | ೩ | ೧ |
| ಕ್ರೂರೈಃಶಶಿನ | ೪ | ೮ |
| ಕ್ರೂರರ್ಕ್ಷಗತಾ | ೫ | ೭ |
| ಕೂಟಸ್ತ್ರ್ಯಾಸವ | ೧೪ | ೨ |
| ಕ್ರೂರೇಷ್ವಮೇ | ೨೨ | ೧೪ |
| ಕ್ರೂರಃಕಲಾಜ್ಞ | ೨೫ | ೩ |
| ಕೂರ್ಚಿನರೋಹಾಟಕ | ೨೫ | ೨೭ |
| ಕೇಚಿತ್ತು ಹೋರಾ | ೧ | ೧೨ |
| ಕೇಂದ್ರಾತ್ಪರಂ ಪಣಪರಂ | ೧ | ೧೮ |
| ಕೇಚಿಚ್ಛಶಶಾಂಕಾ | ೨೪ | ೫ |
| ಕೋಣೋದಯೇ | ೨೧ | ೪ |

ಖ—೩

| ಶ್ಲೋಕಗಳು | ಅಧ್ಯಾಯ | ಶ್ಲೋಕ ಸಂಖ್ಯೆ |
|---|---|---|
| ಖಗೇದ್ರೇಕ್ಕಾಣೇ | ೩ | ೫ |
| ಖಲೇನಸಂಯುತಃ | ೬ | ೫ |
| ಖಸ್ಥೇರ್ಕೇವನಿಜೇ | ೨೩ | ೮ |

ಗ—೮

| ಶ್ಲೋಕಗಳು | ಅಧ್ಯಾಯ | ಶ್ಲೋಕ ಸಂಖ್ಯೆ |
|---|---|---|
| ಗತಿಜಪಿರಿಪ್ರು | ೨೩ | ೧೫ |
| ಗ್ರಂಥಸ್ಯಯತ್ | ೨೫ | ೪೪ |
| ಗುರುಶಶಿಸಹಿತೇ | ೭ | ೧೪ |

| ಶ್ಲೋಕಗಳು | ಅಧ್ಯಾಯ | ಶ್ಲೋಕ ಸಂಖ್ಯೆ |
|---|---|---|
| ತ್ರಿಕೋಣಗೇಜ್ಞೇ | ೪ | ೧೭ |
| ತಿಗ್ಮಾಂಶುರ್ಜನಯ | ೧೪ | ೧ |
| ತ್ರಿದಶತ್ರಿಕೋಣ | ೨ | ೧೩ |
| ತ್ರಿಂಶತ್ಸರೂಪಾ | ೧೩ | ೪ |
| ತೀಕ್ಷ್ಣಃಸ್ಥೂಲಹನು | ೧೬ | ೧೯ |
| ದ—೨೨ | | |
| ದಶಾಸುಶಸ್ತಾಸು | ೮ | ೧೯ |
| ದಗ್ಧೇಶಕಟೇ | ೨೫ | ೩೨ |
| ದಹನಜಲವಿಮಿಶ್ರೈ | ೨೩ | ೧೩ |
| ದೃಕ್‌ಸಂಸ್ಥಾವಸಿತ | ೨೨ | ೭ |
| ದ್ವಾವಿಂಶಕಥಿತಸ್ತು | ೨೩ | ೧೧ |
| ದಾತಾನ್ಯಕಾರ್ಯ | ೧೨ | ೧೮ |
| ದಾಂತಃಸುಖಿ | ೧೬ | ೪ |
| ದ್ವ್ಯಾದ್ಯಾಯಾಷ್ಟ | ೯ | ೪ |
| ದಿನಕರರುಧಿರೌ | ೨೦ | ೬ |
| ದಿನಕರಮುನಿ | ೨೫ | ೪೬ |
| ದಿಕ್ಸ್ವದ್ಯಾಷ್ಟಮದಾ | ೯ | ೫ |
| ದ್ವಿಭಾರ್ಯೋರ್ಧೀ | ೧೬ | ೪೩ |
| ದಿವಾಕರೇಂದ್ವೋಃ | ೪ | ೪ |
| ದಿವಾರ್ಕಶುಕ್ರೌ | ೪ | ೫ |
| ದಿವಾರಾತ್ರಿಪ್ರಸೂತಂ | ೨೪ | ೧೩ |
| ದ್ವಿತ್ರಿ ಚತುರ್ದಶ | ೨೪ | ೧೬ |
| ದ್ವಿಪ ಸಮುಕಾಯ | ೨೫ | ೬ |
| ದುಷ್ಟಾಪುನರ್ಭೂಃ | ೨೨ | ೪ |
| ದ್ಯುತರ್ಣಾಪಾನರತಾ | ೧೬ | ೩೫ |
| ದ್ರೇಕ್ಕಾಣ ಹೋರಾ | ೧ | ೯ |
| ದೇವಾಂಬ್ವಗ್ನಿ ವಿಹಾರ | ೨ | ೧೨ |
| ದೇವಬ್ರಾಹ್ಮಣ | ೧೬ | ೨೧ |
| ಧ—೨ | | |
| ಧನವಿರಹಿತಃ | ೧೨ | ೧೯ |
| ಧನುರ್ಧರಸ್ಯಾಂತ | ೪ | ೧೬ |
| ನ—೧೬ | | |
| ನ ಕುಂಭಲಗ್ನಂ | ೧೯ | ೩ |
| ನೃಪಕೃತ್ಯಕರೋತ್ | ೧೬ | ೪೨ |
| ನರಪತಿ ಸತ್ಕೃತಾ | ೧೬ | ೩೨ |
| ನವದಿಗ್ವಸವ | ೧೨ | ೧ |
| ನಲಗ್ನಮಿಂದುಂಚ | ೫ | ೬ |
| ನ್ಯಲಗ್ನಗಂ ಪ್ರೇಕ್ಷ್ಯಕುಜಃ | ೫ | ೧೨ |
| ನವಮಾಯ ತೃತೀಯ | ೨೧ | ೧೧ |

| ಶ್ಲೋಕಗಳು | ಅಧ್ಯಾಯ | ಶ್ಲೋಕ ಸಂಖ್ಯೆ |
|---|---|---|
| ನೀಚೇಕೋರ್ಧ್ವಂ | ೭ | ೨ |
| ನೀಚಾರಿಭಾಂಶೇ | ೮ | ೭ |
| ನೀಚೋಪಘಟೇ | ೧೬ | ೩೧ |
| ನಿತ್ಯಲಾಲಯತಿ | ೧೬ | ೨೪ |
| ನಿಶಿಶಶಿಕುಜಸೌರಾ | ೨ | ೨೧ |
| ನಿಃಸ್ವಃಕ್ಲೇಶಸಯೋ | ೧೬ | ೩೪ |
| ನಿಧನಾರಿಧನ | ೨೧ | ೧೦ |
| ನೇಷ್ಟಾಯೋಗಾ | ೨೫ | ೩೯ |
| ನೌಕೂಟಚ್ಛತ್ರ | ೧೨ | ೮ |
| ಪ—೨೮ | | |
| ಪತ್ರಮೂಲ ಫಲ | ೨೫ | ೧೦ |
| ಪ್ರಥಿತಶ್ಚತುರೋ | ೧೬ | ೨೮ |
| ಪದ್ಮಾರ್ಚಿತಾ ಮೂರ್ಧನಿ | ೨೫ | ೧೧ |
| ಪ್ರಧುಲಚಿಪಿಟ | ೨೫ | ೨೪ |
| ಪ್ರಧುವಿರಚಿತ | ೨೫ | ೪೩ |
| ಪರವಿಭವ | ೧೩ | ೮ |
| ಪರಕರ್ಮಕೃತ್ | ೧೬ | ೩೮ |
| ಪರಯುವತಿರತ | ೧೬ | ೪೧ |
| ಪರುಷವಚನೋ | ೨೧ | ೧೭ |
| ಪ್ರಶ್ನಾಸ್ತಿಥಿರ್ಭಂ | ೨೫ | ೪೦ |
| ಪ್ರಥಂಬನಯನ | ೧೬ | ೨೨ |
| ಪ್ರಾಚ್ಯಾದಿಗ್ಗೃಹೇ | ೫ | ೨೧ |
| ಪಾಕಸ್ವಾಮಿನಿ | ೮ | ೧೦ |
| ಪಾಪಾಬಲಿನಃ ಸ್ವಭಾವ | ೩ | ೨ |
| ಪಾಪದ್ವಯಮಧ್ಯ | ೪ | ೭ |
| ಪಾಪೇಕ್ಷಿತೆತುಹಿನ | ೫ | ೧೫ |
| ಪಾಪಾಉದಯಾಸ್ತ | ೬ | ೩ |
| ಪ್ರಾರಬ್ಧಾಹಿಮಗೌ | ೮ | ೧೧ |
| ಪ್ರಾಹುರ್ಯವನಾಃ | ೧೧ | ೧ |
| ಪಾಪಾಲೋಕಿತ | ೨೧ | ೭ |
| ಪಾಪೇಸ್ತೇನವಮ | ೨೨ | ೧೬ |
| ಪಿತುರ್ಜಾತ | ೫ | ೧ |
| ಪಿತೃಮಾತೃಗೃಹೇಷು | ೫ | ೧೬ |
| ಪ್ರಿಯಭೂಷಣ | ೧೬ | ೧ |
| ಪುಷ್ಪಪೂರ್ಣೇನ | ೨೫ | ೧೬ |
| ಪುರುಷಪ್ರಗೃಹೀತ | ೨೫ | ೧೭ |
| ಪೂರ್ವಶಾಸ್ತ್ರಾನು | ೧೨ | ೬ |
| ಪೂರ್ಣೇಶಶಿನಿ | ೫ | ೮ |
| ಬ—೧೦ | | |
| ಬಂಧ್ವಸ್ತಕರ್ಮ | ೨೩ | ೭ |

| ಶ್ಲೋಕಗಳು | ಅಧ್ಯಾಯ | ಶ್ಲೋಕ ಸಂಖ್ಯೆ |
|---|---|---|
| ಬಂಧಾದ್ದ್ವೀ ನವಮ | ೨೩ | ೪ |
| ಬಲಿವತಿರಾಶೌ | ೧೬ | ೨೭ |
| ಬೃಹತ್ತನುಃ ಪಿಂಗಳ | ೨ | ೧೦ |
| ಬಹುಭುಕ್ ಪರದಾರ | ೧೬ | ೨ |
| ಬುಧಸೂರ್ಯಸುತೌ | ೨ | ೬ |
| ಬಹುಭೃತ್ಯಧನೋ | ೧೬ | ೬ |
| ಬೌಧ್ಯಾಂದೌತ್ಯಸು | ೮ | ೧೫ |
| ಬೌಧೇಸಹಸ್ತ | ೧೬ | ೩೩ |
| ಬೌಧೇಹಿರಂಗಚರ | ೧೭ | ೬ |
| **ಭ—೫** | | |
| ಭೃಷ್ಟಸ್ಯತುಂಗಾ . | ೮ | ೬ |
| ಭಾರ್ಯಾಭರಣಾರ್ಥ | ೨೫ | ೧೨ |
| ಭೂಯೋಭಿಃ | ೧ | ೨ |
| ಭೂಷಿತೋವರುಣ | ೨೫ | ೯ |
| ಭೌಮಸ್ಯಾಂ ವಿಮರ್ದ | ೮ | ೧೪ |
| **ಮ—೨೨** | | |
| ಮತ್ಸ್ಯೌಘಟೀ | ೧ | ೫ |
| ಮಧುಪಿಂಗಳ | ೨ | ೮ |
| ಮಂದರ್ಕ್ಷಾಂಶೆ | ೫ | ೧೭ |
| ಮಂದಸ್ಯಾಕ್ರಿಸುತಾಯ | ೯ | ೭ |
| ಮದನ ವಶಗತೋ | ೨೨ | ೧೨ |
| ಮಂದೇಬ್ಜಗತೇ | ೫ | ೧೧ |
| ಮಂದೋಲಸ | ೨ | ೧೧ |
| ಮಂದೇ ಕರ್ಕಟಕೇ | ೨೩ | ೩ |
| ಮಧ್ಯೇವಯಸಃ | ೨೦ | ೫ |
| ಮತಿವಿಕ್ರಮವಾನ್ | ೧೮ | ೨ |
| ಮಯಯವನಮಣಿತ್ಥ | ೭ | ೧ |
| ಮೃಗಮುಖೇರ್ಕ | ೧೧ | ೧೦ |
| ಮೃತ್ಯುರ್ಮೃತ್ಯುಗ್ರಹ | ೨೩ | ೧ |
| ಮನುಷ್ಯವಕ್ತ್ರೋ | ೨೫ | ೨೫ |
| ಮನೋರಮಾಚಂಪಕ | ೨೫ | ೨೬ |
| ಮಿತ್ರಾರಿಸ್ವಗೃಹ | ೧೦ | ೪ |
| ಮೂಕೋನ್ಮತ್ತ | ೧೮ | ೪ |
| ಮೂರ್ತಿತ್ವೇಪರಿಕಲ್ಪಿತ | ೧ | ೧ |
| ಮೂರ್ಷೋಟನ | ೧೬ | ೪೪ |
| ಮೂಲಾದಿಸ್ನೇಹ | ೧೪ | ೩ |
| ಮೇಷಕುಳೀರ | ೫ | ೨೦ |
| ಮೇಷೂರಣಾಯ | ೧೧ | ೧೮ |
| **ಯ—೧೧** | | |
| ಯೆಜ್ಞಾರ್ಥಭಾಕ್ | ೧೨ | ೧೩ |

ಹ—೧೧



ಕ್ಷ—೩

**॥ ಇತಿ ಅಕಾರಾದಿ ಶ್ಲೋಕಾನುಕ್ರಮಣಿಕಾ ॥**

# ॥ ವಿಷಯಾನುಕ್ರಮಣಿಕೆ ॥

**ಇತಿ ಅನುಕ್ರಮಣಿಕಾ**

ಓಂ

**॥ ತತ್ಸದ್ಬ್ರಹ್ಮಕೃಷ್ಣಾರ್ಪಣಮಸ್ತು ॥**

# ನಿವೇದನ

ಪ್ರಾಚೀನ ಭಾರತದ ಋಷಿಮುನಿಗಳ ಪ್ರಕಾಂಡ ಪಾಂಡಿತ್ಯದ ದ್ಯೋತಕವಾಗಿ ಸಮಗ್ರ ವಿಶ್ವಕ್ಕೇನೇ ಒಂದು ಬೆಳಕಿಂಡಿಯಾಗಿ ಉಳಿದು ನಿಂತಿರುವ ಭಾರತೀಯ ಜ್ಯೋತಿಷ್ಯ ಶಾಸ್ತ್ರದ ಪ್ರಮುಖ ಆಧಾರಗ್ರಂಥಗಳು ಲುಪ್ತವಾಗುತ್ತಿರುವ ಇಂದಿನ ದಿನಗಳಲ್ಲಿ ಈ ಶಾಸ್ತ್ರದ ಆಳವಾದ ಅಧ್ಯಯನ ಗೈಯ್ಯಲು ಹಂಬಲಿಸುವ ಜಿಜ್ಞಾಸುಗಳು ಅಪೂರ್ವವಾಗುತ್ತಿದ್ದಾರೆ. ಅಂತಹ ಕೆಲವೇ ಕೆಲವು ಜಿಜ್ಞಾಸುಗಳಿಗಾದರೂ ತಮ್ಮ ಅಧ್ಯಯನಕ್ಕೆ ಬೇಕಾದ ಸಾಕ್ಷಾಧಾರ ಗ್ರಂಥಗಳು ಸುಲಭದಲ್ಲಿ ದೊರೆಯುವುದು ದುರ್ಲಭವೇ ಸರಿ ಪ್ರಸ್ತುತ ಗ್ರಂಥದ ಲೇಖಕರು ಅಂತಹ ಎಡರುತೊಡರುಗಳನ್ನು ಕಂಡುಂಡು ದೈವಾನುಗ್ರಹದಿಂದ ತನಗೆ ದೊರೆತ ಪ್ರಕಾಂಡ ಪಂಡಿತರಾಗಿದ್ದ ತನ್ನ ಗುರುಗಳ ಬಳಿ ಆಳವಾದ ಅಧ್ಯಯನ ದೊಂದಿಗೆ ಅವರ ಸೇವೆಯನ್ನು ಕೊನೆಯ ತನಕ ಕೈಗೊಂಡು ಅವರ ಪ್ರೀತಿ ಅನುಗ್ರಹದಿಂದ ಸಾವಿರಾರು ಶ್ಲೋಕಗಳ ಮೂಲಾರ್ಥ ಗೂಢಾರ್ಥಗಳನ್ನು ಅವುಗಳ ಪ್ರಾತ್ಯಕ್ಷಿಕತೆಯನ್ನು ಅಭ್ಯಸಿಸಿ ಗಣಿತಾದಿ ಕೋಷ್ಟಕಗಳೊಂದಿಗೆ ಸುಲಭ ಗ್ರಾಹ್ಯವಾಗುವಂತೆ ತನ್ನ ಮುಂದಿನ ಪೀಳಿಗೆಗಾದರೂ ಪ್ರಯೋಜನಕಾರಿಯಾಗಲಿ ಎಂಬ ಸದಿಚ್ಛೆಯಿಂದ ಶ್ರೀ ವರಾಹಮಿಹಿರಾಚಾರ್ಯರ "ಬೃಹಜ್ಜಾತಕ–ಹೋರಾಶಾಸ್ತ್ರ"ವನ್ನು ದೀರ್ಘಕಾಲದ ಸತತ ಯತ್ನದಿಂದ ಕನ್ನಡಾನುವಾದಕ್ಕಿಳಿಸಿದರು. ಗ್ರಂಥದ ಮುದ್ರಣದ ಖರ್ಚುವೆಚ್ಚದ ಪ್ರಕಾರ ಬೆಲೆಯನ್ನು ನಿರ್ಧರಿಸುವುದಾದಲ್ಲಿ ಈಗಿನ ಬೆಲೆಗಿಂತ ವಿಶೇಷ ಹೆಚ್ಚು ಬೆಲೆಯನ್ನು ನಿಗದಿಸಬೇಕಾಗುತ್ತಿತ್ತು ಆದರೆ ಲೇಖಕರ ಆದರಾಭಿಮಾನಿಗಳು, ಹೃತ್ಪೂರ್ವಕ ನೀಡಿದ ತನು,ಮನ,ಧನ ಸಹಾಯ ದಿಂದಾಗಿ ಜ್ಯೋತಿಶ್ಶಾಸ್ತ್ರಾಸಕ್ತ ಜಿಜ್ಞಾಸುಗಳಿಗೆ ಕಡಿಮೆ ಬೆಲೆಯಲ್ಲಿ ಈ ಗ್ರಂಥ ದೊರಕುವ ಅವಕಾಶವಾಯಿತು. ಜ್ಯೋತಿಷ್ಯ ಶಾಸ್ತ್ರದ ಜಿಜ್ಞಾಸುಗಳು ಲೇಖಕರ ಹಲವಾರು ದಶಕಗಳ ಅನುಭವವನ್ನು ಶ್ಲೋಕಾರ್ಥ ಗಣಿತಾದಿಗಳೊಂದಿಗೆ ಭಟ್ಟಿಯಿಳಿಸಿರುವ ಈ ಅಪೂರ್ವ ಗ್ರಂಥವನ್ನು ಆಳವಾಗಿ ಅಭ್ಯಸಿಸಿ ಜನಕೋಟಿಗೆ ಮಾರ್ಗದರ್ಶನವೀಯಲು ಉಪಯೋಗಿಸಿ ಕೊಂಡಲ್ಲಿ ಲೇಖಕರ ಪರಿಶ್ರಮ ಸಾರ್ಥಕವಾದೀತು ಅಂತಾಗಲೆಂದು ಹಾರೈಕೆ

---

**Kadri Srinivasa Sharma**
Astrologer & Astronomer
Post SIDDAPUR–576 229
COONDAPUR TALUK, S.K.

ಬೆಲೆ: ರೂ. 85/-

PRINTED AT MANIPAL POWER PRESS MANIPAL